# ಕನ್ನಡ ಹಸ್ತಪ್ರತಿಶಾಸ್ತ್ರ

ಎಂ. ಎಂ. ಕಲಬುರ್ಗಿ
ಕನ್ನಡ ಪ್ರಾಧ್ಯಾಪಕರು
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.



ಸ್ನೇಹ ಪ್ರಕಾಶನ, ಬೆಂಗಳೂರು
೧೯೯೩

KANNADA HASTAPRATISHASTRA :
By Dr. M. M. Kalburgi M.A.,Ph.D. Institute of Kannada Studies, Karnataka University, Dharwad and Published by: Sneha Prakashan, Bangalore. Printed by : Allama Mudranalaya, Gadag.
Pages 128 + VIII Price 25/- Copies. 1100



ಪ್ರಕಾಶಕರು :
ಸ್ನೇಹ ಪ್ರಕಾಶನ, ಬೆಂಗಳೂರು



೧೧೦೦ ಪ್ರತಿಗಳು





ಬೆಲೆ : ೨೫ ರೂಪಾಯಿಗಳು

ಮುದ್ರಣ :
ಅಲ್ಲಮ ಮುದ್ರಣಾಲಯ
ಬಸವೇಶ್ವರ ನಗರ, ಗದಗ-೫೮೨ ೧೦೧
ಪ್ರೊ : ಪಿ. ಆರ್. ಜಂಗಮನಿ ಬಿ.ಎ.,ಬಿ.ಕಾಂ.

# ಅರಿಕೆ

ಗ್ರಂಥಸಂಪಾದನಶಾಸ್ತ್ರ, ನಾಮಶಾಸ್ತ್ರ, ಸಂಶೋಧನಶಾಸ್ತ್ರ –ಈ ಆಧುನಿಕ ಶಾಸ್ತ್ರಗಳನ್ನು ಕನ್ನಡಕ್ಕೆ ನೀಡಿದ ನಾನು, ಈ ಕೃತಿಯ ಮೂಲಕ 'ಹಸ್ತಪ್ರತಿಶಾಸ್ತ್ರ'ವನ್ನು ನೀಡುತ್ತಲಿದ್ದೇನೆ. ಇಂಥ ಪುಸ್ತಕಗಳನ್ನು ಬರೆಯುವಾಗ ನಾನು ಇನ್ನೊಬ್ಬರ ಬರವಣಿಗೆಯನ್ನು ಅವಲಂಬಿಸುವುದು ಇಲ್ಲವೆನ್ನುವಷ್ಟು ಕಡಿಮೆ. ನನ್ನ 'ಅನುಭವ'ವೇ ನನಗೆ ಆಕರ, ಆಧಾರ. ಇದನ್ನು ಬಳಸಿಕೊಂಡು ಸಿದ್ಧಾಂತಗಳನ್ನು ಬೆಳೆಸಿಕೊಳ್ಳುವುದು ನನ್ನ ನಿಲವು. ಈ ನಿಲವಿನ ನೆಲೆಯಲ್ಲಿ ನನ್ನ ಶಾಸ್ತ್ರಕೃತಿಗಳು ಸೃಷ್ಟಿಯಾಗುತ್ತವೆ. ಇವು ಬೇರೆಯವರ ಇಂಥ ಕೃತಿಗಳಿಂದ ಭಿನ್ನವಾಗುವುದು, ಈ ಕಾರಣಕ್ಕಾಗಿ.

೧೯೭೨ರಲ್ಲಿ ನಾನು ಬರೆದ 'ಕನ್ನಡ ಗ್ರಂಥಸಂಪಾದನಶಾಸ್ತ್ರ'ದ ಒಡಲಲ್ಲಿ 'ಹಸ್ತಪ್ರತಿಶಾಸ್ತ್ರ'ದ ಬೀಜ ಬಿತ್ತಲಾಗಿದ್ದಿತು. ೧೯೮೧ರಲ್ಲಿ ಬೆಂಗಳೂರಿನ ಬಿ.ಎಂ.ಶ್ರೀ. ಪ್ರತಿಷ್ಠಾನ ಯೋಜಿಸಿದ್ದ ವಿಚಾರ ಸಂಕಿರಣದಲ್ಲಿ ಮಂಡಿಸಿದ್ದ 'ಹಸ್ತಪ್ರತಿಶಾಸ್ತ್ರ: ವಿವಿಧ ಮುಖಗಳು' ಹೆಸರಿನ ನನ್ನ ಲೇಖನದಲ್ಲಿ ಈ ಶಾಸ್ತ್ರದ ಭ್ರೂಣ ಆಕಾರ ಪಡೆದಿದ್ದಿತು. ಅದು ಈಗ ಸ್ವತಂತ್ರ ಕೃತಿರೂಪದಲ್ಲಿ ಅವತರಿಸುತ್ತಿದೆ. "ಈ ವರೆಗೆ (ಹಸ್ತಪ್ರತಿ)ಶಾಸ್ತ್ರರೂಪದ ಪೂರ್ಣಪ್ರಮಾಣದ ಗ್ರಂಥ ಪ್ರಕಟಗೊಂಡಿಲ್ಲ" ಎಂಬ ವಿದ್ವಾಂಸರ ವಿಷಾದಕ್ಕೆ ಉತ್ತರವಾಗಿ ಹೊರಬರುತ್ತಲಿರುವ ಈ ಕೃತಿ, ಕನ್ನಡದಲ್ಲಿ ಪ್ರಥಮ ಪ್ರಯತ್ನವೆಂದೇ ಹೇಳಬೇಕು.

ಯಂತ್ರಪ್ರತಿಗಳ ಉತ್ಪಾದನೆ ಕಾರಣವಾಗಿ ಹಸ್ತಪ್ರತಿಗಳ ಲೇಖನ ಮತ್ತು ವಾಚನಕಾರ್ಯ ಮೂಲೆಗುಂಪಾಯಿತು. ಈ ಸಂಪತ್ತಿನ ಸೃಷ್ಟಿಸ್ವರೂಪ, ಮಹತ್ವಗಳನ್ನಲ್ಲದೆ ಅದನ್ನು ವೈಜ್ಞಾನಿಕವಾಗಿ ರಕ್ಷಿಸುವ-ಬಳಸಿಕೊಳ್ಳುವ ತಿಳಿವಳಿಕೆ, ಅವುಗಳ ಬಳಕೆ ತಪ್ಪಿದ ಇಂದಿನ ಸಂದರ್ಭದಲ್ಲಿ ಮೊದಲಿನಕ್ಕಿಂತ ಹೆಚ್ಚು ಅಗತ್ಯವಾಗಿದೆ.

ನಮ್ಮ ನಾಡಿನಲ್ಲಿ ಏಕಕಾಲಕ್ಕೆ ಅವಳಿ ಮಕ್ಕಳಾಗಿ ಹುಟ್ಟಿದ್ದರೂ 'ಪುರಾತತ್ವ ಇಲಾಖೆ' ಸರಕಾರದ ನೇರ ಆಡಳಿತಕ್ಕೆ ಒಳಪಟ್ಟು ವಿಸ್ತಾರವಾಗಿ ಬೆಳೆಯಿತು. 'ಹಸ್ತಪ್ರತಿ ಇಲಾಖೆ' ಮಾತ್ರ ವಿಶ್ವವಿದ್ಯಾಲಯಗಳ ಆಡಳಿತಕ್ಕೆ ಸಿಕ್ಕು ಒಂದು ಮಿತಿಯಲ್ಲಿ ಉಳಿಯಿತು. ಈ ತಪ್ಪನ್ನು ತಿದ್ದುವ ರೀತಿಯಲ್ಲಿ ಈಗ 'ರಾಜ್ಯ ಕೇಂದ್ರ ಹಸ್ತಪ್ರತಿ ಇಲಾಖೆ'ಯನ್ನು ಕರ್ನಾಟಕ ಸರಕಾರ ಅಸ್ತಿತ್ವಕ್ಕೆ ತರಬೇಕಾಗಿದೆ; ಇದಲ್ಲದೆ ಗ್ರಂಥಾಲಯಶಾಸ್ತ್ರ (Library Science)ದಂತೆ ಹಸ್ತಪ್ರತಿಶಾಸ್ತ್ರ (Manuscriptology)ವೂ ಒಂದು ಶಾಸ್ತ್ರವಾಗಿ ನವೀಕರಣಗೊಳ್ಳಬೇಕಾಗಿದೆ.

ಸಾಮಾಜಿಕ-ಶೈಕ್ಷಣಿಕ ಪ್ರತಿಷ್ಠೆ ಪಡೆಯಬೇಕಾಗಿದೆ. ಈ ಎಲ್ಲ ಆಸೆಗಳನ್ನು ಮುಂದು ಮಾಡಿಕೊಂಡು 'ಕನ್ನಡ ಹಸ್ತಪ್ರತಿಶಾಸ್ತ್ರ' ಹೆಸರಿನ ಈ ಪುಸ್ತಕ ಹೊರಬರುತ್ತಲಿದೆ.

ಈ ವರೆಗೆ ಹಸ್ತಪ್ರತಿಯನ್ನು ಕುರಿತು, ಲೇಖನ ಗ್ರಂಥ ಮತ್ತು ಪಿಎಚ್.ಡಿ. ಪ್ರಬಂಧಗಳು ಪ್ರಕಟವಾಗಿವೆ. ಇವುಗಳಿಗಿಂತ ಭಿನ್ನವಾದ ಉದ್ದೇಶವನ್ನು ಒನ್ನೆಲೆಯಾಗಿಟ್ಟುಕೊಂಡು ಈ ಕೃತಿ ರೂಪಗೊಂಡಿದೆ. ಹಸ್ತಪ್ರತಿಯು ಹುಟ್ಟಿನಿಂದ ಹಿಡಿದು, ಅದು ಹಸ್ತಪ್ರತಿ ಭಾಂಡಾರದಲ್ಲಿ ವಿದ್ವಾಂಸರಿಗೆ ಉಪಯುಕ್ತವಾಗುವ ವರೆಗಿನ ಎಲ್ಲ ನೆಲೆಗಳ ಅಧ್ಯಯನ ಅಂದರೆ ಹಸ್ತಪ್ರತಿಗಳ ಉತ್ಪಾದನೆ, ಪ್ರಸರಣ, ಸಂಗ್ರಹಣ, ವ್ಯವಸ್ಥಾಪನ ಮತ್ತು ಪ್ರಯೋಜನಗಳ ಅಧ್ಯಯನ ಇಲ್ಲಿದೆ. ಕರ್ನಾಟಕದಲ್ಲಿ ಇನ್ನು ಮುಂದೆ ಈ ಅಧ್ಯಯನ ಹೇಗೆ ಬೆಳೆಯಬೇಕು-ಎನ್ನುವುದರ ವಿಚಾರ ವಿನ್ಯಾಸವೂ ಇಲ್ಲಿದೆ. ಹೀಗಾಗಿ ವಿದ್ವಾಂಸರು ಪ್ರಸ್ತುತ ಕೃತಿಯನ್ನು ಆಧರಿಸಿ, ಈ ಶಾಸ್ತ್ರವನ್ನು ಇನ್ನೂ ವಿಸ್ತಾರವಾಗಿ ಬೆಳೆಸುವರೆಂದು ಆಶಿಸುತ್ತೇನೆ.

ತಮ್ಮ ಪ್ರಕಾಶನದ ಮೂಲಕ ಈ ಪುಸ್ತಕವನ್ನು ಪ್ರೀತಿಯಿಂದ ಪ್ರಕಟಿಸಿದ, ಬೆಂಗಳೂರಿನ ಸ್ನೇಹ ಪ್ರಕಾಶನದ ಮಿತ್ರರಿಗೆ, ಉತ್ತಮ ಪ್ರತಿ ಸಿದ್ಧಪಡಿಸುವಲ್ಲಿ ನೆರವಾದ ಡಾ. ಬಿ. ವಿ. ಯಕ್ಕುಂಡಿಮಠ ಅವರಿಗೆ, ಕರಡುಪ್ರತಿಗಳನ್ನು ಒದಗಿಸುವಲ್ಲಿ ಸಹಕರಿಸಿದ ಶ್ರೀ ಸಿ. ಆರ್. ಕಾಡಪ್ಪನವರ ಅವರಿಗೆ, ವಿಶ್ವಾಸದಿಂದ ಅಂದವಾಗಿ ಮುದ್ರಿಸಿದ ಗದುಗಿನ ಅಲ್ಲಮ ಮುದ್ರಣಾಲಯದ ಶ್ರೀ ಪಿ. ಆರ್. ಜಂಗಮನಿ ಅವರಿಗೆ ಕೃತಜ್ಞನಾಗಿದ್ದೇನೆ.

**— ಎಂ. ಎಂ. ಕಲಬುರ್ಗಿ**

# ಪ ರಿ ವಿ ಡಿ

## ಪೀಠಿಕೆ

ಹಸ್ತಪ್ರತಿ/ಹಸ್ತಪ್ರತಿಶಾಸ್ತ್ರ

## ೧.

## ಉತ್ಪಾದನ

ಕೃತಿ–ಪ್ರತಿ–ಕಟ್ಟು, ಲೇಖನಸಾಮಗ್ರಿ, ತಾಳೆಗರಿ–ಕಾಗದ–ಅರಿವೆ–ಹಲಗೆ–ಚರ್ಮ, ಕಂಠ–ಲೇಖನಿ, ಕಪ್ಪು–ಮಸಿ–ಬಳಪ, ಲಿಪಿಕಾರ–ಲಿಪಿ–ಭಾಷೆ, ಗ್ರಂಥವಿನ್ಯಾಸ–ಗ್ರಥನವಿನ್ಯಾಸ.

## ೨.

## ಪ್ರಸರಣ

ವೈದಿಕ–ಜೈನ–ವೀರಶೈವ/ಪ್ರಾಚೀನ ಹಸ್ತಪ್ರತಿ ಭಾಂಡಾರಗಳು : ಜೈನ ಹಸ್ತಪ್ರತಿ ಭಾಂಡಾರಗಳು, ವೀರಶೈವ ಹಸ್ತಪ್ರತಿ ಭಾಂಡಾರಗಳು/ಕನ್ನಡ ಹಸ್ತಪ್ರತಿಗಳ ವಿಷಯ ಸಂಪತ್ತು.

## ೩.

## ಸಂಗ್ರಹಣ

ಸಂಗ್ರಹ ವಿಧಾನ/ಸಂಗ್ರಹದ ಇತಿಹಾಸ/ಆಧುನಿಕ ಹಸ್ತಪ್ರತಿ ಭಾಂಡಾರಗಳು/ ಕನ್ನಡ ಹಸ್ತಪ್ರತಿ ಸೂಚಿಗಳು.

## ೪.

## ವ್ಯವಸ್ಥಾಪನ

ಆಕರಣ ವಿಭಾಗ–ತಾಂತ್ರಿಕ ವಿಭಾಗ–ಸಂರಕ್ಷಣ ವಿಭಾಗ–ಗ್ರಂಥ ಸಂಪಾದನ ವಿಭಾಗ–ಗ್ರಂಥ ಪರಿಚಲನ ವಿಭಾಗ–ಅಧ್ಯಯನ ವಿಭಾಗ–ಗ್ರಂಥಾಲಯ ವಿಭಾಗ–ಯಂತ್ರೋಪಕರಣ ವಿಭಾಗ–ಪ್ರದರ್ಶನ ವಿಭಾಗ–ಸಮಾಲೋಚನ ವಿಭಾಗ–ಸಭಾಗೃಹ ವಿಭಾಗ–ವಿಶ್ರಾಂತಿ ವಿಭಾಗ.

## ೫.

## ಪ್ರಯೋಜನ

ಮುಂದೇನು ? : ಸಂಗ್ರಹಣ–ಸಂರಕ್ಷಣೆ–ಹಸ್ತಪ್ರತಿಶಾಸ್ತ್ರದ ಅಳವಡಿಕೆ–ಗ್ರಂಥ ಸಂಪಾದನ, ಪ್ರಶಸ್ತಿ ಸಂಗ್ರಹ–ಹಸ್ತಪ್ರತಿ ಭಾಂಡಾರದ ನವೀಕರಣ-ಹಸ್ತಪ್ರತಿ ಅಧ್ಯಯನ ತರಬೇತಿ–ರಾಜ್ಯ ಹಸ್ತಪ್ರತಿ ಇಲಾಖೆಯ ಸ್ಥಾಪನೆ.

# ಪೀಠಿಕೆ

ಹಸ್ತಪ್ರತಿ / ಹಸ್ತಪ್ರತಿ ಶಾಸ್ತ್ರ

ಮುದ್ರಣಯಂತ್ರದ ಆವಿಷ್ಕರಣ(೧೪೩೯)ದಿಂದಾಗಿ ಪಶ್ಚಿಮದೇಶಗಳಲ್ಲಿ ಗ್ರಂಥವನ್ನು ಕೈಯಿಂದ ಬರೆಯುವುದು ತಪ್ಪಿ, ಯಂತ್ರದಿಂದ ಮುದ್ರಿಸುವುದು ಆರಂಭವಾಯಿತು.[೧] ಈ ಹೊಸ ಬಗೆಯ ಗ್ರಂಥಗಳಿಂದ ಪ್ರತ್ಯೇಕಿಸಿ ಕರೆಯುವುದರ ಸಲುವಾಗಿ, ಈ ಮೊದಲು ಕೈಯಿಂದ ಬರೆಯುತ್ತಲಿದ್ದ ಗ್ರಂಥಗಳಿಗಾಗಿ Manuscript ಎಂಬ ಪದವನ್ನು ಪಾಶ್ಚಿಮಾತ್ಯರು ಸೃಷ್ಟಿಸಿದರು. ಕೈಯಿಂದ ಬರೆಯುವ ಮೂಲಕ ಏಕಪ್ರತಿಯಾಗಿ ಸೃಷ್ಟಿಯಾಗುತ್ತಲಿದ್ದ ಗ್ರಂಥಗಳು ಈಗ ಬಹುಪ್ರತಿರೂಪದಲ್ಲಿ ಬೆಳಕು ಕಾಣತೊಡಗಿದವು. ಈ ಕ್ರಿಯೆ ಪ್ರಾಚೀನಗ್ರಂಥಗಳ ಪ್ರಸಾರದ ವೇಗ-ವ್ಯಾಪ್ತಿಗಳನ್ನು ಹೆಚ್ಚಿಸಿತು. ಇದರ ಫಲವಾಗಿ ಪ್ರಾಚೀನ ಕೈಬರಹಗಳ ಶೋಧ, ಸಂಗ್ರಹ, ರಕ್ಷಣೆ ಮತ್ತು ಅಧ್ಯಯನಗಳಿಗೆ ಬಹುದೊಡ್ಡ ತಿರುವು ಪ್ರಾಪ್ತವಾಯಿತು. ಮುದ್ರಣಯಂತ್ರ ಕರ್ನಾಟಕವನ್ನು ಪ್ರವೇಶಿಸುವಲ್ಲಿ ಆ ತಿರುವು ಇಲ್ಲಿಯೂ ತಲೆದೋರಿತು.

---

೧. ಜರ್ಮನಿಯ ಜಾನ್ ಗುಟನ್‌ಬರ್ಗ್ ಎಂಬವನು ೧೪೩೯ರಲ್ಲಿ ಮುದ್ರಣಯಂತ್ರವನ್ನು ಮೊದಲು ಶೋಧಿಸಿದ. ೧೪೫೬ರಲ್ಲಿ ಯುರೋಪಿನಲ್ಲಿ ಮೊದಲು ಪ್ರಕಟವಾದ ಪುಸ್ತಕ ಬೈಬಲ್. 'ಗುಟನ್‌ಬರ್ಗ್‌ನ ಬೈಬಲ್' ಎಂದೇ ಇದು ಪ್ರಸಿದ್ಧವಾಯಿತು. ಭಾರತಕ್ಕೆ ಮುದ್ರಣಯಂತ್ರ ಬಂದುದು ೧೫೫೬ ರಲ್ಲಿ.

## ಹಸ್ತಪ್ರತಿ :

ಸ್ವೀಕರಣವೆಂಬುದು ಭಾಷಾಪ್ರಪಂಚದ ಅನಿವಾರ್ಯಕ್ರಿಯೆ. ಇಲ್ಲಿ ತದ್ಭವೀಕರಣ ಕ್ರಿಯೆ ಮತ್ತು ಭಾಷಾಂತರೀಕರಣಕ್ರಿಯೆ ಮುಖ್ಯವಾದುವು. ಈ ಮೇರೆಗೆ ಲ್ಯಾಟಿನ್ನಿನ Manus (= ಕೈ) ಮತ್ತು Scriptum (= ಬರೆವಣಿಗೆ)ಯೆಂಬ ಪದಗಳ ಸಂಯುಕ್ತ ರೂಪವಾದ Manuscriptus (= ಕೈ ಬರೆವಣಿಗೆ) ಎಂಬುದನ್ನು ಇಂಗ್ಲಿಷ್ ಭಾಷೆ Manuscript ಎಂದು ತದ್ಭವೀಕರಿಸಿಕೊಂಡಿತು. ಇದನ್ನು ನಮ್ಮ ವಿದ್ವಾಂಸರು ಕೈಬರೆವಣಿಗೆ, ಹಸ್ತಪ್ರತಿ ಎಂದು ಭಾಷಾಂತರಿಸಿಕೊಂಡರು. ಇವುಗಳಲ್ಲಿ ಸಾರ್ವತ್ರಿಕ ಪ್ರಚಾರ ಪಡೆದ ಪದ 'ಹಸ್ತಪ್ರತಿ'.

ಹಸ್ತಪ್ರತಿಯೆಂದರೆ ಕೈಯಿಂದ ರೂಪಪಡೆದ ಬರವಣಿಗೆಯೆಂದು ಸಾಮಾನ್ಯ ಅರ್ಥ. ಈ ಅರ್ಥದಲ್ಲಿ ಕೈಯಿಂದ ಬರೆದ ಪ್ರಾಚೀನಕಾಲದ ಗ್ರಂಥ, ದಾಖಲೆ, ಶಾಸನಗಳಲ್ಲದೆ, ಅಚ್ಚಿಗಾಗಿ ಸಿದ್ಧಪಡಿಸುವ ಇಂದಿನ ಯಾವುದೇ ಬರವಣಿಗೆ (press copy)ಗಳು ಹಸ್ತಪ್ರತಿಗಳೇ ಆಗಿವೆ. ಈ ನಾಲ್ಕರಲ್ಲಿ ಪ್ರಾಚೀನಕಾಲದ ಗ್ರಂಥಗಳು ಮಾತ್ರ 'ಹಸ್ತಪ್ರತಿ' ಎನಿಸಿಕೊಳ್ಳುತ್ತವೆ. ಮಿಕ್ಕವುಗಳನ್ನು ಕ್ರಮವಾಗಿ ದಾಖಲು ಪ್ರತಿ, ಶಾಸನಪ್ರತಿ, ಮುದ್ರಾಪ್ರತಿ ಎಂದು ಕರೆಯಬಹುದು. 'ಹಸ್ತಪ್ರತಿ' ಎಂಬುದು ಬಹುಪ್ರತಿರೂಪದಲ್ಲಿ ಸಿಗುತ್ತದೆ ಮತ್ತು ಸಾಮಾನ್ಯೀಕೃತ ಬರವಣಿಗೆಯಾಗಿರುತ್ತದೆ. ದಾಖಲೆ ಮತ್ತು ಶಾಸನಗಳು ಏಕಪ್ರತಿರೂಪದಲ್ಲಿ ಸಿಗುತ್ತವೆ ಮತ್ತು ಘಟನೆಯ ನಿರ್ದಿಷ್ಟ ನಿರೂಪಣೆಯಾಗಿರುತ್ತವೆ. ಮುದ್ರಾಪ್ರತಿ (press copy) ಅಚ್ಚಿಗಾಗಿ ಸಿದ್ಧಪಡಿಸಿದ ಯಾವುದೇ ಬಗೆಯ ನಕಲುಪ್ರತಿಯಾಗಿರುತ್ತದೆ. ಈ ವಿಭಿನ್ನಲಕ್ಷಣ ಗಳನ್ನು ಗಮನಿಸಿದರೆ ಯಾವ ಕಾರಣಕ್ಕಾಗಿ ಪ್ರಾಚೀನಗ್ರಂಥಗಳನ್ನು ಮಾತ್ರ 'ಹಸ್ತಪ್ರತಿ' ಎಂದು ಕರೆಯಬೇಕೆಂಬುದು ಸ್ಪಷ್ಟವಾಗುತ್ತದೆ.

ಪ್ರಾಚೀನಕಾಲದಲ್ಲಿ ಈ ಹಸ್ತಪ್ರತಿಗೆ ಬಳಸುತ್ತಲಿದ್ದ ವಸ್ತುವನ್ನು ಗಮನಿಸಿ, ಅದನ್ನು ತಾಳೆಗರಿ, ಕೋರಿಕಾಗದ ಎಂದೂ, ಕಟ್ಟುರೂಪವನ್ನು ಗಮನಿಸಿ ಕಟ್ಟು, ಕವಳಿಗೆ, ಹೊತ್ತಗೆ, ಗ್ರಂಥವೆಂದೂ ಕರೆಯುತ್ತಿದ್ದರು. ಇಂದು Manuscript ಪರಿಕಲ್ಪನೆಯ ಪ್ರಭಾವದಿಂದಾಗಿ ಇವೆಲ್ಲವುಗಳನ್ನು 'ಹಸ್ತಪ್ರತಿ' ಎಂಬ ಒಂದೇ ಹೆಸರಿನಿಂದ ಗುರುತಿಸಲಾಗುತ್ತದೆ.

## ಹಸ್ತಪ್ರತಿಶಾಸ್ತ್ರ:

"ಹಸ್ತಪ್ರತಿಶಾಸ್ತ್ರ" ಎಂಬ ಪದವಾಗಲೀ, ಇದರ ಇಂಗ್ಲಿಷ್ ಸಂವಾದಿಯಾದ "Manuscriptology"ಎಂಬ ಪದವಾಗಲೀ ಇತ್ತೀಚಿನ ಸೃಷ್ಟಿಯಾಗಿವೆ. ಬಹುತೇಕ ಮಂಡ್ಯದಲ್ಲಿ ಜರುಗಿದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ (೧೯೭೪) ಡಾ. ಆರ್. ಸಿ.

ಹಿರೇಮಠ ಅವರು "ಹಸ್ತಪ್ರತಿಸಂಗ್ರಹ, ಅವುಗಳ ಸೂಚೀಕರಣ, ಮೊದಲಾದವು ಗಳನ್ನೊಳಗೊಂಡ Manuscriptology ಎಂಬ ಹೊಸ ಶಾಸ್ತ್ರವೇ ಬೆಳೆದು ಬರಬೇಕಾ ಗಿದೆ" ಎಂದು ಹೇಳುವ ಮೂಲಕ, ಈ ಎರಡೂ ಪದಗಳನ್ನು ಮೊದಲ ಸಲ ಪ್ರಯೋಗಿಸಿದರೆಂದು ತೋರುತ್ತದೆ. ಕಾರಣ ಕನ್ನಡ, ಸಂಸ್ಕೃತ ಶಬ್ದಕೋಶಗಳಿಗೆ, ಅದೇ ರೀತಿ ಇಂಗ್ಲಿಷ್ ಶಬ್ದಕೋಶಕ್ಕೆ ಇವು ಕನ್ನಡಿಗರ ಕಾಣಿಕೆಯೆನಿಸಿವೆ. ಮತ್ತು ಈ ಪದಗಳು ಆಯಾ ಕೋಶಗಳಲ್ಲಿ ಇನ್ನು ಮೇಲೆ ಸೇರಬೇಕಾಗಿದೆ.

೧೯೮೧, ಫ. ಗು. ಹಳಕಟ್ಟಿ ಅವರ ಜನ್ಮಶತಮಾನೋತ್ಸವ ವರ್ಷ. ಗದುಗಿನ ಶ್ರೀ ತೋಂಟದಾರ್ಯ ಮಠದಲ್ಲಿ ಅತಿಥಿಯಾಗಿ ಮಾತನಾಡುತ್ತ ಡಾ. ಹಾ. ಮಾ. ನಾಯಕ ಅವರು "೧೯೮೧ನೆಯ ಇಸ್ವಿಯನ್ನು ಹಸ್ತಪ್ರತಿ ವರ್ಷವೆಂದು ಸರಕಾರ ಘೋಷಿಸಬೇಕು" ಎಂದು ಹೇಳಿದರು. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನಪೀಠ ಈ ಶತಮಾನೋತ್ಸವದ ಅಂಗವಾಗಿ 'ಹಸ್ತಪ್ರತಿ'ಗಳನ್ನು ಕುರಿತು ವಿಚಾರ ಸಂಕಿರಣ ಏರ್ಪಡಿಸಿ (೧೯೮೧), ಅಲ್ಲಿ ಮಂಡಿಸಿದ ಲೇಖನಗಳನ್ನು 'ಕರ್ನಾಟಕ ಭಾರತಿ'ಯ ಮೂಲಕ ಪ್ರಕಟಿಸಿತು.ಅದೇ ವರ್ಷ (೧೯೮೧) ಬೆಂಗಳೂರಿನ ಬಿ.ಎಂ.ಶ್ರೀ. ಪ್ರತಿಷ್ಠಾನ 'ಹಸ್ತಪ್ರತಿಶಾಸ್ತ್ರ' ಹೆಸರಿನ ವಿಚಾರ ಸಂಕಿರಣ ನಡೆಸಿ, ಗ್ರಂಥರೂಪ ದಲ್ಲಿ ಪ್ರಕಟಿಸಿತು. ಹಳಕಟ್ಟಿಯವರ ಜನ್ಮಶತಮಾನೋತ್ಸವದ ನೆನಪಿಗಾಗಿಯೇ ಹಸ್ತಪ್ರತಿ ವಿಷಯಕ್ಕೆ ಸಂಬಂಧಿಸಿದ 'ಮಣಿಹ' ಹೆಸರಿನ ಗ್ರಂಥವನ್ನೂ ಹೊರತಂದಿತು. ಹೀಗೆ ಹಸ್ತಪ್ರತಿಶಾಸ್ತ್ರ ಮೈಕೊಡವಿ ಬಿಚ್ಚಿಕೊಂಡುದು ೧೯೮೧ರಲ್ಲಿ, ಹಳಕಟ್ಟಿಯವರ ಜನ್ಮಶತಮಾನೋತ್ಸವ ವರ್ಷದಲ್ಲಿ ಎಂದೇ ಹೇಳಬೇಕು.

ಕೈಬರವಣಿಗೆಯಾದ ಶಾಸನಪ್ರತಿಗಳನ್ನು ಕುರಿತ 'ಶಾಸನಶಾಸ್ತ್ರ' ಹೆಸರಿನ ಅಧ್ಯಯನಶಾಖೆಯು ಕಳೆದ ಎರಡನೂರುವರ್ಷಗಳಿಂದ ನಮ್ಮಲ್ಲಿ ಬೆಳೆದುಬಂದಿದೆ.ಅನೇಕ ಅರ್ಥಗಳಲ್ಲಿ ತುಂಬ ಭಿನ್ನವಾಗಿರುವ ಇದು, 'ಹಸ್ತಪ್ರತಿಶಾಸ್ತ್ರ' (Manuscript-ology)ದ ರಚನೆಗೆ ಆದರ್ಶವಾಗಲಾರದು. ದಾಖಲುಪ್ರತಿಗಳನ್ನು ಕುರಿತ 'ದಾಖಲು ಶಾಸ್ತ್ರ', ಮುದ್ರಾಪ್ರತಿ (press copy) ಯನ್ನು ಕುರಿತ 'ಮುದ್ರಾಪ್ರತಿಶಾಸ್ತ್ರ'ಗಳು ಇನ್ನೂ ಸ್ಪಷ್ಟ ಆಕಾರ ಪಡೆದಿಲ್ಲವೆಂದೇ ಹೇಳಬೇಕು. ಒಂದು ವೇಳೆ ಆಕಾರ ಪಡೆದರೂ ಆ ಶಾಸ್ತ್ರಗಳು ಹಸ್ತಪ್ರತಿಶಾಸ್ತ್ರಕ್ಕೆ ಏನೂ ನೆರವು ನೀಡುವಂತಿಲ್ಲ. ಒಟ್ಟಿನಲ್ಲಿ ಈ ನಾಲ್ಕೂ ಸ್ವತಂತ್ರಸ್ವರೂಪದ ಕ್ಷೇತ್ರಗಳಾಗಿವೆ.

ಈ ವರೆಗೆ ನಮ್ಮಲ್ಲಿ ಹಸ್ತಪ್ರತಿಶಾಸ್ತ್ರವು ಗ್ರಂಥಸಂಪಾದನಾಶಾಸ್ತ್ರದ ಭಾಗ ವಾಗಿ ಬೆಳೆದಿದೆ. ಈಗ ಅದರಿಂದ ಬೇರ್ಪಟ್ಟು ಸ್ವತಂತ್ರವಾಗಿ ಬೆಳೆಯಬೇಕಾಗಿರುವ ಈ ಶಾಸ್ತ್ರಕ್ಕೆ 'ಗ್ರಂಥಸಂಪಾದನಾಶಾಸ್ತ್ರ'ದಿಂದಲೂ ಅಷ್ಟಾಗಿ ನೆರವು ಸಿಗುವುದಿಲ್ಲ ವೆಂದೇ ಹೇಳಬೇಕು. ಏಕೆಂದರೆ ಹಸ್ತಪ್ರತಿಯಲ್ಲಿ ಕೃತಿ ಮತ್ತು ಪ್ರತಿ ಅಡಗಿದ್ದು, 'ಪ್ರತಿ'ಯ ಅಧ್ಯಯನ ಹಸ್ತಪ್ರತಿಶಾಸ್ತ್ರದ ವಿಷಯವಾದರೆ, 'ಕೃತಿ'ಯ ಅಧ್ಯಯನ

ಗ್ರಂಥಸಂಪಾದನಶಾಸ್ತ್ರದ ವಿಷಯವಾಗಿದೆ. 'ಪ್ರತಿ'ಯ ಉತ್ಪಾದನೆ, ಪ್ರಸರಣ, ಸಂಗ್ರಹಣ, ವ್ಯವಸ್ಥಾಪನ, ಪ್ರಯೋಜನ ಈ ದಿಕ್ಕಿನಲ್ಲಿ ಹಸ್ತಪ್ರತಿಶಾಸ್ತ್ರ ಬೆಳೆದರೆ, 'ಕೃತಿ'ಯ ಭಿನ್ನಪಾಠಸ್ವರೂಪ, ಸಂಕಲನ, ಅವುಗಳ ನಿಜಪಾಠನಿರ್ಣಯ ಇತ್ಯಾದಿ ದಿಕ್ಕಿನಲ್ಲಿ ಗ್ರಂಥಸಂಪಾದನಾಶಾಸ್ತ್ರ ಬೆಳೆಯಬೇಕಾಗುತ್ತದೆ. ಆದುದರಿಂದ ಇನ್ನು ಮೇಲೆ ಗ್ರಂಥಸಂಪಾದನಾಶಾಸ್ತ್ರದಿಂದ ಹಸ್ತಪ್ರತಿಶಾಸ್ತ್ರಕ್ಕೆ ಸಂಬಂಧಿಸಿದ ವಿಷಯವನ್ನು ಪ್ರತ್ಯೇಕಿಸಿ, ಎರಡೂ ಶಾಸ್ತ್ರಗಳೂ ಸ್ವತಂತ್ರವಾಗಿ ಬೆಳೆಯುವುದರತ್ತ ನಾವು ಗಮನ ಕೊಡಬೇಕಾಗಿದೆ.

ಇತ್ತೀಚೆ ಗ್ರಂಥತ್ವದ ಅಧ್ಯಯನ ಮತ್ತು ಪ್ರಯೋಜನ ದೃಷ್ಟಿಯಿಂದ ಗ್ರಂಥಾಲಯಶಾಸ್ತ್ರ (Library Science) ಹೆಸರಿನ ಹೊಸ ಶಾಸ್ತ್ರವೇ ಆಕಾರ ಪಡೆದಿದೆ. ದೇಶ-ವಿದೇಶಗಳ ಖ್ಯಾತ ವಿದ್ವಾಂಸರು ಹೊಸ ಹೊಸ ಸಿದ್ಧಾಂತಗಳನ್ನು ಶೋಧಿಸಿ, ಗ್ರಂಥಾಲಯಶಾಸ್ತ್ರವನ್ನು 'ಗ್ರಂಥಾಲಯ ಮತ್ತು ಮಾಹಿತಿ ವಿಜ್ಞಾನ' (Library and information science) ಅರ್ಥಕ್ಕೆ ಮುಟ್ಟಿಸಿದ್ದಾರೆ. ಈ ಶಾಸ್ತ್ರದ ಮುಖ್ಯ ಉದ್ದೇಶ ಯಾವುದೇ ಬಗೆಯ ಗ್ರಂಥತ್ವದ ಅಧ್ಯಯನವಾಗಿದ್ದರೂ ಅದು ಯಂತ್ರಪ್ರತಿರೂಪದ ಗ್ರಂಥಗಳಿಗೆ ಮಾತ್ರ ಹೆಚ್ಚು ಒತ್ತುಕೊಟ್ಟು, ಹಸ್ತಪ್ರತಿ ರೂಪದ ಗ್ರಂಥಗಳನ್ನು ಉಪೇಕ್ಷಿಸುತ್ತ ಬಂದಿದೆ. ಹೀಗಾಗಿ ಆಧುನಿಕ ಗ್ರಂಥಾಲಯ ಶಾಸ್ತ್ರದಿಂದಲೂ ಹಸ್ತಪ್ರತಿಶಾಸ್ತ್ರ ಉದ್ಧಾರ ಹೊಂದಲಾರದೆಂದೇ ತೋರುತ್ತದೆ. ಈ ವರೆಗೆ ಗ್ರಂಥಾಲಯಶಾಸ್ತ್ರಜ್ಞರು ಯಂತ್ರಪ್ರತಿಗಳನ್ನು ಖಾಸಾಮಗನಂತೆ, ಹಸ್ತ ಪ್ರತಿಗಳನ್ನು ಮಲಮಗನಂತೆ ನೋಡುತ್ತ ಬಂದಿರುವುದು ಇದಕ್ಕೆ ನಿದರ್ಶನವೆನಿಸಿದೆ. ಹಾಗೆ ನೋಡಿದರೆ ಇವೆರಡೂ ಕ್ಷೇತ್ರಗಳ ಲಕ್ಷಣ ವಿಭಿನ್ನವಾಗಿರುವುದರಿಂದ ಗ್ರಂಥಾಲಯಶಾಸ್ತ್ರದಿಂದ ಹಸ್ತಪ್ರತಿಶಾಸ್ತ್ರ ಪ್ರತ್ಯೇಕವಾಗಿ ಬೆಳೆಯುವುದೇ ನ್ಯಾಯ ಸಮ್ಮತವೆನಿಸುತ್ತದೆ.

ಇಲ್ಲಿ ಇನ್ನೊಂದು ಪ್ರಶ್ನೆ. 'ವಿಜ್ಞಾನ' ಮತ್ತು 'ಶಾಸ್ತ್ರ' ಪದಗಳ ಬಳಕೆ. ಇಂದು ಸಮಾಜಶಾಸ್ತ್ರ-ಸಮಾಜವಿಜ್ಞಾನ, ಭಾಷಾಶಾಸ್ತ್ರ-ಭಾಷಾವಿಜ್ಞಾನ ಹೀಗೆ ಈ ಪದಗಳನ್ನು ತುಂಬ ಸಡಿಲಾಗಿ ಬಳಸುತ್ತಲಿದ್ದೇವೆ. ಪ್ರಾಚೀನಭಾರತದಲ್ಲಿ ಅಲಂಕಾರ ಮೊದಲಾದ ಸಾಹಿತ್ಯಿಕ ವಿಷಯಗಳ ಮತ್ತು ವೈದ್ಯ ಮೊದಲಾದ ಸಾಹಿತ್ಯೇತರ ವಿಷಯಗಳ ಸ್ವರೂಪ-ಲಕ್ಷಣಗಳನ್ನು ಕುರಿತ ಅಧ್ಯಯನಗಳಿಗೆ 'ಶಾಸ್ತ್ರ'ವೆಂದೇ ಕರೆಯುತ್ತ ಬಂದಿದ್ದಾರೆ. ಉದಾ: ಅಲಂಕಾರಶಾಸ್ತ್ರ, ವೈದ್ಯಶಾಸ್ತ್ರ ಇತ್ಯಾದಿ. ನಮ್ಮಲ್ಲಿ ವಿಜ್ಞಾನವೆಂದರೆ ಮೂಲತಃ ಅಧ್ಯಾತ್ಮಜ್ಞಾನವೆಂದೇ ಅರ್ಥ. ಇಂದು ಈ ಪದ ತಾಂತ್ರಿಕ ಕ್ಷೇತ್ರದ ಅಧ್ಯಯನಕ್ಕೆ ವಿಶೇಷವಾಗಿ ಬಳಕೆಯಾಗುತ್ತಲಿದೆ. ಯಂತ್ರ ಪ್ರತಿಗಳಿಗೆ ಸಂಬಂಧಪಟ್ಟ ಅಧ್ಯಯನವನ್ನು 'ಗ್ರಂಥಾಲಯವಿಜ್ಞಾನ'ವೆಂದು ಕರೆಯುತ್ತಲಿರುವುದರಿಂದ ಹಸ್ತಪ್ರತಿಗಳಿಗೆ ಸಂಬಂಧಪಟ್ಟ ಅಧ್ಯಯನವನ್ನೂ

'ಹಸ್ತಪ್ರತಿ ವಿಜ್ಞಾನ'ವೆಂದು ಕರೆಯಬಹುದೇ ? ಎಂಬ ಸಂದೇಹ ಕಾಡುತ್ತದೆ. ಈ ಸಂದರ್ಭದಲ್ಲಿ ಕೆಲವು ವಿವರಗಳನ್ನು ಇಲ್ಲಿ ಕೊಡಬಹುದು.

Research (ಸಂಶೋಧನೆ) ಎನ್ನುವುದು Discovery (ಅನ್ವೇಷಣ) ಮತ್ತು Invention (ಆವಿಷ್ಕರಣ) ಎಂದು ಎರಡು ತೆರನಾಗಿದೆ. ಇವುಗಳಲ್ಲಿ ಒಂದು ಗತಕಾಲಕ್ಕೆ ಸಂಬಂಧಿಸಿದ ಶೋಧವಾದರೆ, ಇನ್ನೊಂದು ಭವಿಷ್ಯತ್ಕಾಲಕ್ಕೆ ಸಂಬಂಧಿಸಿದ ಶೋಧವಾಗಿದೆ. ಇಲ್ಲಿ ಅನ್ವೇಷಣರೂಪದ ಚಟುವಟಿಕೆಗೆ ಸಂಬಂಧಿಸಿದ ಸಂಶೋಧನೆಯನ್ನು 'ಶಾಸ್ತ್ರ'ವೆಂದೂ, ಆವಿಷ್ಕರಣ ರೂಪದ ಚಟುವಟಿಕೆಗೆ ಸಂಬಂಧಿಸಿದ ಸಂಶೋಧನೆಯನ್ನು 'ವಿಜ್ಞಾನ'ವೆಂದೂ ಕಟ್ಟುನಿಟ್ಟಾಗಿ ಕರೆಯುವುದು ವಿಷಯದ ನಿರ್ದಿಷ್ಟ ತಿಳುವಳಿಕೆಯ ದೃಷ್ಟಿಯಿಂದ ಹೆಚ್ಚು ಯೋಗ್ಯವೆನಿಸುತ್ತದೆ.[೨] ಯಂತ್ರಪ್ರತಿಗಳ ಮತ್ತು ಹಸ್ತಪ್ರತಿಗಳ ಕ್ಷೇತ್ರದಲ್ಲಿ ನಡೆಯುವ ಚಟುವಟಿಕೆಗಳಲ್ಲಿ Discovery ರೂಪದ ಅಂಶವೇ ಇರುವುದರಿಂದ ಇವುಗಳನ್ನು ವಿಜ್ಞಾನವೆಂದು ಕರೆಯದೆ, ಶಾಸ್ತ್ರವೆಂದೇ ಕರೆಯಬೇಕೆನಿಸುತ್ತದೆ. ಆದುದರಿಂದ, ಇಲ್ಲಿ ಉದ್ದಕ್ಕೂ, 'ಹಸ್ತಪ್ರತಿಶಾಸ್ತ್ರ' ವೆಂಬ ಪದವನ್ನೇ ಪ್ರಯೋಗಿಸಲಾಗಿದೆ.

ಹಸ್ತಪ್ರತಿಶಾಸ್ತ್ರದ ವ್ಯಾಪ್ತಿಯು ಹಸ್ತಪ್ರತಿಯ ಉತ್ಪಾದನೆಯಿಂದ ಮೊದಲು ಮಾಡಿ, ಅನೇಕ ಘಟ್ಟಗಳಲ್ಲಿ ಮುನ್ನಡೆದು, ಪ್ರಯೋಜನೆಯಲ್ಲಿ ಸಾರ್ಥಕತೆ ಪಡೆಯುತ್ತದೆ. ಸೂಕ್ಷ್ಮವಾಗಿ ನೋಡಿದರೆ ಇಲ್ಲಿ ಉತ್ಪಾದನ, ಪ್ರಸರಣ, ಸಂಗ್ರಹಣ, ವ್ಯವಸ್ಥಾಪನ ಮತ್ತು ಪ್ರಯೋಜನ–ಎಂಬ ಐದು ಘಟ್ಟಗಳು ಕಂಡುಬರುವುದರಿಂದ ಪ್ರಸ್ತುತ ಕೃತಿ ಈ ಕ್ರಮದಲ್ಲಿ ಮುಂದುವರಿದಿದೆ.

೨. "Science" ಎಂಬುದು ಸೈರ್ (Scire) ಎಂಬ ಲ್ಯಾಟಿನ್ ಕ್ರಿಯಾಪದದಿಂದ ವ್ಯುತ್ಪನ್ನವಾಗಿರುವ ಶಬ್ದ. ಇದರ ಅರ್ಥ ತಿಳಿಯುವುದು (to know) ಎಂದು. ಇದರ ನಾಮರೂಪವಾದ "Scientia" ಎಂಬುದಕ್ಕೆ ಜ್ಞಾನ (Knowledge) ಎಂದು ಅರ್ಥ". ನೋಡಿ– ಭಾಷಾಂತರ ಕಲೆ ಪುಟ ೧೪. (ಡಾ. ಪ್ರಧಾನ ಗುರುದತ್ತ)

# ೧

# ಉತ್ಪಾದನ

ಕೃತಿ-ಪ್ರತಿ-ಕಟ್ಟು, ಲೇಖನಸಾಮಗ್ರಿ: ತಾಳೆಗರಿ-ಕಾಗದ-ಅರಿವೆ-ಹಲಗೆ-ಚರ್ಮ, ಕಂಠ-ಲೇಖನಿ, ಕಪ್ಪು-ಮಸಿ-ಬಳಪ, ಲಿಪಿಕಾರ-ಲಿಪಿ-ಭಾಷೆ, ಗ್ರಂಥವಿನ್ಯಾಸ-ಗ್ರಥನವಿನ್ಯಾಸ.

## ಕೃತಿ-ಪ್ರತಿ-ಕಟ್ಟು :

ಕೈಬರಹದ ಗ್ರಂಥರಾಶಿಯನ್ನು ನಾವು 'ಹಸ್ತಪ್ರತಿ'ಯೆಂದು ಕರೆಯುತ್ತೇವೆ. ಈ ಹಸ್ತಪ್ರತಿಯಲ್ಲಿ ಕವಿನಿರ್ಮಿತ 'ಕೃತಿ', ಲಿಪಿಕಾರನಿರ್ಮಿತ 'ಪ್ರತಿ' ಎಂಬ ಎರಡು ಘಟಕಗಳು ಸೇರಿಕೊಂಡಿರುತ್ತವೆ. ಕವಿ ಒಂದು ಕೃತಿಯನ್ನು ರಚಿಸಿರುತ್ತಾನೆ, ಕಾಲಕ್ರಮದಲ್ಲಿ ಲಿಪಿಕಾರರು ಅದನ್ನು ಅನೇಕ ಪ್ರತಿಗಳಾಗಿ ಬೆಳೆಸಿಕೊಂಡು ಬಂದಿರುತ್ತಾರೆ. ಹಸ್ತಪ್ರತಿಯೇ ಆಗಿದ್ದರೂ ಕವಿಯ ಮೂಲನಿರ್ಮಿತಿಯನ್ನು 'ಕೃತಿ' ಎಂದೂ, ಆಮೇಲಿನ ಲಿಪಿಕಾರರ ನಿರ್ಮಿತಿಗಳನ್ನು 'ಪ್ರತಿ' ಎಂದೂ ಕರೆಯುವುದು ನ್ಯಾಯಸಮ್ಮತವೆನಿಸುತ್ತದೆ. ಇವುಗಳಲ್ಲಿ ಕೃತಿ ಎನ್ನುವುದು 'ಸೃಷ್ಟಿ' ಯಾದರೆ, ಪ್ರತಿ ಎನ್ನುವುದು 'ಉತ್ಪಾದನೆ'ಯಾಗಿರುತ್ತದೆ. ಹೀಗೆ ಉತ್ಪಾದಿತವಾದ ಕೃತಿ ಅಥವಾ ಪ್ರತಿ ಅಥವಾ ಕೃತಿಗಳ ಸಿವುಡು ಅಥವಾ ಪ್ರತಿಗಳ ಸಿವುಡು, ಅಥವಾ ಕೃತಿ-ಪ್ರತಿಗಳ ಸಿವುಡು, 'ಕಟ್ಟು' ಎನಿಸುತ್ತದೆ. ಕವಿ ಬರೆದ ಒಂದು ಕೃತಿ, ಲಿಪಿಕಾರ ಉತ್ಪಾದಿಸಿದ ಒಂದು ಪ್ರತಿ, ಇಲ್ಲವೆ ಒಂದಕ್ಕಿಂತ ಹೆಚ್ಚು ಪ್ರತಿಗಳಿಗೆ ಫಲಕ ಹೊದಿಸುವಲ್ಲಿ 'ಕಟ್ಟು'(Bundle) ಸಿದ್ಧವಾಗುತ್ತದೆ. ಅಂದರೆ ಒಂದು ಕಟ್ಟಿನಲ್ಲಿ ಒಂದು ಕೃತಿಯ ಪ್ರತಿ ಇರಬಹುದು, ಒಂದಕ್ಕಿಂತ ಹೆಚ್ಚು ಕೃತಿಗಳ ಪ್ರತಿಗಳಿರಬಹುದು. ಆದುದರಿಂದ ಕೃತಿ ಬೇರೆ, ಪ್ರತಿ ಬೇರೆ, ಕಟ್ಟು ಬೇರೆಯೆಂಬುದನ್ನು ಅವಶ್ಯ ಗಮನಿಸಬೇಕು. ಇದನ್ನು ಒಂದು

ಉದಾಹರಣೆಯಿಂದ ಇನ್ನೂ ಸ್ಪಷ್ಟಗೊಳಿಸಬಹುದು. ಒಬ್ಬನ ಹತ್ತಿರ ಎರಡು ಕಟ್ಟುಗಳಿವೆಯೆಂದು ಇಟ್ಟುಕೊಳ್ಳಿ. ಮೊದಲನೆಯ ಕಟ್ಟಿನಲ್ಲಿ ಜೈಮಿನಿಭಾರತ, ಪ್ರಭುಲಿಂಗಲೀಲೆ, ನಳಚರಿತ್ರೆ; ಎರಡನೆಯ ಕಟ್ಟಿನಲ್ಲಿ ಗದಾಯುದ್ಧ, ಹರಿಶ್ಚಂದ್ರಕಾವ್ಯ, ಪ್ರಭುಲಿಂಗಲೀಲೆ-ಹೀಗೆ ಪ್ರತಿಗಳಿದ್ದರೆ ಅವನ ವಶದಲ್ಲಿ ಇರುವ ಕಟ್ಟುಗಳು ಎರಡು; ಕೃತಿಗಳು ಐದು, ಪ್ರತಿಗಳು ಆರುಯೆಂದು ಹೇಳಬೇಕಾಗುತ್ತದೆ. ಈ ಕೃತಿ, ಪ್ರತಿ, ಕಟ್ಟು ಪದಗಳನ್ನು ಇಂದು ನಿರ್ದಿಷ್ಟ ಅರ್ಥದಲ್ಲಿ ಬಳಸಬೇಕಾಗಿದೆ. ಏಕೆಂದರೆ ಕೆಲವು ಹಸ್ತಪ್ರತಿ ಭಾಂಡಾರದವರಿಗೆ ನಿಮ್ಮಲ್ಲಿ ಇರುವ ಕಟ್ಟುಗಳ ಸಂಖ್ಯೆ ಎಷ್ಟು? ಎಂದು ಕೇಳಿದರೆ ಪ್ರತಿಗಳ ಸಂಖ್ಯೆಯನ್ನು ತಿಳಿಸುತ್ತಾರೆ. ಇದರಿಂದಾಗಿ ಹಸ್ತಪ್ರತಿ ಭಾಂಡಾರಗಳಲ್ಲಿರುವ ಒಟ್ಟು ಕಟ್ಟುಗಳ ಸಂಖ್ಯೆಯ ವಿಷಯವಾಗಿ ತಪ್ಪು ತಪ್ಪು ವಿವರಗಳು ಲಭ್ಯವಾಗುತ್ತಲಿವೆ. ಇನ್ನು ಮೇಲಾದರೂ ಕೃತಿ, ಪ್ರತಿ, ಕಟ್ಟು ಪದಗಳನ್ನು ನಿರ್ದಿಷ್ಟ ಅರ್ಥದಲ್ಲಿ ಬಳಸಬೇಕಾಗಿದೆ. ಹೀಗಿದ್ದೂ ಒಟ್ಟು ಗ್ರಂಥರಾಶಿಯಲ್ಲಿ ಉತ್ಪಾದನಾ ಭಾಗವೇ ಅಧಿಕ ಪ್ರಮಾಣದಲ್ಲಿರುವುದರಿಂದ ಈ ಅಧ್ಯಾಯಕ್ಕೆ 'ಉತ್ಪಾದನ' ಎಂದೇ ಹೆಸರಿಡಲಾಗಿದೆ.

ಪ್ರಾಚೀನಕಾಲದಲ್ಲಿ ರಾಜರು, ಸಾರ್ವಜನಿಕರು ಆಶ್ರಯ ನೀಡುವ ಮೂಲಕ ಕೃತಿಗಳ ಸೃಷ್ಟಿಗೆ ಕಾರಣರಾದ ಅನೇಕ ಉದಾಹರಣೆಗಳು ನಮ್ಮಲ್ಲಿ ಸಿಗುತ್ತವೆ. ಜೈನಕವಿಗಳಂತೂ ರಾಜಾಶ್ರಯದಲ್ಲಿಯೇ ಕೃತಿನಿರ್ಮಾಣಕಾರ್ಯವನ್ನು ಪೂರೈಸಿದರು. ರಾಜನು ನಿರ್ವಹಿಸಬೇಕಾದ ಕರ್ತವ್ಯಗಳನ್ನು 'ಸಪ್ತಸಂತಾನ'ವೆಂದು ಕರೆಯುತ್ತಿದ್ದು, ಇವುಗಳಲ್ಲಿ 'ಗ್ರಂಥೋತ್ಪಾದನೆ'ಯೂ ಸೇರಿದ್ದರಿಂದ ರಾಜನ ಕರ್ತವ್ಯದ ಭಾಗವೆಂಬಂತೆ, ಕೆಲವುಜನ ಅರಸರು ಗ್ರಂಥಗಳನ್ನು ಬರೆದರು, ಬರೆಯಿಸಿದರು. ಇವರ ಆದರ್ಶದಲ್ಲಿ ಕೆಲವು ಜನ ಮಂತ್ರಿಗಳೂ, ಸಾಮಂತರೂ ಈ ಕರ್ತವ್ಯವನ್ನು ನಿರ್ವಹಿಸಿದರು. ಸಾರ್ವಜನಿಕರಿಗೆ ಸಂಬಂಧಿಸಿದಂತೆ ರನ್ನನಿಂದ ಅಜಿತಪುರಾಣ ಬರೆಸಿದ ಅತ್ತಿಮಬ್ಬೆ, ಮಲ್ಲಿಕಾರ್ಜುನ ವೀರಶೈವಾಮೃತ ಮಹಾಪುರಾಣ ತನ್ನ ಮನೆಯಲ್ಲಿ ರೂಪಗೊಳ್ಳಲು ಕಾರಣಳಾದ ಜ್ಯೋತಿಯಮ್ಮ ಮೊದಲಾದ ಮಹಿಳೆಯರನ್ನು ಇಲ್ಲಿ ಸ್ಮರಿಸಬಹುದು. ಇವಲ್ಲದೆ, ಲಕ್ಕಣ್ಣದಣ್ಣಾಯಕ, ಭಂಡಾರಿ ಜಕ್ಕಪ್ಪ, ಕಲ್ಲಿಪದ ಕೇತಿಶೆಟ್ಟಿಗಳು ಲಕ್ಕಸಂಖ್ಯೆಯ ವಿತ್ತವನ್ನು ಸಾಹಿತ್ಯೋದ್ಧಾರಕ್ಕಾಗಿ ವೆಚ್ಚಿಸಿದ ವಿಷಯ ಗಮನಾರ್ಹವೆನಿಸಿದೆ.[೧] ಇಂಥ ನೆರವುಗಳು ಕಾರಣವಾಗಿ ಕವಿಕೃತಿಗಳು ಕರ್ನಾಟಕದಲ್ಲಿ ಹುಟ್ಟಿಬಂದವು.

ಕವಿಯು ಕೃತಿ ರಚನೆಯನ್ನು ಪೂರೈಸಿ ಸಮಾಜಕ್ಕೆ ಒಪ್ಪಿಸುವ ಸಂದರ್ಭದಲ್ಲಿ ಇಂದಿನ ಬಿಡುಗಡೆ ಸಮಾರಂಭವನ್ನು ಹೋಲುವ ಕಾರ್ಯಕ್ರಮವನ್ನು, ಆ ಕಾಲದಲ್ಲಿಯೂ ಏರ್ಪಡಿಸುತ್ತಿದ್ದರೆಂದು ತೋರುತ್ತದೆ. ಮಹಾಕವಿ, ಮಹಾಕೃತಿಗಳ

---

೧. ವೀ. ಮ. ಪು. ೮-೨೨-೫೨.

ವಿಷಯವಾಗಿಯಾದರೂ ಇಂಥ ಸಮಾರಂಭ ಜರುಗುತ್ತಿರಬಹುದು. ಜನ್ನನ ಅನಂತ ನಾಥಪುರಾಣ ಈ ಬಗೆಯ ಮರ್ಯಾದೆಗೆ ಪಾತ್ರವಾದ ಕೃತಿಯಾಗಿದೆ. ಗಂಡರಾದಿತ್ಯನ ಪೊಳಲಿನ ಅನಂತನಾಥತೀರ್ಥಂಕರ ಬಸದಿಯಲ್ಲಿ ತನ್ನ ಪುರಾಣಕೃತಿಯ ನಾಂದೀ ಪದ್ಯವನ್ನು ರಚಿಸಿದ ಕವಿ ಜನ್ನನು—

ದೋರಸಮುದ್ರದೊಳ್ ವಿಜಯಪಾರ್ಶ್ವಜಿನೇಶ್ವರ ದಿವ್ಯಮಂದಿರ।
ದ್ವಾರದ ಮುಂತೆ ಮಾಡಿಸಿದ ಶಾಂತಿಜಿನಾಲಯದೊಳ್ಮನೋರು ಮಂ ।
ದಾರದ ಕೊಂಬನರ್ತಿಯಿನಲಂಬಿದವೋಲ್ ಕವಿ ಫಾಳಲೋಚನಂ ।
ಧಾರಣೆಗಿಂತು ಮಾಡಿದನನಂತಪುರಾಣದ ಸುಪ್ರತಿಷ್ಠೆಯಂ ॥

ಎಂದು ಹೇಳುತ್ತಾನೆ.[೪] ದೋರಸಮುದ್ರದ ವಿಜಯಪಾರ್ಶ್ವ ಜಿನಬಸದಿಯ ಮುಂದಿನ ಶಾಂತಿಜಿನಾಲಯದಲ್ಲಿ ಆತನ ಅನಂತನಾಥಪುರಾಣವು 'ಸುಪ್ರತಿಷ್ಠೆ'ವಾಯಿತೆಂದು ಈ ಪದ್ಯ ತಿಳಿಸುತ್ತದೆ. ಇಲ್ಲಿಯೇ ಹಿಂದುಮುಂದಿನ ಪದ್ಯಗಳಲ್ಲಿ 'ಸ್ಥಾಪಿಸಿದಂ' 'ಮಾಡಿಸಿದ ಪ್ರತಿಷ್ಠೆಯಂ' ಎಂಬ ಉಲ್ಲೇಖಗಳಿವೆ. ಹೀಗಾಗಿ ಈ ಸಮಾರಂಭವು ಸ್ಥಾಪನೆ, ಪ್ರತಿಷ್ಠಾ, ಸುಪ್ರತಿಷ್ಠಾ ಎಂಬ ಪರ್ಯಾಯನಾಮಗಳಿಂದ ಕರೆಯಿಸಿಕೊಳ್ಳು ತ್ತಿದ್ದಿತೆಂದು ತಿಳಿದುಬರುತ್ತದೆ. ಹೀಗೆ ಕೃತಿಯೊಂದು ಹುಟ್ಟಿ ಪ್ರತಿಷ್ಠೆಗೊಂಡ ಬಳಿಕ, ಪ್ರತಿರೂಪದಲ್ಲಿ ಸಂಖ್ಯಾವರ್ಧಿಸಿಕೊಳ್ಳುತ್ತ ಹೋಗುತ್ತಲಿದ್ದಿತು.

ಈ ರೀತಿ ಕೃತಿರಚನೆ ಸಮಾಪ್ತಿಯಾದ ಬಳಿಕ 'ಪ್ರತಿಷ್ಠೆ'ಯ ಹೆಸರಿನಿಂದ ಅದರ ಬಿಡುಗಡೆ ಸಮಾರಂಭವನ್ನು ಇಟ್ಟುಕೊಳ್ಳುವಂತೆ, ಪ್ರತಿರಚನೆಯ ಪ್ರಾರಂಭ-ಮುಕ್ತಾಯ, ಅದರ ಪ್ರತಿಯೊಂದು ಸಂಧಿಯ ಪ್ರಾರಂಭ-ಮುಕ್ತಾಯ ಸಂದರ್ಭ ಗಳಲ್ಲಿಯೂ ಸಮಾರಂಭ, ಪೂಜೆಗಳು ಆಗಾಗ ನೆರವೇರುತ್ತಿದ್ದವೆಂದು ತೋರುತ್ತದೆ. ಗುಬ್ಬಿಯ ಮಲ್ಲಣಾರ್ಯನ ವೀರಶೈವಾಮೃತ ಮಹಾಪುರಾಣವನ್ನು ಮುದ್ದೇಬಿಹಾಳದ ಚಿನಿವಾರ ಅವರ ಮನೆಯಲ್ಲಿ ನಕಲುಮಾಡಿದ ಸನ್ನಿವೇಶವನ್ನು ಆ ಹಸ್ತಪ್ರತಿ ಹೀಗೆ ವಿವರಿಸುತ್ತದೆ. "ಈ ವೀರಶೈವಾಮೃತ ಮಹಾಪುರಾಣವು ಬಹು ಜಾಗ್ರತೆಯಿಂದ। ಕಾಂಡಕಾಂಡಕ್ಕೆ ಗಣಾರಾಧನೆಯಿಂದ। ಆದ್ಯಆದ್ಯಕ್ಕೆ ಕರ್ಪುರಕಾಯಿಗಳಿಂದ ನಂದಾ ಜ್ಯೋತಿಯಿಂದ। ಮಹಾಶಾಂತಿಯಿಂದ ಸಮಾಪ್ತವಾಗಿರುವುದು"[೫] ಎಂಬ ವಿವರವನ್ನು ನೋಡಿದರೆ, ಹಸ್ತಪ್ರತಿಯ ಬರವಣಿಗೆ ಸಮಾರಂಭಪೂರ್ವಕ ಜರುಗುತ್ತಿದ್ದುದು ಸ್ಪಷ್ಟ ವಾಗುತ್ತದೆ. ಗಾತ್ರಬಾಹುಳ್ಯದ ಈ ಪುಸ್ತಕದ ಬರವಣಿಗೆಗೆ ಒಂದು ವರ್ಷ ಕಾಲ ವಾದರೂ ಹಿಡಿದಿರಬಹುದು. ಅಷ್ಟು ದೀರ್ಘ ಅವಧಿಯಲ್ಲಿ ಆಗಾಗ ಗಣಾರಾಧನೆ, ಪೂಜೆ ಇತ್ಯಾದಿಗಳು ಜರುಗಿದುದು ಗಮನಿಸಬೇಕಾದ ಅಂಶವಾಗಿದೆ.

---

೪. ಅನಂತನಾಥ ಪುರಾಣ ೧೪-೮೩.

೫. ಧಾವಭಾಂ ೧೩೩೭.

ಕೃತಿಯೇ ಇರಲಿ, ಪ್ರತಿಯೇ ಇರಲಿ, ಅದರ ಉತ್ಪಾದನಾಕಾರ್ಯವು ಅಲೇಖನ ಹಂತ, ಲೇಖನಹಂತ, ಗ್ರಥನಹಂತ-ಎಂಬ ಮೂರು ಹಂತಗಳಲ್ಲಿ ಮುಕ್ತಾಯ ವಾಗುತ್ತಿದ್ದಿತು. ಅಲೇಖನಹಂತವೆಂಬುದು ತಾಳೆಗರಿ ಮತ್ತು ಕಾಗದಗಳನ್ನು ಸಂಗ್ರಹಿಸಿಕೊಳ್ಳುವುದು ಮತ್ತು ಬರವಣಿಗೆಗೆ ಯೋಗ್ಯವಾಗುವಂತೆ ಮಾಡಿಕೊಳ್ಳುವು ದಾಗಿದೆ. ಓಲೆಯ ವ್ಯಾಪಾರಿ, ಕವಿ ಇಲ್ಲವೆ ಲಿಪಿಕಾರರು ತೊಡಗಿಕೊಳ್ಳುವ ಹಂತ ವಿದು. ಆಮೇಲಿನ ಲೇಖನಹಂತವು ಲೇಖನಕಾರ್ಯವಾಗಿದ್ದು, ಇಲ್ಲಿ ಕವಿ ಇಲ್ಲವೆ ಲಿಪಿ ಕಾರರು ಕಂಟ-ಮಸಿ ಬಳಸಿಕೊಂಡು ಲೇಖನಕಾರ್ಯ, ಮಸಿಲೇಪನಕಾರ್ಯವನ್ನು ಪೂರೈಸುತ್ತಾರೆ. ಗ್ರಥನಹಂತವೆಂಬುದು ಇಂದಿನ ಬೈಂಡಿಂಗ್ ರೀತಿಯದು. ಕಟ್ಟಿಗೆ ಫಲಕಗಳ ಸಿದ್ಧತೆ, ಬಣ್ಣಲೇಪನ, ಚಿತ್ರಬಿಡಿಸುವಿಕೆ, ದಾರ ಪವಣಿಸುವಿಕೆ, ಅರಿವೆ ಹೊದಿಸುವಿಕೆ ಇತ್ಯಾದಿ ಕೆಲಸಗಳು ಈ ಹಂತದಲ್ಲಿ ನಡೆಯುತ್ತವೆ. ಈ ಮೂರೂ ಪ್ರಯತ್ನಗಳನ್ನು ಒಳಗೊಳ್ಳುವ ಉತ್ಪಾದನಾಹಂತದ ಘಟಕವೆನಿಸುವ ಲೇಖನ ಸಾಮಗ್ರಿ, ಲಿಪಿಕಾರ-ಲಿಪಿ-ಭಾಷೆ, ಗ್ರಂಥವಿನ್ಯಾಸ-ಗ್ರಥನಕ್ರಿಯೆಗಳನ್ನು ಇಲ್ಲಿ ವಿವೇಚಿಸಬಹುದಾಗಿದೆ.

## ಲೇಖನ ಸಾಮಗ್ರಿ:

ಲೇಖನಸಾಮಗ್ರಿ ಆಧಾರ, ಆಧೇಯ, ಲೇಪನವಸ್ತು-ಎಂದು ಮೂರು ಬಗೆ ಯಾಗಿದೆ. ಹಸ್ತಪ್ರತಿಗೆ ಸಂಬಂಧಿಸಿದಂತೆ ಬರೆಯಲು ಆಧಾರವಾಗಿರುವ ತಾಳೆಗರಿ, ಕಾಗದ, ಅರಿವೆ, ಹಲಗೆ, ಚರ್ಮಗಳು ಆಧಾರ. ಬರೆಯುವ ಸಾಧನಗಳಾದ ಕಂಟ, ಲೇಖನಿ ಇತ್ಯಾದಿಗಳು ಆಧೇಯ. ಕಪ್ಪು, ಮಸಿ, ಬಳಪಗಳು ಲೇಪನವಸ್ತುಗಳೆನಿ ಸುತ್ತವೆ.

**I-ತಾಳೆಗರಿ:** ತಾಳೆಗರಿಯು ತಾಳೆ ಮರದ ಎಲೆಯಾಗಿದೆ. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ, ಈ ಮರಗಳು ಪಶ್ಚಿಮಘಟ್ಟದಲ್ಲಿ ಬೆಳೆಯುತ್ತವೆ. ಇದಕ್ಕೆ 'ಪಡುವಣ ದೆಸೆಯಿಂದೊಪ್ಪುತ್ತಿರ್ಪ ಲವಣಾಂಬುಧಿಗೆ ಪ್ರುರ್ಬಂ ಪುಟ್ಟಿದ ಹಾಂಗಿರ್ದ ಘಟ್ಟದ ಸರೋವರಂಗಳಲ್ಲೇಕಪಾದಚರ ಕೆದರಿದ ಮಂಡೆ ಮೌನವ್ರತದಿಂದೊಪ್ಪು ತ್ತಿರ್ದ ದಿವ್ಯತಾಳಪತ್ರಮಂ ತಂದು'[೬] ಎಂಬ ಮಾತು ಪೂರಕವಾಗಿದೆ. ಕುಂಭಕೋಣಂ ಊರಿನ ಅರುಣಾಚಲಂ ಎಂಬ ಕವಿ ತಾಳೆಗರಿಯ ಮಹತ್ವವನ್ನು ಕುರಿತು 'ತಾಳವಿಲಾಸ' ಹೆಸರಿನ ತಮಿಳು ಪದ್ಯಕೃತಿಯನ್ನೇ ರಚಿಸಿದ್ದಾನೆ. ತಮಿಳುನಾಡನ್ನು "ತಾಳೆಮರಗಳ ತೊಟ್ಟಿಲು" ಎಂದು ಕರೆದ ಈತನು ತಾಳೆಯಲ್ಲಿ ೮೦೧ ಗುಣಗಳನ್ನು ಪಟ್ಟಿಮಾಡಿ ದ್ದಾನೆ. ತಾಳೆಯಲ್ಲಿ ತಾಳ, ಶ್ರೀತಾಳ ಎಂದು ಎರಡು ವಿಧ. ಇವುಗಳಲ್ಲಿ ತಾಳದ ಆಕಾರ ಸಣ್ಣದು, ಬಿರುಸು. ಇದು ಬಗ್ಗಿಸಿದರೆ ಮುರಿಯುತ್ತದೆ. ಶ್ರೀತಾಳದ ಆಕಾ

---

೬. ಮೈಹಸೂ I ಪೀಠಿಕೆ X

ದೊಡ್ಡದು. ಮೃದು. ಇದು ಬಗ್ಗಿಸಿದರೆ ಮುರಿಯುತ್ತದೆ. ಪ್ರಾಚೀನ ಕರ್ನಾಟಕದ ಬರವಣಿಗೆಯಲ್ಲಿ ಶ್ರೀತಾಳದ ಬಳಕೆ ಹೆಚ್ಚು. ಕವಿರಾಜಮಾರ್ಗ ಕಾಲದಿಂದಲೂ ನಮ್ಮಲ್ಲಿ ತಾಳೆಮರದ ಉಲ್ಲೇಖ ಕಂಡುಬರುತ್ತದೆ. ತಾಳ, ಶ್ರೀತಾಳ, ತಾಳೆ, ಹಿಂತಾಳ, ಕರತಾಳ, ತಾಲ-ಎಂಬ ಪದಗಳು ನಮ್ಮ ಸಾಹಿತ್ಯದಲ್ಲಿ ಬಳಕೆಯಾಗಿವೆ.

ಅರಬ ಪ್ರವಾಸಿ ಅಲ್ಬೆರುನಿ (೧೧ನೆಯ ಶತಮಾನ), ನಿಕೋಲೋ ಕೊಂತಿ (೧೫ನೆಯ ಶತಮಾನ), ಅಬ್ದುಲ್‌ರಜಾಕ, ದುಆರ್ತೆ ಬಾರ್ಬೋಸಾ (೧೬ನೆಯ ಶತಮಾನ), ಪಿರಾರ್ಡ ದೆ ಲವೆಲ್, ಪಿಯತ್ರೊ ದಲಿವಲಾ (೧೭ನೆಯ ಶತಮಾನ), ಪೀಟರ್ ಮುಂಡಿ (೧೭ನೆಯ ಶತಮಾನ), ನಿಕೋಲೊ ಮನೂಚಿ ಇವರು ತಾಳೆಗರಿಯ ಉಲ್ಲೇಖ ಮಾಡುತ್ತಾರೆ. ಇದನ್ನು ರಾಜನ ಕರಣಿಕರು ಬಳಸುತ್ತಿದ್ದುದನ್ನು ಬಾರ್ಬೋಸಾ, ಪೀಟರ್‌ಮುಂಡಿ ಹೇಳುತ್ತಾರೆ. ಅಬ್ದುಲ್ ರಜಾಕ ಈ ಬರವಣಿಗೆ ವರ್ಣರಹಿತವೆನ್ನುವುದನ್ನು ನೋಡಿದರೆ, ಕಪ್ಪುಲೇಪನ ಮಾಡದ ತಾಳೆಗರಿಯನ್ನೇ ಇವನು ಸೂಚಿಸುವಂತಿದೆ. ಬಾರ್ಬೋಸಾ "ಬರೆಯುವ ಮೊದಲು ಗರಿಯ ಮೂಲೆಯನ್ನು ಕೊಯ್ದು ಆ ತುಂಡಿನ ಮೇಲೆ ದೇವರ ಹೆಸರು ಬರೆದು ಒಗೆಯುತ್ತಾರೆ" ಎಂದು ತಿಳಿಸುತ್ತಾನೆ. ಮನೂಚಿಯು ಹೆಣ್ಣು ಋತುಮತಿಯಾದ ಸುದ್ದಿಯನ್ನು ಅರಿಷಿಣ ಹಚ್ಚಿದ ತಾಳೆಯ ಮೇಲೆ ಬರೆದು ತಿಳಿಸುತ್ತಾರೆ ಎನ್ನುತ್ತಾನೆ.೭ ಇಂದಿಗೂ ಪತ್ರ(Letter)ಗಳಿಗೆ ಓಲೆಯೆಂಬುದು ಬಳಕೆಯಾಗುವುದನ್ನು ನಾವು ಸ್ಮರಿಸಬಹುದು. ದಲಿವಾಲೆ ಇಟಲಿಯ ಗ್ರಂಥಭಾಂಡಾರದಲ್ಲಿ ಇಡಲು ಒಂದೆರಡು ತಾಳೆ ಗ್ರಂಥಗಳನ್ನು ಸಂಗ್ರಹಿಸಿದುದಾಗಿ ಹೇಳುತ್ತಾನೆ. ಹೀಗೆ ಹೆಚ್ಚು ಪ್ರಯೋಜನಕಾರಿಯಾಗಿರುವುದರಿಂದ ಇದರ ಬಗ್ಗೆ ಜನರಲ್ಲಿ ಭಕ್ತಿ ಹೆಚ್ಚು. ಈಗಲೂ ವೀರಶೈವ ವ್ಯಕ್ತಿಯ ಅಂತ್ಯಕ್ರಿಯಾ ಸಂದರ್ಭದಲ್ಲಿ ಮಂತ್ರಾಕ್ಷರಗಳನ್ನು ಗರಿಯ ಮೇಲೆಯೇ ಬರೆದು ಸಮಾಧಿಯಲ್ಲಿಡುವುದನ್ನು ಇಲ್ಲಿ ನೆನೆಯಬಹುದು.

"೧೯ನೆಯ ಶತಮಾನದಲ್ಲಿ ಕೂಡ ತಾಳಪತ್ರದ ಮೇಲೆ ಬರೆಯುವುದು ನಿಂತು ಹೋಗಿರಲಿಲ್ಲ. ಕ್ರಿ. ಶ. ೧೮೨೨ರಲ್ಲಿ ಶ್ರೀರಾಮಾಚಾರ್ಯರಿಂದ ಕರ್ನಾಟಕ ಕಾದಂಬರಿಯ ಓಲೆಯ ಪ್ರತಿ ಲಿಖಿತವಾದಂತೆ ತಿಳಿದುಬರುತ್ತದೆ. ಅಚ್ಚಾದ ಗ್ರಂಥಗಳನ್ನು ಕೂಡ ಓಲೆಗಳ ಮೇಲೆ ಬರೆದಿರುವುದು ಕಂಡುಬರುತ್ತದೆ. ಶ್ರೀಮತ್ ಚನ್ನಪುರಿ (ಮದ್ರಾಸ) ಹಿಂದೂಭಾಷಾಸಂಜೀವಿನಿ ಮುದ್ರಾಕ್ಷರಶಾಲೆಯಲ್ಲಿ ಮುದ್ರಿತವಾದ ಜೈಮಿನೀಭಾರತದ ಒಂದು ಪ್ರತಿಯನ್ನು ತಾಳಪತ್ರದ ಮೇಲೆ ಎರಡು ಸಂಪುಟಗಳಲ್ಲಿ ಲಿಖಿಸಿದೆ"* ಎಂಬ ಡಿ.ಎಲ್.ಎನ್. ಮಾತು ಗಮನಾರ್ಹವಾಗಿದೆ. ಸರಿಯಾಗಿ ಬಳಸಿದರೆ ಈ ಓಲೆ ಪ್ರತಿಗಳ ಆಯುಷ್ಯ ಒಂದು ಸಾವಿರ ವರ್ಷ.

---

೭. ಕನ್ನಡ ಹಸ್ತಪ್ರತಿಗಳು: ಒಂದು ಅಧ್ಯಯನ (ಬಿ. ಕೆ. ಹಿರೇಮಠ) ಪುಟ ೨೨-೨೪.

* ಕ.ಗ್ರ.ಸಂ. (ಡಿ.ಎಲ್.ಎನ್.) ೩೮, ೩೯

ಬೆಳಗಾವಿ ಶಾಸನದಲ್ಲಿ ಬರುವ "ಓಲೆಯ ಪೇರಿಂಗೆ ಓಲೆಯ ಸೂಡೆರಡು, ಆ ಹೊರೆಗೆ ಸೂಡೊಂದು"೮ ಎಂಬ ಮಾತು, ಇಂದಿನ ಕಾಗದ ವ್ಯಾಪಾರಿಗಳಂತೆ ಪ್ರಾಚೀನ ವ್ಯಾಪಾರಿಗಳೂ ಘಟ್ಟದಿಂದ ಈ ಓಲೆಗಳನ್ನು ತಂದು, ಮಾರಾಟಮಾಡುತ್ತಿದ್ದರೆಂದು ತಿಳಿಸುತ್ತದೆ. 'ಪತ್ರಿಕ ಓಲೆಯ ಮಾಳ್ಪವಂ' ಎಂದು ಮಂಗರಾಜ ಹೇಳುವುದನ್ನು ನೋಡಿದರೆ, ಬಹುಶಃ ವೀರಶೈವ ವರ್ತಕ ವರ್ಗದ 'ವಾಲಿ' ಅಡ್ಡ ಹೆಸರಿನ ಮನೆತನದವರು ಮೂಲತಃ ಈ ಉದ್ಯೋಗವನ್ನೇ ಮಾಡುತ್ತಿದ್ದರೆಂದು ಭಾವಿಸಬಹುದಾಗಿದೆ. ಇವರು ಉರುಟು ಎಲೆಗಳನ್ನು ಇಲ್ಲವೆ ಬರೆಯಲು ಹದಮಾಡಿದ ಎಲೆಗಳನ್ನು ಮಾರಾಟ ಮಾಡುತ್ತಿರಬಹುದು. ೧೨ನೆಯ ಶತಮಾನದಲ್ಲಿ ಓಲೆಯ ರಾಮಯ್ಯ, ಓಲೆಯ ಶಾಂತಯ್ಯ ಎಂಬ ಶರಣರು, ಆಮೇಲೆ ಕಡವೂರು ಓಲೆಯ ರಾಮಣಯ್ಯ, ತಿರುವಾರೂರು ಓಲೆಯ ತಮ್ಮಣ್ಣ, ತಿರುಚಿಟ್ಟಪಳ್ಳಿಯ ಓಲೆಯ ತಿಪ್ಪಣ್ಣ ಎಂಬವರು ಪ್ರಾಚೀನ ಸಾಹಿತ್ಯದಲ್ಲಿ ಕಂಡುಬರುತ್ತಾರೆ.೮

ತಾಡಪತ್ರಂ ದೃಢಂ ಸೌಮ್ಯಂ ಋಜುಸಾಗ್ರಂ ದ್ವಿಧಾಕೃತಂ।
ಮೃದುಲಂ ಯತ್ಪ್ರಶಸ್ತಂ ತತ್ ಮತಂ ಲೇಖಾವಿಲೇಖನೇ ॥

ಕರ್ಕಶಂ ಕಲ್ಮಷಂ ವಕ್ರಂ ಹೀನಾಗ್ರಂ ಸ್ಫುಟಿತಂ ಯುಗಂ।
ತಾಲಪತ್ರಂ ನ ತತ್ ಶ್ರೇಷ್ಠಂ ಮತಂ ಲೇಖಾವಿಲೇಖನೇ ॥

ಎಂಬ ಉಲ್ಲೇಖ ಉತ್ತಮ-ಅನುತ್ತಮ ಗರಿಗಳ ಬಗ್ಗೆ ವಿವರಣೆ ನೀಡುತ್ತದೆ. "ತಾಳೆಯೋಲೆಗಳು ಭದ್ರವಾಗಿ, ನಯವಾಗಿ, ನೇರವಾಗಿ, ಅಂಚು ತುದಿಗಳು ಸರಿಯಾಗಿರಬೇಕು, ಮೃದುವಾಗಿರಬೇಕು. ಇಂತಹವು ಲೇಖನಕ್ಕೆ ಪ್ರಶಸ್ತವಾದುವು. ಒರಟೊರಟಾಗಿ, ಕೊಳಕುಳ್ಳುವಾಗಿ, ಸೊಟ್ಟಸೊಟ್ಟವಾಗಿ, ತುದಿ ಅಂಚುಗಳು ಸರಿಯಾಗಿಲ್ಲದ, ಸೀಳಿಕೊಂಡಿರುವ ತಾಳಪತ್ರಗಳು ಲೇಖನಕ್ಕೆ ಶ್ರೇಷ್ಠವಾದುವಲ್ಲ* ಎಂದು ಈ ಶ್ಲೋಕಗಳ ಅರ್ಥ.

ತಾಳೆಗರಿಗಳನ್ನು ಬರವಣಿಗೆಗೆ ಸಿದ್ಧಮಾಡುವ ವಿಧಾನದ ಬಗ್ಗೆ ಬಹುಶಃ ಖಚಿತವಾಗಿ ತಿಳಿದುಬಂದಿಲ್ಲ. "ಮರದಿಂದ ಎಲೆಯ ಮೋತೆ ಹೊರಟು, ಇನ್ನೇನು ಎಲೆ ಬಿಚ್ಚಿ ಹರಡಿಕೊಳ್ಳುತ್ತದೆ ಎನ್ನುವಷ್ಟರಲ್ಲಿ ಅವುಗಳನ್ನು ಕತ್ತರಿಸಿ ತಂದು, ಒಂದು ವಾರ ಕಾಲ ಬಿಸಿಲಿನಲ್ಲಿ ಒಣಗಿಸುತ್ತಿದ್ದರು. ಅನಂತರ ಅವುಗಳನ್ನು ೪ ತಿಂಗಳವರೆಗಾದರೂ ನೆಲದಲ್ಲಿ ಹೂಳಿ, ಮತ್ತೆ ತೆಗೆದು ಶುದ್ಧಗೊಳಿಸಿ, ಬೇಕಾದ ಅಳತೆಗೆ ಕತ್ತರಿಸಿ, ಅಡಿಗೆ ಮನೆಯ ಅಟ್ಟಗಳಲ್ಲಿ ಇಡುತ್ತಿದ್ದರು. ಅವುಗಳು ಅಡಿಗೆಮನೆಯ ಹೊಗೆಯಿಂದ ಹದಗೊಳ್ಳುತ್ತಿದ್ದವು. ಹೀಗೆ ಹದಗೊಂಡುವನ್ನು ತಮಗೆ ಬೇಕಾದಾಗ ತೆಗೆದು

---

೮. ಶಾಸನ ಸಾಹಿತ್ಯ ಸಂಚಯ (ಅಣ್ಣಿಗೇರಿ-ಮಲ್ಲಾರಿ). ಪು-೧೫೨.

* ಹಸ್ತಪ್ರತಿಗಳ ಸಂರಕ್ಷಣೆ ಮತ್ತು ಮೇಲ್ಮೆ (ಕೆ.ಎಸ್. ಮಹಂತದೇವರು) ಪ್ರ.ಕ.ಸಂ. ೧೮೪.

ಉಪಯೋಗಿಸುತ್ತಿದ್ದರು"* ಎಂದು ಬರೋಡ ಓರಿಯಂಟಲ್ ಇನ್‌ಸ್ಟಿಟ್ಯೂಟ್‌ನ ಡೈರೆಕ್ಟರ್ ಬಿ. ಭಟ್ಟಾಚಾರ್ಯ ಹೇಳಿದರೆ, "ಗರಿಗಳನ್ನು ಬಿಸಿಲಿನಲ್ಲಿ ಒಣಗಿಸಬೇಕು. ಅನಂತರ ಬಿಸಿನೀರಿನಲ್ಲಿ ಕುದಿಸಿ ಒಣಗಿಸಬೇಕು. ಅವು ಚೆನ್ನಾಗಿ ಒಣಗಿದ ಮೇಲೆ ಗಾರೆಯ ಕಲ್ಲಿನಿಂದಲೋ ಶಂಖದಿಂದಲೋ ಉಜ್ಜಿ ನುಣುಪುಮಾಡಬೇಕು. ಅನಂತರ ಅವನ್ನು ತಕ್ಕಂತಹ ಅಳತೆಗೆ ಕತ್ತರಿಸಬೇಕು" ಎಂದು ಬಿಮಲ್‌ಕುಮಾರ ದತ್ತ ಹೇಳುತ್ತಾರೆ. ರಾಜಬಲಿ ಪಾಂಡೆ, ರಾಜೇಂದ್ರಲಾಲಮಿತ್ರ ಇನ್ನೂ ಬೇರೆ ರೀತಿಗಳನ್ನು ಹೇಳುತ್ತಾರೆ. ಅದೇನೇ ಇರಲಿ, ಬರೆವಣಿಗೆಗೆ ಹದಮಾಡಿದ ಪತ್ರವನ್ನು 'ಅಳಕ' (ಅಲೇಖ) ವೆಂದೂ ಕರೆಯುತ್ತಿರಬಹುದು. ಪಂಪನಲ್ಲಿ ಬರುವ 'ನುಣ್ಣನಪ್ಪಳಕದ ಕೇಡು' (ಪಂಭಾ ೧-೧೨) ಎಂಬುದು ಇದನ್ನೇ ಸೂಚಿಸುತ್ತಿರಬಹುದು.

ಬರೆಯುವ ಮೊದಲು ಕಟ್ಟುವುದಕ್ಕೆ ಅನುಕೂಲವಾಗುವುದರ ಸಲುವಾಗಿ ಪತ್ರಗಳ ಉದ್ದಳತೆ ಕಡಿಮೆಯಿದ್ದರೆ ಮಧ್ಯದಲ್ಲಿ ಒಂದು ರಂಧ್ರ, ಹೆಚ್ಚು ಇದ್ದರೆ ಎರಡು ರಂಧ್ರ, ಇನ್ನೂ ಹೆಚ್ಚು ಇದ್ದರೆ ಮೂರು ರಂಧ್ರಗಳನ್ನು ಮಾಡುತ್ತಾರೆ. ಈ ಗರಿಗಳ ಅಗಲಳತೆ ಅರ್ಧ ಅಂಗುಲದಿಂದ ಮೂರು ಅಂಗುಲ, ಉದ್ದಳತೆ ಹೆಚ್ಚೆಂದರೆ ಮೂರು ಅಡಿ ಇರಬಹುದು. ತಾನು ಲಿಪಿಸಲಿರುವ ಕೃತಿ ಅಥವಾ ಕೃತಿಗಳಿಗೆ ಸಾಲುವಷ್ಟು ಗರಿಗಳನ್ನು ಲಿಪಿಕಾರರು ಏಕಕಾಲಕ್ಕೆ ಸಂಗ್ರಹಿಸುತ್ತಿದ್ದರೆಂದು ಕಾಣುತ್ತದೆ. ಈ ವರೆಗಿನ ಹಸ್ತಪ್ರತಿ ಕಟ್ಟುಗಳಲ್ಲಿ ಬೇರೆ ಬೇರೆ ಸ್ವರೂಪದ ಎಲೆಗಳ ಕಲಬೆರಕೆ ಸಾಮಾನ್ಯವಾಗಿ ಕಂಡುಬರುವುದಿಲ್ಲವಾದುದರಿಂದ ಹೀಗೆ ಹೇಳಬಹುದಾಗಿದೆ. ಈ ಎಲೆಗಳನ್ನು ಕತ್ತರಿಸುವ ರೀತಿ, ಇದಕ್ಕಾಗಿ ಬಳಸುವ ಉಪಕರಣಗಳ ವಿವರ ತಿಳಿದುಬರುವುದಿಲ್ಲ. ಈ ಕೆಲಸ ಮಾಡುವವರ ವಿಷಯವೂ ಗೊತ್ತಾಗುವುದಿಲ್ಲ. ಆದರೆ ಎಲೆಯ ಕಟ್ಟುಗಳು ಬರವಣಿಗೆಗೆ ಅಣಿಯಾಗುವ ಸ್ವರೂಪವನ್ನು "ದಿವ್ಯತಾಳಪತ್ರಮಂ ತಂದು, ದ್ವಿತೀಯ ರಂಧ್ರಮಂ ಮಾಡಿ, ಬಿಂಗದ ಹೊರೆಯಂತೊಂದೊಂದಂ ಪೊಂದಿಸಿಕ್ಕಿಲದಲುಭಯಂ ಪಲಗೆಯುಷ್ಟಲೋವೆಯುಷ್ಟ ಮೂಲೆಗಳಿಂದತ್ಯಂತಲಂಕಾರವಾಗಿ ಕಣ್ಗೆ ಚೆಲ್ವಾಗೊಪ್ಪಲ್ಪಟ್ಟ ದಿವ್ಯಶಿವಾಲಯ"[೯]ವೆಂದು ಒಬ್ಬ ಲಿಪಿಕಾರ ವರ್ಣಿಸಿದುದನ್ನು ಗಮನಿಸಬಹುದು.

**ಕಾಗದ:** ಬರೆಯಲು ತಾಳೆಗರಿಯಂತೆ ಉಪಯೋಗಿಸಲ್ಪಡುತ್ತಿದ್ದ ಇನ್ನೊಂದು ಸಾಧನವೆಂದರೆ ಕಾಗದ. ಅಭಿನವ ಮಂಗರಾಜನ (೧೩೯೮) 'ಪತ್ತಳಿಕೆಯೆಸಲು ಕಾಗದಮುಕ್ಕುಂ'[೧೦] ಎಂಬ ಉಲ್ಲೇಖ, ಇದು ೧೪ನೆಯ ಶತಮಾನದಷ್ಟು ಪೂರ್ವದಲ್ಲಿಯೇ ಕರ್ನಾಟಕವನ್ನು ಪ್ರವೇಶಿಸಿದ್ದಿತೆಂದು ಸ್ಪಷ್ಟಪಡಿಸುತ್ತದೆ. ಕ್ರಿ.ಶ. ೧೦೨ರಲ್ಲಿ ತ್ಸಾಯ್‌ಲುಪ್ ಎಂಬ ಚೀನೀ ವ್ಯಕ್ತಿಯಿಂದ ಕಂಡುಹಿಡಿಯಲ್ಪಟ್ಟ ಇದು,

---

* ಕನ್ನಡ ಹಸ್ತಪ್ರತಿಗಳ ಇತಿಹಾಸ (ಎಚ್. ದೇವೀರಪ್ಪ). ಪು-೧೪

೯. ಮೈಹಸೂ I ಪೀಠಿಕೆ X

೧೦. ಅಭಿನವಾಭಿಧಾನ ೧೦೫-೧೫.

ಮುಹಮ್ಮದೀಯರ ಮೂಲಕ ಕಾಗಜ್ ಹೆಸರಿನಿಂದ ಭಾರತವನ್ನು, ಬಳಿಕ ಕರ್ನಾಟಕವನ್ನು ಪ್ರವೇಶಿಸಿತು.[೧೧]

ಕಾಗದಪ್ರತಿಗಳನ್ನು ಸ್ವದೇಶಿಕಾಗದ ಮತ್ತು ವಿದೇಶಿಕಾಗದವೆಂದು ವರ್ಗೀಕರಿಸ ಬಹುದು. ಸ್ವದೇಶಿ ಕಾಗದ ಬೆಳೆದುಬರುತ್ತಿದ್ದಂತೆ ೧೮ನೆಯ ಶತಮಾನದ ಸುಮಾರಿಗೆ ನುಣುಪಾದ ವಿದೇಶಿ ಕಾಗದ ಬಳಕೆಯಾಗತೊಡಗಿತು. ಸ್ವದೇಶಿ ಕಾಗದವನ್ನು ಗೃಹ ಕೈಗಾರಿಕೆ ಎಂಬಂತೆ ಹತ್ತಿಬಟ್ಟೆಯ ಚೂರುಗಳನ್ನು ನೀರಿನಲ್ಲಿ ನೆನೆಹಾಕಿ ತಯಾರಿಸು ತ್ತಿದ್ದರು. ಬಟ್ಟೆಯ ತುಂಡಿಗೆ ಕೋರಿ ಎಂದು ಹೆಸರು. ಹೀಗಾಗಿ ಇಂಥ ಕಾಗದವನ್ನು ಕೋರಿಕಾಗದ ಎಂದು ಕರೆಯುತ್ತಿದ್ದರು. ದಪ್ಪನೆಯ ಇದು ಕಂದುಬಣ್ಣದ್ದಾಗಿದ್ದು ೬ಅಂಗುಲ ಅಗಲ, ೧೨ ಅಂಗುಲ ಉದ್ದದ ವರೆಗಿನ ಸಣ್ಣದೊಡ್ಡ ಆಕಾರಗಳಲ್ಲಿ ಸಿಗುತ್ತದೆ. ಕಟ್ಟಲು ಅನುಕೂಲವಾಗುವಂತೆ ಕೋರಿ ಕಾಗದಗಳ ಮಧ್ಯದಲ್ಲಿ ರಂಧ್ರಮಾಡಿ ದಾರ ದಿಂದ ಪವಣಿಸುತ್ತಿದ್ದರು. ಕೆಲವೊಮ್ಮೆ ಮಗ್ಗುಲಿಗೆ ಹೊಲಿಗೆ ಹಾಕುತ್ತಿದ್ದು. ಇಂಥವು ಗಳನ್ನು ವಹಿ ಎಂದು ಕರೆಯುತ್ತಿದ್ದರು. ವಿದೇಶಿಕಾಗದವು ಕೋರಿಕಾಗದಕ್ಕಿಂತ ತೆಳ್ಳಗೆ ಮತ್ತು ನುಣುಪು ಇದ್ದು, ಸರಾಗವಾಗಿ ಬರೆಯಲು ಅನುಕೂಲವಾಗಿರುತ್ತದೆ. ನೀಲಿ ಬಣ್ಣದ ವಿದೇಶಿಕಾಗದಗಳನ್ನೂ ಬರವಣಿಗೆಗಾಗಿ ಪ್ರಾಚೀನರು ಬಳಸುತ್ತಿದ್ದರು. ಇವು ಗಳನ್ನು 'ನೀಲಿಹೊತ್ತಿಗೆ' ಎಂದು ಕರೆಯುತ್ತಿದ್ದರು. ಬಹುಶಃ ವೈರಾಗ್ಯ ವಿಷಯದ ಕೃತಿಗಳಿಗಾಗಿ ಈ ಕಾಗದ ಉಪಯೋಗಿಸುವ ಪದ್ಧತಿ ಬಳಕೆಯಲ್ಲಿದ್ದಿತು. ಅದಕ್ಕಾಗಿಯೇ ಯುವಕರಿಗೆ ನೀಲಿಹೊತ್ತಿಗೆ ಓದಬಾರದೆಂದು ಹಿರಿಯರು ಹೇಳುತ್ತಿದ್ದರೆಂದು ಕಾಣುತ್ತದೆ.

ಸಾಲುಗಳು ವಕ್ರವಾಗಬಾರದೆಂದು ಬರೆಯುವ ಮೊದಲು ಕಾಗದದ ಮೇಲೆ ದಾರದ ರೇಖೆಗಳನ್ನು ಮೂಡಿಸುತ್ತಿದ್ದರು, ಮತ್ತು ಹುಳು ಮುಟ್ಟಬಾರದೆಂದು ಪಟಕದ ನೀರಿನಲ್ಲಿ ಅದ್ದುತ್ತಿದ್ದರು. ಈ ವಿಷಯ "ಮೊದಲು ಪಟಕದ ನೀರಿನಲ್ಲಿ ಎದ್ದಿ ಒಣಗಿಸಬೇಕು. ನಂತರ ಒಂದೊಂದು ಓಲೆಗೆ ಎಷ್ಟೆಷ್ಟು ವಳಿಗಳನ್ನು ಬರೆಯಬೇಕೊ, ಅಷ್ಟು ದಾರದ ಸುತ್ತುಗಳನ್ನು ವಾಲಿಗೆ ಸರಿಯಾಗಿ ಹಲಗೆಯಲ್ಲಿ ಸುತ್ತಿ, ಆ ದಾರ ಸುತ್ತಿದ ಹಲಗೆಯ ಮೇಲೆ ಎಳೆಯಬೇಕು (ವತ್ತಬೇಕು.) ಅಂದರೆ ಗೆರೆಗಳು ಮೂಡು ವವು. ಆ ಗೆರೆಗಳ ಮೇಲೆ ಬರೆದರೆ ವಳಿಗಳು ಸೊಟ್ಟಾಗುವದಿಲ್ಲ. ಪಟಕದ ನೀರಿನಲ್ಲಿ ತೋಯಿಸುವುದರಿಂದ ವಾಲಿಗಳಿಗೆ ಎಷ್ಟು ದಿವಸಗಳಿಗಾದರೂ ನುಸಿ ಮುಟ್ಟುವದಿಲ್ಲ. ನಂತರ ಅಲತೆಯ ಮಸಿಯಿಂದ ಬರೆಯಬೇಕು. ಅಂದರೆ ಅಕ್ಷರಗಳು ತೊಳೆದರೆ ಸಹ ಹೋಗುವುದಿಲ್ಲ". "ಇನ್ನು ಪಟಕದ ನೀರು: ಅಂದರೆ ಪಾವಸೇರು ಪಟಕವನ್ನು ಒಂದು ಘಡೆ ನೀರಿನಲ್ಲಿ ಪುಡಿಮಾಡಿ ಹಾಕಬೇಕು. ಈ ನೀರನ್ನು ಪರಾತದಲ್ಲಿ ಹಾಕಿ ಹಾಳೆಯನ್ನು ಎದ್ದಿ ತೆಗೆದು ಒಣಗಿಸಬೇಕು. ಈ ನೀರನ್ನು ಹೆಚ್ಚಿಗೆ ಬೇಕಾದರೆ ಈ

೧೧. ಭಾರತೀಯ ಗ್ರಂಥಸಂಪಾದನ ಪರಿಚಯ ೧೯ (ಅ.ಟಿ.)

ಪ್ರಮಾಣದಂತೆ ಹೆಚ್ಚಿಗೆ ಮಾಡಿಕೊಳ್ಳಬೇಕು"[೧೨] ಎಂಬ ಉದ್ಧರಣೆಗಳಿಂದ ತಿಳಿದು ಬರುತ್ತದೆ.

**ಅರಿವೆ:** ತಾಳೆಗರಿ, ಸ್ವದೇಶಿಕಾಗದ, ವಿದೇಶಿಕಾಗದಗಳನ್ನು ಬಿಟ್ಟರೆ ನಿರೂಪ ಮೊದಲಾದವುಗಳ ಬರವಣಿಗೆಗಾಗಿ ಕೆಲವೊಮ್ಮೆ ಅರಿವೆಯನ್ನು ಬಳಸುತ್ತಿದ್ದರೂ ಗ್ರಂಥಲೇಖನಕ್ಕೆ ಬಳಸಿಲ್ಲವೆಂದು ತೋರುತ್ತದೆ. 'ಶರಮೊಂದಂ ತೆಗೆದು ನಿಜೋದರದಿಂ ಲೆಕ್ಕಣಿಕೆ ಮಾಡಿ, ಗಜಮದ ಮಸಿಯುಂ ತರಿಸಿ, ಪತಾಕಾಪಟದೊಳ್ ಬರೆದಟ್ಟಿದನ್'[೧೩] ಎಂಬ ಗದಾಯುದ್ಧದ ಮಾತನ್ನು ಇಲ್ಲಿ ಗಮನಿಸಬಹುದು.

ಇದಲ್ಲದೆ ಅರಿವೆಯಿಂದ ಮಾಡಿದ 'ಕಡತ' ತಾತ್ಕಾಲಿಕ ಬರವಣಿಗೆಗಾಗಿ ಬಳಕೆಯಾಗುತ್ತಿತ್ತೇ ಹೊರತು, ಬಹುಕಾಲ ಉಳಿಯುವ ಗ್ರಂಥಲೇಖನಕ್ಕೆ ಅಲ್ಲ. ದಪ್ಪನೆಯ ಅರಿವೆಗೆ ಕರಿಯ ಬಣ್ಣದ ಸರಿ ಸವರಿ ಸಿದ್ಧಮಾಡುತ್ತಿದ್ದ ಇದನ್ನು, ಸುತ್ತಿ ಇಲ್ಲವೆ ಮಡಿಸಿ ಇಡುತ್ತಿದ್ದರು. ಅಳಿಸಿ ಮತ್ತೆ ಬರೆಯಲು ಅನುಕೂಲವಾಗುತ್ತಿದ್ದ ಇದರ ಉಲ್ಲೇಖ ಕರ್ನಾಟಕದಲ್ಲಿ ಮಧ್ಯಯುಗದಷ್ಟು ಪ್ರಾಚೀನ.

"ಅಂತು ಭರತಾವನೀಮಂಡಳ ಷಟ್ಖಂಡಮಂ ಕಡತಕ್ಕೆ ತಂದು"[೧೪]
"ಕಡತಕ್ಕೇರಿತ್ತು ನಾಲ್ಕುಂ ಕಡಲ ಕಡೆವರಂ ಧಾತ್ರಿ"[೧೫]
"....ಚೇರಮನ ಚೋಳನ ಪಾಂಡ್ಯನ ನಾಡೆ ಕೈಗೆವಂ
ದುದು ಕಡತಕ್ಕಮುಂಡಿಗೆಗವೋಲಿಗಮೀ ಶುಭತುಂಗದೇವನಾ"[೧೬]

-ಎಂಬ ಉಲ್ಲೇಖಗಳು ಕರ್ನಾಟಕದಲ್ಲಿ ಬಳಕೆಯಾಗುತ್ತಲಿದ್ದ ಕಡತಗಳ ಪ್ರಾಚೀನತೆಯನ್ನು ಸೂಚಿಸುತ್ತವೆ. ಶಾಸನಗಳಲ್ಲಿ ಕಡತವೆಗ್ಗಡೆ ಪದವಿದೆ. ಕಡತದ ಚಾವಡಿಯ ಉಲ್ಲೇಖವೂ ಕೆಲವೆಡೆ ಬರುತ್ತದೆ. ಕನ್ನಡ ಕವಿಗಳೂ ಈ ಪದವನ್ನು ಆಗಾಗ ಬಳಸಿದ್ದಾರೆ. ಮಕ್ಕಳು ಶಾಲೆಗೆ ಹೋಗುವಾಗ ಕಡತವನ್ನು ಒಯ್ಯುತ್ತಿದ್ದರೆಂದು ಪಾಯಣ ವರ್ಣಿ ಹೇಳುತ್ತಾನೆ.[೧೭] ಕಾವ್ಯದ ಕಚ್ಚಾ ಬರವಣಿಗೆಗೂ ಇದನ್ನು ಬಳಸುತ್ತಿರಬೇಕು. "ಬರಹವನರಿಯೆನಾ ಪದವಿಟ್ಟು ಕಡತದೊಳು ಮಾಡಿದ ಕೃತಿಯಲ್ಲ" ಎಂಬ ಕನಕ ದಾಸನ ಮಾತು ಇದನ್ನೇ ಸೂಚಿಸುತ್ತದೆ.[೧೮] ಮದ್ರಾಸ ಪ್ರಾಚ್ಯ ಸಂಶೋಧನಾಲಯದಲ್ಲಿ ಕೆಳದಿನೃಪವಿಜಯವನ್ನು ಬರೆದ ಒಂದು ಕಡತವಿದೆಯೆಂದು ಆ ಸಂಸ್ಥೆಗೆ ಸಂಬಂಧಿಸಿದ ಹಸ್ತಪ್ರತಿ ಸೂಚಿ VI-೧೧೨೪ದಿಂದ ತಿಳಿದುಬರುತ್ತದೆ. ಇಲ್ಲಿಯೇ

೧೨. ಕನ್ನಡ ಗ್ರಂಥಸಂಪಾದನ ಶಾಸ್ತ್ರ (ಎಂ. ಎಂ. ಕಲಬುರ್ಗಿ). ಅನುಬಂಧ
೧೩. ಗದಾಯುದ್ಧ. ೬–೨.
೧೪. ಶಾಂತಿಪುರಾಣ (ಪೊನ್ನ) XI–೮೪ಗ
೧೫. S.I.I. IX–i– ೩೪೩ (೧೨೨೬)
೧೬. ಸೂಕ್ತಿಸುಧಾರ್ಣವ (ಮಲ್ಲಿಕಾರ್ಜುನ) V–೭
೧೭. ಜ್ಞಾನಚಂದ್ರಚರಿತೆ (ಪಾಯಣವರ್ಣಿ) II–೨.
೧೮. ಮೋಹನ ತರಂಗಿಣಿ (ಕನಕದಾಸ) I–೨೧.

೧೧೨೩ನೆಯ ನಂಬರಿನ ಪ್ರತಿಯಲ್ಲಿ ಕೆಳದಿನೃಪವಿಜಯವನ್ನು ಕುರಿತಂತೆ "ಶಕವರ್ಷ ೧೭೨೭ನೆಯ ಕ್ರೋಧನ ಸಂ॥ ದ ಬ॥ ೧೨ ಉ ಈ ವಂಶಾವಳಿ ಪ್ರತಿಯನ್ನು ಫರಂಜಿ ಮೇಜರ್ ಮಕ್ಕಂಜಿ ಸಾಹೇಬರ ಕಡೆ ನಾರಾಯಣರಾಯರು ಕಡತದ ಮೇಲೆ ಬರೆಯಿಸಿ ಕೊಂಡು ಹೋದರು" ಎಂಬ ಸೂಚನೆ ಸಿಗುತ್ತದೆ. ಇಂದಿಗೂ ಮಠ-ಮಾನ್ಯಗಳಲ್ಲಿ, ದೇಶಮುಖ ಮೊದಲಾದ ಮನೆತನಗಳಲ್ಲಿ, ಪ್ರಾಚ್ಯಸಂಶೋಧನ ಸಂಸ್ಥೆಗಳಲ್ಲಿ ಕಡತ ಗಳನ್ನು ಕಾಣಬಹುದು.

**ಹಲಗೆ:** ಕೆಲವೊಮ್ಮೆ ಕಪ್ಪುಬಣ್ಣ ಬಳಿದ ಕಟ್ಟಿಗೆಯ ಹಲಗೆಯನ್ನು ತಾತ್ಪೂರ್ತಿಕ ಬರವಣಿಗೆಗಾಗಿ ಬಳಸುತ್ತಿದ್ದರು. ಬಹುಶಃ ಪದ್ಯಗಳನ್ನು ರಚಿಸುವ ಮೊದಲ ಹಂತದಲ್ಲಿ ಇದನ್ನು ಬಳಸಿ, ಪೂರ್ಣವಾದ ಬಳಿಕ ಎರಡನೆಯ ಹಂತದಲ್ಲಿ ಅವುಗಳನ್ನು ಇಲ್ಲಿಂದ ಹಸ್ತಪ್ರತಿಗೆ ವರ್ಗಾಯಿಸುತ್ತಿರಬಹುದು. ಕುಮಾರವ್ಯಾಸನ 'ಹಲಗೆ ಬಳಪವ ಹಿಡಿಯದೊಂದಗ್ಗಳಿಕೆ', 'ಬಳಸಿ ಬರೆಯಲು ಕಂಠ ಪತ್ರದ ಉಲುಹುಗೆಡದಗ್ಗಳಿಕೆ" ಎಂಬ ಎರಡು ಮಾತುಗಳು ಈ ಎರಡು ಹಂತಗಳನ್ನೇ ಸೂಚಿಸುತ್ತಿರಬಹುದು. ಇಲ್ಲಿಯ ಹಲಗೆ-ಬಳಪ, ಕಂಠ-ಪತ್ರ ಎಂಬ ನಾಲ್ಕು ಶಬ್ದ ಗಳು ಅಥವಾ ಎರಡು ಜೋಡಿಗಳು ಗಮನಾರ್ಹವೆನಿಸಿವೆ.

**ಚರ್ಮ:** ತೀರ ಪ್ರಾಚೀನಕಾಲದಲ್ಲಿ ಚರ್ಮವನ್ನು ಬರವಣಿಗೆಗಾಗಿ ಬಳಸು ತ್ತಿರುವ ಸಂಭವವಿದೆ. ಏಕೆಂದರೆ 'ಪುಸ್ತಕ' ಎಂಬುದು 'ಪೋಸ್ತ' ಎಂಬ ಪದದಿಂದ ನಿಷ್ಪನ್ನವಾಗಿದೆಯೆಂದೂ, ಇದರ ಅರ್ಥ ಚರ್ಮವೆಂದೂ ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಸುಬಂಧುವಿನ ವಾಸವದತ್ತಾದಲ್ಲಿ ನಕ್ಷತ್ರಗಳನ್ನು ವರ್ಣಿಸುವಾಗ 'ವಿಶ್ವಂಗಣಯತೋ ಧಾತುಶ್ಶಶಿಕಠಿನೀ ಖಂಡೇನ ತಮೋ ಮಷೀ ಶ್ಯಾಮೇ ಅಜಿನ ಇವ ವಿಯತಿ ಸಂಸಾರಸ್ಯಾತಿಶೂನ್ಯತ್ವಾತ್ ಶೂನ್ಯ ಬಿಂದವ ಇವ ವಿಲಿಖಿತಾಃ.... ತಾರಾವ್ಯರಾಜನ್ತ"[೧೯] ಎಂದು ಹೇಳಿರುವುದನ್ನು ಇಲ್ಲಿ ನೆನೆಯಬೇಕು. ಆದರೆ ಇದನ್ನು ಗ್ರಂಥಗಳಂಥ ದೊಡ್ಡ ಕೃತಿಗೆ ಬಳಸಿರಲಾರರು.

ಇವುಗಳನ್ನು ಬಿಟ್ಟರೆ ಬಿರುಸು ವಸ್ತುಗಳಾದ ಕಲ್ಲು, ಸುಟ್ಟ ಮಣ್ಣುಗಳನ್ನು ಬರವಣಿಗೆಗೆ ಬಳಸಿದ್ದರೂ ಗ್ರಂಥಗಳಿಗಾಗಿ ಬಳಸಿಲ್ಲ. ಹೀಗಿದ್ದೂ ಶ್ರವಣಬೆಳಗೊಳದಲ್ಲಿ ಶಿಲೆಯ ಮೇಲೆ ಬರೆದ ಬೊಪ್ಪಣ ಪಂಡಿತನ 'ನಕ್ಷತ್ರಮಾಲಿಕೆ' ಹೆಸರಿನ ೨೭ ಪದ್ಯಗಳ ಗುಚ್ಛ ಕರ್ನಾಟಕದಲ್ಲಿ ಸಿಗುವ ಏಕೈಕ ಕೃತಿಯಾಗಿದೆ.[೨೦] ಅದೇನೇ ಇದ್ದರೂ ಅರಿವೆ, ಕಡತ, ಹಲಗೆ, ಚರ್ಮ, ಕಲ್ಲು, ಸುಟ್ಟಮಣ್ಣುಗಳ ಮೇಲೆ ಬರೆದುವು ಬಹುಪ್ರತಿರೂಪ ದಲ್ಲಿ ಸಿಗುವುದಿಲ್ಲವಾಗಿ ಮತ್ತು ಇವುಗಳಲ್ಲಿ ಕೆಲವು ಹಗುರಾದ ವಸ್ತುವಲ್ಲವಾಗಿ ಇವುಗಳ ಮೇಲೆ ಬರೆದವುಗಳನ್ನು 'ಹಸ್ತಪ್ರತಿ' ಎನ್ನುವಂತಿಲ್ಲ.

---

೧೯. ಕ. ಗ್ರ. ಸಂ (ಡಿ.ಎಲ್.ಎನ್) ೩೬.

೨೦. E. C. -II ೩೩೬ (ಹೊಸ ಆವೃತ್ತಿ)

**II–ಕಂಟ:** ಲಿಪಿಕಾರರು ತಾಳೆಗರಿಯ ಮೇಲೆ ಬರೆಯಲು ದಬ್ಬಣದಂಥ ಉಪಕರಣವಾದ ಕಂಟವನ್ನು ಬಳಸುತ್ತಿದ್ದರು. ಇದರ ತುದಿಯು ಮುಳ್ಳಿನಂತೆ (ಕಂಟಕ=ಮುಳ್ಳು) ಇದ್ದುದರಿಂದ ಕಂಟವೆಂದು ಕರೆಯುತ್ತಿದ್ದರೆಂದು ತೋರುತ್ತದೆ, ಇದು ಕಂಠ ಎಂಬ ಪರ್ಯಾಯ ರೂಪದಲ್ಲಿಯೂ ಸಿಗುತ್ತದೆ. 'ಕಂಟಮಾನೆ ಬಾಳ್ಮೊನೆಯಾಗಿರೆ'[೨೧] ಎಂಬ ಜನ್ನನ ಹೇಳಿಕೆ', 'ಬಳಸಿ ಬರೆಯಲು ಕಂಠಪತ್ರದ ಉಲುಹುಗೆಡದಗ್ಗಳಿಕೆ' ಎಂಬ ಕುಮಾರವ್ಯಾಸನ ಹೇಳಿಕೆಗಳು ಕಂಟದ ಪ್ರಾಚೀನತೆ–ಪ್ರಸಿದ್ಧಿಗೆ ಉದಾಹರಣೆಯೆನಿಸಿವೆ. ಕಬ್ಬಿಣ, ಕಂಚು, ಹಿತ್ತಾಳೆಗಳಿಂದ ಇವುಗಳನ್ನು ಸಿದ್ಧಮಾಡುತ್ತಿದ್ದರೂ ತುದಿ ಮಾತ್ರ ಕಬ್ಬಿಣ ಇಲ್ಲವೆ ಉಕ್ಕಿನದಾಗಿರುತ್ತಿತ್ತು. ಇಟ್ಟಿಗೆ, ದಂತ, ಚಿತ್ರ, ಶಿಲ್ಪ, ಕಮ್ಮರ ಕೆಲಸ ಮಾಡುವ ಅಯ್ಯಣನನ್ನು ಕುರ್ತಕೋಟಿ ಶಾಸನ 'ಕಂಟದ ಬೊಮ್ಮ' ಎಂದು ಕರೆದಿದೆ.[೨೨] ಬಹುಶಃ ಸುಂದರ ಮತ್ತು ಉತ್ತಮಗುಣ ಮಟ್ಟದ ಕಂಟಗಳನ್ನು ಸಿದ್ಧಪಡಿಸುತ್ತಿದ್ದ ಕಾರಣ ಇವನಿಗೆ ಈ ವಿಶೇಷಣ ಬಂದಿರಬೇಕು. ಈ ಕಂಟವನ್ನು ನಾವು ಇಂದು ಲೆಕ್ಕಣಿಕೆ ಹಿಡಿಯುವ ರೀತಿಯಲ್ಲಿಯೇ ಹಿಡಿದು ಬರೆಯುತ್ತಿದ್ದರೆಂದು ಸೋಮನಾಥಪುರ ದೇವಾಲಯದ ಶಿಲ್ಪದಿಂದ ವ್ಯಕ್ತವಾಗುತ್ತದೆ. ಈ ಕಂಟಕ್ಕೆ ಕೆಲವೊಮ್ಮೆ ಗೆಜ್ಜೆಯನ್ನೂ ಅಳವಡಿಸುತ್ತಿದ್ದರು. ಬರೆಯುವಾಗ ಇದರ ಧ್ವನಿ ಕಿವಿಗೆ ಹಿತವೆನಿಸುತ್ತಿದ್ದಿತು. ಕುಮಾರವ್ಯಾಸ ಹೇಳುವ 'ಬಳಸಿ ಬರೆಯಲು ಕಂಠಪತ್ರದ ಉಲುಹುಗೆಡದಗ್ಗಳಿಕೆ' ಎಂಬುದು ಇದನ್ನೇ ಸೂಚಿಸುತ್ತಿರಲೂಬಹುದು. ಕೆಲವೊಮ್ಮೆ ಇದನ್ನು ಸುಂದರವಾಗಿ ಗೋಪುರದಂತೆ ಅಲಂಕರಿಸುತ್ತಿದ್ದರು. ಇದರ ಒಂದು ತುದಿ ಇಲ್ಲವೆ ಎರಡೂ ತುದಿ ಚೂಪಾಗಿರುತ್ತಿದ್ದವು. ಒಂದು ತುದಿ ಮೊಂಡಾದರೆ ಇನ್ನೊಂದು ತುದಿಯನ್ನು ಬಳಸುತ್ತಿದ್ದರು. ಇವು ಮೊಂಡಾಗದಂತೆ ಬಿದಿರಿನ ಕೊಳವೆಯಲ್ಲಿ ರಕ್ಷಿಸುತ್ತಿದ್ದರು. ಇದರ ಉಲ್ಲೇಖ ನಮ್ಮ ಸಾಹಿತ್ಯದಲ್ಲಿ, ಪ್ರವಾಸಿಗಳ ವರದಿಯಲ್ಲಿ ಆಗಾಗ ಕಂಡುಬರುತ್ತದೆ. 'ನಾರಾಚಮೆನೆ ಕಂಠ' ಎಂದು ಮಂಗರಾಜ ಹೇಳುತ್ತಾನೆ.[೨೩] ಮುಳವಳ್ಳಿ ಮಠದಲ್ಲಿರುವ ಪುಸ್ತಕಪಟ್ಟಿಯ ಜೊತೆ 'ಕಂಠಪರ್ನಯರಡು', 'ನಾರಂಜಕಂಠ' ಎಂಬ ಉಲ್ಲೇಖಗಳಿವೆ.[೨೪] ಇಲ್ಲಿ ಎಲೆಯ ಮೇಲೆ ಬರೆಯಲೂ ಎಲೆಗಳನ್ನು ಕೊರೆಯಲೂ ಉಪಯೋಗಿಸುತ್ತಿದ್ದುದು ಕಂಠಪರ್ನ, ಕೇವಲ ಬರೆಯಲು ಬಳಸುವುದು 'ನಾರಾಂಜ (ನಾರಾಚ=ಬಾಣ) ಕಂಠ'ವಾಗಿರಬಹುದು. ತಮಿಳಿನಲ್ಲಿ ಕಂಠ ಎಂಬುದಕ್ಕೆ 'ಅಣಿ' ಎನ್ನುತ್ತಾರೆ. ಗುಂಡೆಳುತ್ತಾಣಿ, ವಾರೆಳುತ್ತಾಣಿ, ಮಡಕ್ಕೆಳುತ್ತಾಣಿ ಇತ್ಯಾದಿ ಕಂಠಪ್ರಕಾರಗಳ ಉಲ್ಲೇಖ ಅಲ್ಲಿ

---

೨೧. ಅನಂತನಾಥಪುರಾಣ (ಜನ್ನ) II–೨೪.

೨೨. S.I.I.–IX–ii–೧೨೭.

೨೩. ಅಭಿನವಾಭಿಧಾನ (ಮಂಗರಾಜ) ೧೦೬–೧೫.

೨೪. ಬೆಂಹಸೂ–೨೬೮.

ಸಿಗುತ್ತದೆ.೨೫ ಈ ಕಂಠಗಳಿಂದ ತಾಳೆಗರಿಗಳ ಮೇಲೆ ಅಕ್ಷರಗಳನ್ನು ಕೊರೆಯು ತ್ತಿದ್ದರು.

**ಲೇಖನಿ:** ತಾಳೆಪ್ರತಿಯ ಮೇಲೆ ಬರೆಯಲು ಉಪಯೋಗಿಸುವುದನ್ನು ಕಂಠವೆಂದು ಕರೆಯುತ್ತಿದ್ದರೆ, ಕಾಗದ ಪ್ರತಿಯ ಮೇಲೆ ಬರೆಯಲು ಉಪಯೋಗಿಸುತ್ತಿದ್ದುದನ್ನು ಲೇಖನಿಯೆನ್ನುತ್ತಿದ್ದರು. 'ಕಲಾಮು ಲೇಖನಿಯಕ್ಕುಂ' ಎನ್ನುತ್ತ ಮಂಗರಾಜ ನಿಘಂಟು೨೬ ಇದರ ಪರ್ಯಾಯನಾಮ ಕಲಾಮು ಎಂದೂ ತಿಳಿಸುತ್ತದೆ. ಇದಕ್ಕೆ ಲೆಕ್ಕಣಿಕೆ ಯೆಂಬ ಇನ್ನೊಂದು ಹೆಸರೂ ಬಳಕೆಯಲ್ಲಿದ್ದಿತು.ಬಿದಿರಿನ ಗಲಗನ್ನು,ನವಿಲುಗರಿಯನ್ನು ಇಲ್ಲವೆ ಮುಳ್ಳುಹಂದಿಯ ಮುಳ್ಳನ್ನು ಇದಕ್ಕಾಗಿ ಬಳಸುತ್ತಿದ್ದರು. ಮುಳ್ಳು(ಕಂಟಕ) ಕಾರಣವಾಗಿ 'ಕಂಟ' ಎಂಬ ಹೆಸರೂ ಇದಕ್ಕೆ ರೂಢವಾದಂತೆ ತೋರುತ್ತದೆ. ಧವಲಾ, ಜಯಧವಲಾ, ಮಹಾಧವಲಾ ತಾಳೆಗ್ರಂಥಗಳಾಗಿದ್ದರೂ ಇವುಗಳ ಮೇಲೆ ಅರಗಿನ ಮಸಿ ಬಳಸಿ, ಲೆಕ್ಕಣಿಕೆಯಿಂದ ಬರೆದುದು ವಿಶೇಷವೆಂದೇ ಹೇಳಬೇಕು.

**III ಕಪ್ಪು-ಮಸಿ-ಬಳಪ:** ಬರವಣಿಗೆಗಾಗಿ ಬಳಸುವ ಲೇಪನಸಾಮಗ್ರಿಗಳಲ್ಲಿ ಓಲೆಗೆ ಲೇಪ್ಯ, ಕಾಗದಕ್ಕೆ ದ್ರವ, ಕಡತ ಹಲಗೆಗಳಿಗೆ ಘನರೂಪದ ವಸ್ತು ಗಳನ್ನು ಬಳಸುತ್ತಿದ್ದರು. ತಾಳೆಗರಿಯ ಮೇಲೆ ಅಕ್ಷರಗಳನ್ನು ಕೊರೆದ ಬಳಿಕ ಕಪ್ಪು ಲೇಪ್ಯವನ್ನು ಬರೆಸುತ್ತಿದ್ದು, ಕೊರೆದ ಭಾಗದಲ್ಲಿ ಕಪ್ಪು ಸೇರಿ ಅಕ್ಷರ ಸ್ಫುಟವಾಗಿ ಕಾಣಿಸುತ್ತವೆ. ಹೀಗೆ ಲೇಪಿಸುವುದನ್ನು 'ಕಪ್ಪನಿಡುವುದು' ಎಂದು ಕರೆಯುತ್ತಿದ್ದರು. 'ಯಿ ಪುಸ್ತಕದಲ್ಲಿ ಬರೆದು ಕಪ್ಪನಿಟ್ಟು ಯಿರುವ ವಾಲೆ ೨೫೩ ನಿಧಾನವಾಗಿದೆ' ಎಂಬ ಉಲ್ಲೇಖ ಇದಕ್ಕೆ ಆಧಾರವಾಗಿದೆ.೨೭ ನೇಮಿಚಂದ್ರನು ಬಾಣಕಾದಂಬರಿಯನ್ನು ಸುಡಿಸಿ ಅದರ ಕಪ್ಪನ್ನು ತನ್ನ ಲೀಲಾವತಿ ಕೃತಿಗೆ ಲೇಪಿಸಿದನೆಂದು

> ಬಾಣಪೇಳಿದ ಕಾದಂಬರಿಕಾವ್ಯವ। ಕ್ಷೋಣಿಯರಿಕೆಯೊಳು ಸುಡಿಸಿ |
> ಮಾಣದೆ ಲೀಲಾವತಿಗೆ ಕಪ್ಪಿಡಿಸಿದ। ಜಾಣ ನೇಮಿಯ ಬಲಗೊಂಬೆ ॥೨೮

ಎಂದು ದೊಡ್ಡಯ್ಯ ತನ್ನ ಚಂದ್ರಪ್ರಭಚರಿತೆಯಲ್ಲಿ ಹೇಳುತ್ತಾನೆ. ಈ ಕಪ್ಪನ್ನು ಹೇಗೆ ಸಿದ್ಧಪಡಿಸುತ್ತಿದ್ದರೆಂಬ ಬಗ್ಗೆ 'ಬಿಳಿಯ ದಾಸಿವಾಣದ ಬಡಗ ಹರಿವ ಬೇರಂ ತಂದು, ಹೊಸ ಹಂಚಿಗೆ ಹೂಡಿ, ಅಲತೆಗೆಯ ಬತ್ತಿಯ ಮಾಡಿ, ಆಮದಮ(ನು)ಡಿ ಕಾಳಿ ಆವಿನ ತುಪ್ಪದಲಿ ಕಾಡಿಗೆವಿಡಿದು ಮದು ಕರ್ಪೂರದಿಂದಮರ್ದಿ" ಎಂಬ ಒಂದೇ ಒಂದು ಅಸ್ಪಷ್ಟ ಉಲ್ಲೇಖ ಹಸ್ತಪ್ರತಿಯಲ್ಲಿ ದೊರೆಯುತ್ತದೆ. ತಾಳೆಪ್ರತಿಗಳಿಗೆ ಲೇಪಿಸುವುದಕ್ಕೆ "ಕಪ್ಪನಿಡು" ಎಂಬುದಕ್ಕೆ ಬದಲು "ಹಸ್ತಾಂಜನ"ವೆಂದೂ ಕರೆಯು

---

೨೫. ಮಣಹ. ಪು-೧೮೩.
೨೬. ಅಭಿನವಾಭಿದಾನ (ಮಂಗರಾಜ) ೧೧೫-೧೫.
೨೭. ಮೈಹಸೂ I-೨೭೬ (ಕಾಲಜ್ಞಾನ)
೨೮. ಚಂದ್ರಪ್ರಭಚರಿತೆ (ದೊಡ್ಡಯ್ಯ) ಕಕಚ II-೨೯೨.

ತ್ತಿದ್ದರೆಂಬ '**श्रीमतु देवेंद्रकीर्ती** ಹಸ್ತಾಂಜನ' ಎಂಬ ಇಲ್ಲಿಯ ಉಲ್ಲೇಖ ತಿಳಿಸು ತ್ತದೆ.[೨೯]

ಕಾಗದದ ಮೇಲೆ ಬರೆಯಲು ದ್ರವರೂಪದ ಬೇರೆ ಬೇರೆ ಬಣ್ಣದ ಮಸಿ ಬಳಸು ತ್ತಿದ್ದರೂ ಕಪ್ಪು ಮಸಿ ಬಳಕೆಯೇ ಸಾಮಾನ್ಯವಾಗಿದ್ದಿತು. ಈ ಮಸಿಯನ್ನು ಸಿದ್ಧಪಡಿ ಸುತ್ತಿದ್ದ ವಿಧಾನವನ್ನು ಬಸವಪುರಾಣದ ಒಂದು ಹಸ್ತಪ್ರತಿ ಹೀಗೆ ತಿಳಿಸುತ್ತದೆ: "ಆರು ದುಡ್ಡಿನ ತೂಕ ಕಡ್ಡಿ ಅರಗು (ಬಂಗಾರದ ಅರಗು ಅಲ್ಲ). ಎರಡು ಪೈ ತೂಕ ಅಲೀಕನ ತೊಪ್ಪಲ, ಒಂದು ಪೈ ತೂಕ ಪೂರ್ತಿ ಬಳಿಗಾರ–ಇವು ಮೂರೂ ಜೀನಸು ಗಳನ್ನು ಬೇರಬೇರೆ ಸಣ್ಣಾಗಿ ಅರೆದು. ಬೇರೆ ಬೇರೆಯಾಗಿ ಇಟ್ಟು, ಒಂದೂವರೆ (ದೀಡು) ಸೇರು ನೀರನ್ನು ಕುದಿಯಲಿಕ್ಕೆ ಇಡಬೇಕು. ಒಂದು ಉಕ್ಕು ಚೆನ್ನಾಗಿ ಬಂದ ನಂತರ ಅದರಲ್ಲಿ ಮೊದಲು ಅರಗಿನ ಪುಡಿಯನ್ನು ಹಾಕಿ ಕಡಚಿಗೆಯಿಂದ ತಿರುವ ಬೇಕು. ಕೂಡಲೇ, ಅಲೀಕನ ತೊಪ್ಪಲು ಹಾಕಿ ತಿರುವಬೇಕು ಮತ್ತು ಅದರ ಹಿಂದೆ ಪೂರ್ತಿ ಬಳಿಗಾರದ ಪುಡಿಹಾಕಿ ತಿರುವಬೇಕು. ಈ ರೀತಿ ಮೂರು ಜೀನಸುಗಳನ್ನು ಒಂದರ ಹಿಂದೊಂದು ಹಾಕಿ ತಿರುವಿದ ನಂತರ ಮತ್ತೊಂದು ಕುದಿ ವರೆಗೆ ಉರಿ ಹಚ್ಚ ಬೇಕು. ಕುದಿ ಬಂದ ನಂತರ ಇಳುಹಿ ಕಂಬಳಿಯಲ್ಲಿ ಹಾಕಿ ಸೋಸಬೇಕು. ಅಂದರೆ ಕೆಂಪು ಸಾದಾ ಆಗುವುದು. ಅದಕ್ಕೆ ಕಾಡಿಗೆಯನ್ನು ತಕ್ಕಷ್ಟು ತಿಕ್ಕಿದರೆ ಮಸಿ ಆಗು ವುದು. ಇನ್ನು ಮಸಿ ಹೆಚ್ಚು ಬೇಕಾದಲ್ಲಿ ಮೇಲೆ ಬರೆದ ಪ್ರಮಾಣದಂತೆ ಎಲ್ಲ ಜೀನಸು ಗಳನ್ನು ಹೆಚ್ಚಿಗೆ ಹಾಕಿದರೆ ತೀರಿತು.[೩೦] ಎಂಬ ಉಲ್ಲೇಖವನ್ನು ನೋಡಬಹುದು. ಡಾ. ಡಿ.ಎಲ್.ಎನ್. ಅವರು "ಮಸಿಯನ್ನು ಮಾಡುವ ವಿಧಾನಗಳು ಬಗೆಬಗೆ ಯಾಗಿವೆ. ರಾಗಿಯನ್ನು ಹುರಿದು ಸೀಯಿಸಿ ಪುಡಿಮಾಡಿ ನೀರಿನಲ್ಲಿ ಕಲಿಸಿ ಅದಕ್ಕೆ ಗೋಂದನ್ನೋ ಸಕ್ಕರೆಯನ್ನೋ ಅಂಟಿಗಾಗಿ ಸ್ವಲ್ಪ ಮಿಶ್ರ ಮಾಡಿ ಅದನ್ನು ಬರವಣಿಗೆಗೆ ಉಪಯೋಗಿಸುತ್ತಿದ್ದರು. ಇದಕ್ಕೆ ರಾಗಿಮಸಿ ಎಂದು ಹೆಸರು. ಕಾಗದದ ಮೇಲೆ ಬರೆಯಲು ಇದನ್ನು ಬಳಸುತ್ತಿದ್ದರು. ಅಳಲೆಕಾಯಿ ಅನ್ನಭೇದಿ ಮುಂತಾದವು ಗಳಿಂದ ಮಸಿಯನ್ನು ತಯಾರಿಸುತ್ತಿದ್ದರು. ಇದೇ ಅಳಲೆಕಾಯಿ ಮಸಿ. ಮಸಿ ಯೆಂಬರ್ಥದಲ್ಲಿ ಮೇಲಾ ಎಂಬೊಂದು ಸಂಸ್ಕೃತ ಶಬ್ದವಿದೆ. ಇದನ್ನು ಸುಬಂಧು ತನ್ನ ಗ್ರಂಥದಲ್ಲಿ ಪ್ರಯೋಗಿಸಿದ್ದಾನೆ. ಈ ಶಬ್ದದ ಪ್ರಾಕೃತ ರೂಪ ಮಯಿಲಾ; ಅರ್ಥ ಕರಿಯದು, ಕೊಳಕಾದುದು ಎಂದು. ಇದಕ್ಕೆ ಬಹುಶಃ ಮಯಿಲ ತುತ್ತವನ್ನು (copper sulphate) ಸ್ವಲ್ಪ ಬೆರಕೆ ಮಾಡುತ್ತಿದ್ದಿರಬಹುದು. ಬರಿ ಇದ್ದಲಿನ ಪುಡಿ ಯನ್ನು ವಸ್ತ್ರಗಾಲಿತಮಾಡಿ ಅದಕ್ಕೆ ನೀರು, ಗೋಂದು, ಸಕ್ಕರೆ ಮುಂತಾದವನ್ನು ಹದವರಿತು ಬೆರಸಿ ಮಸಿಯನ್ನು ಮಾಡುತ್ತಿದ್ದುದೂ ಉಂಟು. ಇದಲ್ಲದೆ ಬಗೆಬಗೆಯ ಬಣ್ಣದ ಮಸಿಗಳೂ ಇದ್ದವು. ಚಂದ್ರ, ಹಿಂಗುಲ, ಅರಿದಾಳ ಮುಂತಾದವುಗಳಿಂದ

---

೨೯. ಜ್ವಾಲಾಮಾಲಿನೀ ಕಲ್ಪದ ಅಂತ್ಯ (ಕೆಆರ್‌ಐ ಪ್ರತಿ. ೮೫೧)

೩೦. ಕನ್ನಡ ಗ್ರಂಥಸಂಪಾದನಶಾಸ್ತ್ರ (ಎಂ. ಎಂ. ಕಲಬುರ್ಗಿ) ಅನುಬಂಧ.

ಬಣ್ಣದ ಮಸಿಗಳಾಗುತ್ತಿದ್ದವು"[೩೧] ಎಂದು ಹೇಳುವುದನ್ನು ಇಲ್ಲಿ ಗಮನಿಸಬಹುದು. "ಕಷಾಯದಿಂ ಬರೆದೋಲೆ"ಯೆಂಬ ಉಲ್ಲೇಖ ಮಸಿಯ ಪರ್ಯಾಯ ನಾಮ ಕಷಾಯ ವೆಂದೂ ತಿಳಿಸುತ್ತದೆ.[೩೨] ಮಸಿ ಸಂಗ್ರಹಿಸುವ ಪಾತ್ರೆಯನ್ನು ದೌತಿಯೆನ್ನುತ್ತಿದ್ದ ರೆಂದು "ದೌತಿ ಮಸಿಪಾತ್ರೆಯಕ್ಕುಂ" ಎಂದು ಮಂಗರಾಜನ ನಿಘಂಟು ತಿಳಿಸುತ್ತದೆ.[೩೩]

ಕಡತ, ಹಲಗೆಗಳ ಮೇಲೆ ಬರೆಯಲು ಸೀಮೆಸುಣ್ಣ ಇಲ್ಲವೆ ಬಳಪ ಬಳಸು ತ್ತಿದ್ದರು. ಬಳಪದ ಉಲ್ಲೇಖ ಅನೇಕ ಕಾವ್ಯಗಳಲ್ಲಿ ಬಂದಿದೆ. "ಪಡೆದ ಧನಕ್ಕೆ ಲೆಕ್ಕಮಿಡಲಿಂದ್ರನಗಂ ಬಳಪಂ, ಧರಾತಳಂ ಕಡತಂ" ಎಂಬ ಪೊನ್ನನ ಉಲ್ಲೇಖದಷ್ಟು ಇದರ ಬಳಕೆ ಪ್ರಾಚೀನವಾಗಿದೆ.[೩೪] ಕರ್ನಾಟಕದ ಪ್ರಾಚೀನ ಮಠಗಳಲ್ಲಿ, ಪಾಳೆಗಾರ ಮನೆತನಗಳಲ್ಲಿ ಹೀಗೆ ಬಳಪದಿಂದ ಬರೆದ ಅನೇಕ ಕಡತಗಳು ಸಿಗುತ್ತವೆ.

## ಲಿಪಿಕಾರ-ಲಿಪಿ-ಭಾಷೆ:

ಲೇಖನ ಹಂತದಲ್ಲಿ ನೇರವಾಗಿ ತೊಡಗಿಕೊಳ್ಳುವವ ಲಿಪಿಕಾರ. ಕಂಟ, ಬಣ್ಣ ಇತ್ಯಾದಿಗಳನ್ನು ಉಪಯೋಗಿಸಿಕೊಂಡು ಲಿಪಿಮಾಧ್ಯಮದ ಮೂಲಕ ಭಾಷೆಯನ್ನು ಬಳಸಿ,ಅಲೇಖರೂಪದ ಹಸ್ತಪ್ರತಿಗೆ ಈತ ಲೇಖನ ರೂಪಕೊಡುತ್ತಾನೆ. ಆದುದರಿಂದ ಲಿಪಿಕಾರ, ಲಿಪಿ, ಭಾಷೆ ಈ ಮೂರನ್ನೂ ಇಲ್ಲಿ ವಿವೇಚಿಸಬಹುದು.

**I–ಲಿಪಿಕಾರ:** ಈ ವರೆಗೆ ಸಿಕ್ಕ, ಸಿಗಬಹುದಾದ ಸುಮಾರು ೪೦ ಸಾವಿರ ಕನ್ನಡ ಹಸ್ತಪ್ರತಿ ಕಟ್ಟುಗಳನ್ನು ಶ್ರಮ, ಶ್ರದ್ಧೆಗಳಿಂದ ಬರೆದವರು ಲಿಪಿಕಾರರು. ಅಳಿದುಹೋಗಿಯೂ ಉಳಿದುನಿಂದ ಇಷ್ಟು ದೊಡ್ಡ ಸಂಖ್ಯೆಯ ಹಸ್ತಪ್ರತಿಗಳನ್ನು ಉತ್ಪಾದಿಸುವಲ್ಲಿ ದುಡಿದ ಇವರನ್ನು–

೧. ನಿಯುಕ್ತಲಿಪಿಕಾರರು
೨. ವೃತ್ತಿಲಿಪಿಕಾರರು
೩. ಹವ್ಯಾಸಿ ಲಿಪಿಕಾರರು

ಎಂದು ವರ್ಗೀಕರಿಸಬಹುದು. ಇವರಲ್ಲಿ ನಿಯುಕ್ತಲಿಪಿಕಾರರು ಸಂಬಳ ತೆಗೆದುಕೊಂಡು ಸರಕಾರದಲ್ಲಿ ಲೇಖನವೃತ್ತಿ ಮಾಡುವವರೇ ಹೊರತು, ಹಸ್ತಪ್ರತಿ ನಕಲುಕಾರ್ಯ ಕ್ಕಾಗಿಯೇ ನೇಮಿಸಲ್ಪಟ್ಟವರಲ್ಲ. ಇವರಿಗೆ 'ರಾಯಸದವರು' ಎಂದು ಹೆಸರು. ತೆಲುಗಿನಲ್ಲಿ ವ್ರಾಯುಟ ಎಂದರೆ ಬರೆವಣಿಗೆ, ವ್ರಾಯಸ ಕಾಂಡ್ರು ಎಂದರೆ ಬರೆಯು ವವರು. ಇದರ ಕನ್ನಡ ಸಂವಾದಿ ರಾಯಸದವರು. ಮೈಸೂರು ಅರಸರ ಕಾಲಕ್ಕೆ ಇವರನ್ನು 'ಲೇಖರೀ' ಎಂದು ಕರೆಯುತ್ತಿದ್ದರು. ಕನ್ನಡ ಹಸ್ತಪ್ರತಿಗಳಲ್ಲಿ ಬರುವ

---

೩೧. ಕನ್ನಡ ಗ್ರಂಥಸಂಪಾದನೆ (ಡಿ.ಎಲ್.ಎನ್) ೪೩–೪೪.
೩೨. ಧರ್ಮಾಮೃತ (ನಯಸೇನ) X–೧೬೨.
೩೩. ಅಭಿನವಾಭಿದಾನ (ಮಂಗರಾಜ) ೧೦೫–೧೫
೩೪. ಶಾಂತಿಪುರಾಣ (ಪೊನ್ನ) IX–೧೪೭.

"ಆದಿತ್ಯಪುರಾಣ ಬರೆಯುವುದಕ್ಕೆ ನಿರ್ವಿಘ್ನಮಸ್ತು . . . . ಅರಮನೆ ಲೇಖರೀ ಕಾನಕಾನಹಳ್ಳಿ ದಾಸಪ್ಪನ ಬರಹಾ"*

"ಸುಬೇದಾರ ವೀರಣ್ಣನವರ ರಾಯಸ್ತ ವೆಂಕಟರಮಣಯ್ಯನ ಕೈಲಿ ಬರೆಸಿದ ಅಂಬಿಕಾ ವಿಜಯಕೆ ನಿತ್ಯ ಜಯಮಂಗಳಮಹ"[೩೫]

"ಪಮುಮಣಯ್ಯನವರಿಗೆ ಅನಂತಶೇನಬೋವನು ಬರೆದ ರುಕ್ಮಾಂಗದ ಚರಿತ್ರೆಗೆ ಶುಭಮಸ್ತು"[೩೬] –ಇತ್ಯಾದಿ ಉದ್ಧರಣೆಗಳಲ್ಲಿ ಬರುವ ಲೇಖರಿ, ರಾಯಸ್ತ, ಶೇನಬೋವ ಪದಗಳು ನಿಯುಕ್ತಲಿಪಿಕಾರರನ್ನು ಸೂಚಿಸುತ್ತವೆ.

ವೃತ್ತಿಲಿಪಿಕಾರರೆಂದರೆ ಬರವಣಿಗೆಯನ್ನು ಉಪಜೀವನದ ಸಾಧನಮಾಡಿಕೊಂಡವರು. ಇವರು ಹಣ, ಬಟ್ಟೆ, ಮೊದಲಾದವುಗಳನ್ನು ಪಡೆದು ಹಸ್ತಪ್ರತಿ ಬರೆದು ಕೊಟ್ಟ ಬಗ್ಗೆ ಕೆಳಗಿನ ಉದಾಹರಣೆಗಳನ್ನು ನೋಡಬಹುದು:

"ಈ ರಾಮಾಯಣ ಪುಸ್ತಕ ಕಿದುವಿನಕೋಟೆ ಗೋಪಾಲಯ್ಯನ ತಮ್ಮ ನೀಲಯ್ಯನಿಗೆ ಬರೆದು, ಕಾಣಿಕೆ ತೆಗೆದುಕೊಂಡು ಕೊಟ್ಟೆವು"[೩೭]

"ಬರೆದಾತ....ರಾಮಣ್ಣನು....। ಈ ಪುಸ್ತಕಕ್ಕೆ ಪಾದಗಾಣಿಕೆ ಉಡುಗರೆ ಸಹಾ ತೆಗೆದುಕೊಂಡು....ಪರಮಣ್ಣಗೆ ಬರೆದುಕೊಟ್ಟಿದೆ....[೩೮]

"ತೋಟದ ಸ್ವಾಮಿಗಳ ಮುಳ್ಳೆಯ ಬರದ ಕುಲ(ಕೂಲಿ?) ಪುಸ್ತಕ ೧ ವರ, ಬೇಕಾದವರು ಬರಿಸಿರಿ"[೩೯]

ಈ ಬಗೆಯ ವೃತ್ತಿಲಿಪಿಕಾರರಲ್ಲಿ ಕೆಲವರ ಹೆಸರಿನಹಿಂದೆ "ಬರಹದ" ಎಂಬ ವಿಶೇಷಣ ಆಗಾಗ ಕಂಡುಬರುತ್ತದೆ:

"ಚಿನ್ನಮ(ಪುರ)ದ ಬಸವಪ್ಪಯ್ಯನವರಿಗೆ ಪ್ರಸಾದಿ ಮಹದೇವಯ್ಯನ ಶೂನ್ಯ ಸಂಪಾದನೆಯನ್ನು ಬರೆದುಕೊಟ್ಟ ಗುಮ್ಮಳಾಪುರದ ಬರಹದ ಬಸವಣ್ಣೊಡೆಯ"[೪೦]

"ಬಿದುರೆಯ ಅಂತಣ್ಣಗಳ ಜೀಯನವರುಗಳಿಗೆ ಪೊನ್ನನ ಶಾಂತಿಪುರಾಣವನ್ನು ಬರೆದುಕೊಟ್ಟ ಬೆಳತಂಗಡಿಯ ಬರಹದ ಸೆಟ್ಟಿ ಶಾಂತು"[೪೧]

ಬರವಣಿಗೆಯನ್ನೇ ಉಪಜೀವನದ ಸಾಧನಮಾಡಿಕೊಂಡ ಕಾರಣ, ಇವರ ಹೆಸರಿನ ಹಿಂದೆ 'ಬರಹದ' ಎಂಬ ಉಪಾಧಿ ಅಂಟಿಕೊಂಡಂತೆ ಕಾಣುತ್ತದೆ. ಇಂಥ

---

* ಮೈಹಸೂ I–೧೨೨ ಆದಿತ್ಯಪುರಾಣ

೩೫. ಮಹಸೂ II–೧೯೯. ಅಂಬಿಕಾವಿಜಯ

೩೬. ಮಹಸೂ II–೨೨೭. ರುಕ್ಮಾಂಗದ ಚರಿತ್ರೆ

೩೭. ಮಹಸೂ I–೧೨೬. ತೊರವೆ ರಾಮಾಯಣ.

೩೮. ಬೆಂಹಸೂ ೩೧೪.

೩೯. ಮೈಹಸೂ VIII–೧೪೧

೪೦. ಮಹದೇವಯ್ಯಗಳ ಶೂನ್ಯಸಂಪಾದನೆ: (ಸಂ: ಆರ್. ಸಿ. ಹಿರೇಮಠ) ಪ್ರಸ್ತಾವನೆ ೧೦೧.

೪೧. ಶಾಂತಿಪುರಾಣ (ಪೊನ್ನ) ಪರಿಶಿಷ್ಟ ಪು–೩೩.

ಅನೇಕ ಜನ ವೃತ್ತಿಲಿಪಿಕಾರರು ಪ್ರಾಚೀನಕಾಲದಲ್ಲಿ ಇದ್ದು, ಇಂದಿನ ಬೆರಳಚ್ಚುಗಾರರಂತೆ, ಮುದ್ರಣಾಲಯದವರಂತೆ ಗ್ರಂಥೋತ್ಪಾದನ ಕೆಲಸದಲ್ಲಿ ನಿರತರಾಗಿದ್ದರು. ಕುಮಾರರಾಮನ ಸಾಂಗತ್ಯವನ್ನು ಲಿಪಿಸಿದ ವೃತ್ತಿಲಿಪಿಕಾರನೊಬ್ಬ "ಸಾವಿರ ೧ಕ್ಕೆ ೫ ಹಣ ಪ್ರಕಾರಕ್ಕೆ"[೪೨] ಎಂದು ಹೇಳಿದುದು, ಅಂದಿನ ಬರಹದ ಕೂಲಿಯ ಪ್ರಮಾಣವನ್ನು ಸೂಚಿಸುತ್ತದೆ.

ಮೇಲೆ ಹೇಳಿದ ನಿಯುಕ್ತಲಿಪಿಕಾರರು, ವೃತ್ತಿಲಿಪಿಕಾರರಿಗಿಂತ ಹವ್ಯಾಸಿ ಲಿಪಿಕಾರರ ಸಂಖ್ಯೆ ದೊಡ್ಡದು. ಇವರು ಸ್ವಪ್ರಯೋಜನ, ಪರಪ್ರಯೋಜನಕ್ಕಾಗಿ ಬರವಣಿಗೆ ಕಾರ್ಯವನ್ನು ಪೂರೈಸಿದ್ದಾರೆ. ಉದಾ:

"ಬರದಾತ ಮಹಿಶೂರನಗರದ ಲಕ್ಷ್ಮೀರಮಣಸ್ವಾಮಿಯವರ ದೇವಸ್ಥಾನದ ಸ್ಥಾನಿಕ ಲಕ್ಷ್ಮೀರಮಣಪ್ಪನವರ ಮಗ ಕೃಷ್ಣಯ್ಯನು ತಾನು ತನಗೆ ಬರೆದ ಭಾರತ ಪುಸ್ತಕ"[೪೩] –ಇಲ್ಲಿ ಗ್ರಂಥಪ್ರೇಮಿ ಲಿಪಿಕಾರ ಸ್ವಪ್ರಯೋಜನಾರ್ಥ ಲೇಖನಕಾರ್ಯ ಮಾಡಿದ್ದಾನೆ.

"ಅನುಭವಾಮೃತವಂನ್ನು ಜವಳಿ ಅಂಗಡಿ ಕಾಳಿದಾಸೈಯ್ಯನಿಗೆ ವುಪಾಧ್ಯ ವೆಂಕಟೈಯ್ಯನು ಬರೆದುಕೊಟ್ಟಂತಾ ಪುಸ್ತಕಾ"[೪೪] –ಇಲ್ಲಿ ಪರಪ್ರಯೋಜನಾರ್ಥ ಹಸ್ತಪ್ರತಿಯನ್ನು ನಕಲುಮಾಡಲಾಗಿದೆ. ಅನೇಕ ಸಲ ಈ ಪರಪ್ರಯೋಜನಾರ್ಥವೆಂಬುದು ತಂದೆ–ಮಕ್ಕಳ ಸಂಬಂಧ, ಗುರು–ಶಿಷ್ಯ ಸಂಬಂಧ, ಸ್ನೇಹ ಸಂಬಂಧವನ್ನು ವ್ಯಾಪಿಸಿದೆ.

"ಚೆನ್ನಪಟ್ಣಕೆ ವಳಿತವಾದ ಹೊಂಗನೂರು ನಾರಣೈಯ್ಯನು ತನ್ನ ಮಗನಿಗೆ ಬರೆದುಕೊಟ್ಟ, ಮೂಲಪ್ರತಿಯನ್ನು ನೋಡಿ ಬರೆದದ್ದು"[೪೫]

"....ಪುರಾಣದ ಕಲ್ಲಯ್ಯದೇವರ ಕುಮಾರನಾದ ಗುರುವರ್ಯದೇವರು ತಮ್ಮ ಸ್ವಹಸ್ತದಿಂದ ತಮ್ಮ ತಂದೆಗೆ ಈ ಶಾಸ್ತ್ರ ಬರೆದುಕೊಟ್ಟ"[೪೬]

"ರಾಯದುರ್ಗದ ಪುಷ್ಪಗಿರಿಮಠದ ಚಂದ್ರಶೇಖರಯ್ಯನವರು ಮೈಸೂರು ಯೀರನಗೆರೆಯಲ್ಲಿಯಿರುವ ನಂಜಪ್ಪಯೆಂಬುವ ಭಕ್ತನಿಗೆ ಬರದುಕೊಡೋಣವಾಗಿದೆ"[೪೭]

---

೪೨. ಮಹಸೂ VI–೧೨೨೧.

೪೩. ಮಹಸೂ I–೬೦ ಭಾರತ ಕಥಾಮಂಜರಿ.

೪೪. ಮೈಹಸೂ I–೫೬ ಅನುಭವಾಮೃತ.

೪೫. ಮೈಹಸೂ III–೧೪೭೦ ರುಕ್ಮಾಂಗದ ಚರಿತ್ರೆ

೪೬. ಮಹಸೂ IV–೬೦೮.

೪೭. ಮೈಹಸೂ III–೧೦೨೧.

"ಶ್ರೀಮದ್ಬೆಳ್ಗುಳ ಸಿಂಘಸಿಂಹಾಸನಾಧೀಶ್ವರರುಮಪ್ಪ ಶ್ರೀಮದಭಿನವ ಚಾರು
ಕೀರ್ತಿ ಪಂಡಿತಾಚಾರ್ಯವರ್ಯ ಸ್ವಾಮಿಯವರ (ತಶ್ಶಿ)(ಶಿ)ಷ್ಯನಾದ ಭಂಡಾರಿಬಸದಿಯ
ಯಿಂದ್ರವರ್ಗದ ಪದುಮಯ್ಯನು ಬರೆದ"[೪೮]

"ಅರಳಗುಪ್ಪಿ ವೆಂಕಟನ ಮಗ ದಾಸಪ್ಪನು ಸ್ನೇಹಾರ್ಥವಾಗಿ ಬರೆಕೊಟ್ಟ
ಶಂಕರ ರಾಮಾಯಣ".[೪೯] ಇಲ್ಲಿ ನಾರಣಯ್ಯನು ಮಗನಿಗೆ, ಗುರುವರ್ಯದೇವ ತಂದೆಗೆ,
ಚಂದ್ರಶೇಖರಯ್ಯನವರು ಭಕ್ತನಿಗೆ, ಪದುಮಯ್ಯನೆಂಬ ಭಕ್ತ ಗುರುವಿಗೆ, ದಾಸಪ್ಪನು
ಸ್ನೇಹಿತನಿಗೆ ಹಸ್ತಪ್ರತಿ ಬರೆದುಕೊಟ್ಟುದನ್ನು ಕಾಣುತ್ತೇವೆ.

ಇನ್ನೂ ಒಂದು ವಿಶೇಷವೆಂದರೆ, ಸ್ತ್ರೀಲಿಪಿಕಾರರು, ವೈದಿಕ ಸಂಪ್ರದಾಯ
ದಲ್ಲಿ ಸ್ತ್ರೀಲಿಪಿಕಾರರಿಗೆ ಅನುತ್ತೇಜಕ ವಾತಾವರಣವಿದ್ದಿತು, ಬೌದ್ಧರಲ್ಲಿ ಧಾರ್ಮಿಕ
ಪವಿತ್ರಗ್ರಂಥಗಳ ನಕಲು ಕಾರ್ಯವನ್ನು ಒಂದು ವೃತ್ತಿಯಾಗಿ ಸ್ತ್ರೀಯರು ಕೈಕೊಳ್ಳ
ಬೇಕೆಂದು ಹೇಳಲಾಗಿದೆ. ಜೈನ ವೀರಶೈವಗಳಲ್ಲಿಯಂತೂ ಸ್ತ್ರೀಲಿಪಿಕಾರರು ಅಗಾಗ
ಹೀಗೆ ಕಂಡುಬರುತ್ತಾರೆ:

"ಭೂಕೈಲಾಸ ವೃಳುವೆ ಮಹಾಮನೆ ಸೂತ್ರಾನುವರ್ತಿಗಳಾದ ಬಾಳಪ್ಪ
ಸ್ವಾಮಿಗಳ ಕರಸಂಜಾತಳಾದ ಪುಟ್ಟಸಂಜಮ್ಮ"[೫೦]

"ಸಿಗ್ಗಾವಿಯ ಚೆನ್ನಗವುಡರ ಸೊಸಿ ಭೈರಾಜಿ ತಂಮ ಶ್ರೀಗುರುವಿನ ಕೃಪೆ
ಯಿಂದ ಲಿಂಗಲೀಲಾವಿಲಾಸ ಪುಸ್ತಕವನ್ನು ಪ್ರತಿಮಾಡಿ ಮಹಾಗಣಂಗಳು ಕೇಳಿ ಓದಿ
ನಂಮ ಕೃತಾರ್ಥಮಾಡಿ(ರಿ) ಎಂದು ಮಹಾಗಣಂಗಳಿಗೆ ಪ್ರತಿಮಾಡುತ್ತಿರ್ದೆನು
ಮಹಾಗಣಂಗಳಿಗೆ ಸ್ತುತಿಮಾಡುತ್ತಿರ್ದೆನು....".[೫೧] ಇವು ವೀರಶೈವ ಸ್ತ್ರೀಲಿಪಿಕಾ
ರನ್ನು ಉಲ್ಲೇಖಿಸುತ್ತವೆ.

"ಲಲಿತಕೀರ್ತಿಭಟ್ಟಾರಕ ದೇವರುಗಳ ಪಾದಪದ್ಮಕ್ಕೆ ತುಂಬಿಯೆನಿಸಿದ ವಧ
ಮಾಸಕ್ಕಗಳು ಸೇನಗಣದ ನೇಮಕ್ಕಗಳಿಗೆ ಶಾಸ್ತ್ರದಾನವಾಗಿ ಬರೆದುಕೊಟ್ಟ ಧನ
ಕುಮಾರ ಚರಿತೆ"[೫೨]

"ಪೆನುಗೊಂಡೆಯ ಶಾಂತಿಮತಿ ಅವ್ವಗಳ ಜೀಯನವರು ತಮಗೆ ಕೇವ
ಜ್ಞಾನಪ್ರಾಪ್ತಿ ನಿಮಿತ್ತವಾಗಿ ಬರೆದಂಥಾ"[೫೩]

"ಶ್ರೀಮತಿ ಅಕ್ಕಗಳು ಬರದರು ಜಿನಮುನಿತನಯಾ"[೫೪]

---

೪೮. ಮಹಸೂ III-೩೬೬.

೪೯. ಮೈಹಸೂ IV-೧೬೬೮ ಶಂಕರರಾಮಾಯಣ.

೫೦. ಮೈಹಸೂ II-೧೦೦೧.

೫೧. ಧಾವಭಾ ೧೪೦೩. ಲಿಂಗಲೀಲಾವಿಲಾಸಚಾರಿತ್ರ

೫೨. ಕೊಲ್ಲಾಪುರ ಲಕ್ಷ್ಮೀಸೇನ ಬಸದಿಯ ತಾಪ್ರ. ೧೫೭/೨.

೫೩. ಕೊಲ್ಲಾಪುರ ಲಕ್ಷ್ಮೀಸೇನ ಬಸದಿಯ ತಾಪ್ರ. ೨೫೩.

೫೪. ಕೊಲ್ಲಾಪುರ ಲಕ್ಷ್ಮೀಸೇನ ಬಸದಿಯ ಕಾಪ್ರ. ೧೭೭/೫.

"ಧರೆನುತ ಬೆಳ್ಗುಳಗ್ರಾಮದೊಳೊಪ್ಪುವ ಶ್ರೀಗೊಮ್ಮಟೇಶಲಾಯಳೂ ಗುರು ಪ್ರಭಾಚಂದ್ರಸ್ವಾಮಿಯವರ ಸಿಸ್ಯೆ ಪಾರಿಶ್ವಅಜ್ಜಿಗಳು"[೫೫]

"ಕೊಲ್ಲಾಪುರದ ಶ್ರೀ ಜಿನಸೇನಭಟ್ಟಾರಕಸ್ವಾಮಿ ಸಂಜಾತ ಗುಣಭದ್ರ ಸ್ವಾಮಿಗಳ ಶಿಷ್ಯರು ಶಾಂತಿಮತಿ ಕಂತಿಯರು ಅಪ್ಪಗೆಪುರದ ಶ್ರೀ ಅಜಿತನಾಥನ ದಿವ್ಯ ಚೈತ್ಯಾಲಯದಲ್ಲಿ ಪ್ರತಿನೋಡಿ ಬರೆದೆವು"[೫೬]

ಈ ಉದಾಹರಣೆಗಳು ಜೈನ ಸ್ತ್ರೀಲಿಪಿಕಾರರನ್ನು ಸೂಚಿಸುತ್ತವೆ. "ರಕ್ತಾಕ್ಷಿ ಸಂವತ್ಸರದ ಚೈತ್ರ ಬಹುಳ ೧೦ ಯಲ್ಲಣ್ಣನ ಪುತ್ರಿ ಕಾಳವ್ವೆ"[೫೭] ಈಕೆ ಯಾವ ಮತದವಳೊ ಗೊತ್ತಿಲ್ಲ. ಇದರಿಂದ ಪ್ರಾಚೀನ ಕಾಲದಲ್ಲಿ ಮಹಿಳೆಯರೂ ಅಕ್ಷರಾಭ್ಯಾಸದ ಅವಕಾಶ ಪಡೆದಿದ್ದರೆಂದು ತಿಳಿದುಬರುತ್ತದೆ.

ಇದಲ್ಲದೆ, "ಕೆಸ್ತೂರು ಉಪಾಧ್ಯರ ಮಗ ರಂಗಪ್ಪ ಬರೆದುಕೊಟ್ಟುದು, ತಳಕಾಡು ನಾಯಿಕಶಾನಿ ಕೆಂಪಿ ಮಗಳು ನಂಜಿಗೆ ಬರೆದುಕೊಟ್ಟುದು",[೫೮] "ಅಕ್ಕನೂರು ಸಿರಗಪನು ಮುಂಡಿಗೆಯ ಪಾಯಣನ ಮಗಳು ಪದುಮಾಯಿಗೆ ಬರೆದುಕೊಟ್ಟ ಸುಕುಮಾರಚರಿತ್ರೆಯು",[೫೯] "ಅಮರೇಂದ್ರವಂದಿತ ಶ್ರೀ ಸುಕುಮಾರನ ಚಾರು ಚರಿತದ ಪ್ರತಿಯನೂ ಜಿನಚಂದ್ರನು ತನ್ನ ಪುತ್ರೀತ್ರಯಂಗಳನೋದಿಸಲೆಂದು ಬರೆದನು"[೬೦]-ಈ ಹೇಳಿಕೆಗಳಿಂದ ಸುಕುಮಾರಚರಿತೆಯಂಥ ಚಂಪೂಗ್ರಂಥ ಓದುವಷ್ಟು ಭಾಷಾ ತಿಳುವಳಿಕೆಯನ್ನು ಮಹಿಳೆಯರು ಸಂಪಾದಿಸಿಕೊಳ್ಳಲು ಅವಕಾಶವಿದ್ದಿತೆನಿಸುತ್ತದೆ. ಬಹುಶಃ ಇವರಿಗೆ ತಂದೆಯೇ ಅಕ್ಷರಾಭ್ಯಾಸ ಮಾಡಿಸುತ್ತಿದ್ದ. ಜೈನ, ವೀರಶೈವ ವೆಂಬ ಪ್ರತಿಷ್ಠಿತ ಧರ್ಮಗಳ ಮಹಿಳೆಯರಂತೆ ಬಹುಶಃ ನಾಯಕಶಾನಿ ಕೆಂಪಿಯ ಮಗಳು ನಂಜಿಯಂಥ ವೇಶ್ಯೆಯರೂ ಓದುಬರಹದ ಅವಕಾಶ ಪಡೆದಿದ್ದರೆಂದ್ದು ಗೊತ್ತಾಗುತ್ತದೆ. ಮನೆಯಲ್ಲಿ ಗೋಷ್ಠಿ ನಡೆಸುತ್ತಿದ್ದ ವೇಶ್ಯೆಯರಿಗೆ ಅಕ್ಷರಜ್ಞಾನ ಅಪೇಕ್ಷಣೀಯವೆಂದು ಬೇರೆ ಹೇಳಬೇಕಿಲ್ಲ. ಪುಟ್ಟನಂಜಮ್ಮ, ಭೈರಾಜಿ, ಪದುಮಾಯಿ, ಶ್ರೀಮತಿ ಅಕ್ಕ, ಶಾಂತಿಮತಿಕಂತಿ ಮೊದಲಾದವರು ಧಾರ್ಮಿಕ ಗ್ರಂಥಗಳನ್ನು, ಓದುವುದು ಅವರವರ ಆಸಕ್ತಿ ವಿಶೇಷತೆಗಳನ್ನು ತಿಳಿಸಿಕೊಡುತ್ತವೆ.

ಮೇಲೆ ಹೇಳಿದಂತೆ ನಿಯುಕ್ತ, ವೃತ್ತಿ, ಹವ್ಯಾಸಿ ಯಾವುದೇ ಲಿಪಿಕಾರರಿರಲಿ, ಕೆಲವು ಅಪವಾದಗಳನ್ನು ಬಿಟ್ಟರೆ ಇವರು ಸಾಮಾನ್ಯವಾಗಿ ತಮ್ಮ ತಮ್ಮ ಧರ್ಮದ

---

೫೫. ಮೈಹಸೂ VI-೧೫೦

೫೬. ಸಿಂಬಸಾಮಂತ ಚರಿತೆ (ಸಂ: ಎಂ. ಎಂ. ಕಲಬುರ್ಗಿ) ಪು ೧೨೮. ಅ. ಟಿ.

೫೭. ಕೊಲ್ಲಾಪುರ ಲಕ್ಷ್ಮಿಸೇನ ಬಸದಿ ತಾಪ್ರ. ೨೦೩.

೫೮. ಮೈಹಸೂ I-೧೮೭ ಐರಾವತ.

೫೯. ಮೈಹಸೂ IV-೧೯೩೨ ಸುಕುಮಾರಚರಿತೆ.

೬೦. ಮೈಹಸೂ IV-೧೯೩೨ ಸುಕುಮಾರಚರಿತೆ.

ಕೃತಿಗಳನ್ನೇ ಲಿಪಿಸುತ್ತಿದ್ದರು. ಇವರಲ್ಲಿ ವೃತ್ತಿಲಿಪಿಕಾರರು ಮಾತ್ರ ಉಪಜೀವನವನ್ನೇ ಗುರಿಯಾಗಿಟ್ಟುಕೊಂಡ ಕಾರಣ, ಆಗಾಗ ಅನ್ಯಮತೀಯ ಗ್ರಂಥಗಳನ್ನೂ ಲಿಪಿಸುತ್ತಿದ್ದಿರಬಹುದು. ಒಮ್ಮೊಮ್ಮೆ ಅಧಿಕಾರಿಗಳ ಸುಪ್ರೀತಿಗಾಗಿ ಬೇರೆ ಮತದ ಗ್ರಂಥಗಳನ್ನೂ ಹವ್ಯಾಸಿ ಲಿಪಿಕಾರರು ನಕಲು ಮಾಡುತ್ತಿರುವುದಕ್ಕೆ "ಶ್ರೀಮನ್ಮಹಾನಾಡಪ್ರಭು ಬಿಜ್ಜಾವರದ ಇಮ್ಮಡಿ ಚಿಕ್ಕಪ್ಪಗೌಡರು ಬರೆಸಿದ ಸಾನಂದಪುರಾಣಂ. ಇದನು ಬರೆದಾತನು ಯಜ್ಞನಾರಾಯಣದೀಕ್ಷಿತರ ಮಗ ವಿಶ್ವನಾಥನು"[೬೧] ಎಂಬುದನ್ನು ಇಲ್ಲಿ ಗಮನಿಸಬಹುದು.

ಹಸ್ತಪ್ರತಿಗಳನ್ನು ಅಕ್ಷರಸ್ಥ ಸಮಾಜದವರೇ ಬರೆಯುವುದು ಸಹಜ. ನಿಯುಕ್ತರನ್ನು ಬಿಟ್ಟರೆ, ಮಿಕ್ಕವರಲ್ಲಿ ಮಠ-ದೇವಾಲಯಗಳ ಪುರೋಹಿತ ವರ್ಗದವರು, ಬರಹದವರು, ಓದಿಸುವವರು, ಪುರಾಣ ಪ್ರವಚನಕಾರರು ಅಧಿಕಸಂಖ್ಯೆಯಲ್ಲಿ ಕಂಡು ಬರುತ್ತಾರೆ.

ಹಸ್ತಪ್ರತಿಲಿಪಿಕಾರರು ಲೇಖನಕಾರ್ಯದಿಂದ ತಮಗೂ, ಲಿಖಿಸಿಕೊಂಡವರಿಗೂ ಕಲ್ಯಾಣವಾಗುವುದೆಂದು ನಂಬಿದ ವಿಷಯ ಹಲವು ಉದಾಹರಣೆಗಳಿಂದ ತಿಳಿದು ಬರುತ್ತದೆ: "ಬಸ್ತಿಯ ಕಂಬದ ಬ್ರಹ್ಮದೇವರ ಪಾದಸನ್ನಿಧಿಯಲ್ಲಿ ಕುಳಿತು ಜ್ಞಾನಾವರಣೀಯ ನಿರ್ನಿಮಿತ್ತ ಪರಿಹಾರಾರ್ಥವಾಗಿ ಬರೆದುಕೊಟ್ಟ"[೬೨]

"ಪೊರವಾವ ತಿಮ್ಮಪ್ಪನ ಮಗ ವೆಂಕಟಯ್ಯನು ಚಿಕ್ಕ ಕುಪ್ಪಕ್ಕಗೆ ಆಯುರಾರೋಗ್ಯ ಐಶ್ವರ್ಯಧನಕನಕ ವಸ್ತುವಾಹನ ಪುತ್ರಪೌತ್ರಾಭಿವೃದ್ಧಿಯಾಗಿ, ಶೀಘ್ರದಲ್ಲಿ ಗಂಡುಸಂತಾನವಾಗಲಿಯೆಂದು ತ್ರಿಸಂಧ್ಯಾಕಾಲದಲ್ಲೂ ಹರಸಿ ಬರೆದುಕೊಟ್ಟ ಬಿಡುಪದದ ಪುಸ್ತಕ".[೬೩]

ಇತ್ಯಾದಿ ಹೇಳಿಕೆಗಳು ಲೇಖನಕಾರ್ಯದ ಬಗ್ಗೆ ಅವರಿಗಿದ್ದ ಭಕ್ತಿಭಾವವನ್ನು ವ್ಯಕ್ತಪಡಿಸುತ್ತವೆ. ಇದಕ್ಕೆ ಪೂರಕವೆಂಬಂತೆ ಹಸ್ತಪ್ರತಿಗಳ ಪ್ರಾರಂಭ, ಅಂತ್ಯಗಳಲ್ಲಿ ತಪ್ಪದೇ ಬರುವ ಗುರುಸ್ತೋತ್ರ, ದೇವತಾಸ್ತುತಿಗಳನ್ನು ಇಲ್ಲಿ ನೆನೆಯಬಹುದು. ಈ ಭಾವನೆಗೆ ಪೂರಕವೆಂಬಂತೆ ಯೋಗ್ಯ ಪರಿಸರ ನಿರ್ಮಾಣವಾಗುವ ಸಲುವಾಗಿ ಲಿಪಿಕಾರರು ಆಗಾಗ ಬಸದಿ, ದೇವಾಲಯ, ಮಠಗಳಲ್ಲಿ ಕುಳಿತು ಲೇಖನಕಾರ್ಯ ಮಾಡಿದ್ದಾರೆ.

ಒಂದು ಹಸ್ತಪ್ರತಿಯಲ್ಲಿ ಕವಿಯ ಪಾಠ ಮತ್ತು ಲಿಪಿಕಾರನ ಪಾಠ ಸೇರಿಕೊಂಡಿರುತ್ತವೆ. ಲಿಪಿಕಾರನ ಈ ಪಾಠವನ್ನು 'ಪ್ರಶಸ್ತಿ'ಯೆಂದು ಕರೆಯಲಾಗುತ್ತಿದ್ದು, ಇದು ಅವನ ಚರಿತ್ರೆ ಮತ್ತು ಪರಿಸರಗಳಿಗೆ ಸಂಬಂಧಿಸಿದ ಸಂಗತಿಗಳನ್ನು ಒದಗಿಸುತ್ತದೆ.

---

೬೧. ಮಹಸೂ VI–೧೦೭೦

೬೨. ಕೊಲ್ಲಾಪುರ ಲಕ್ಷ್ಮೀಸೇನ ಬಸದಿ ತಾಪ್ರ. ೩೩೦.

೬೩. ಮಹಸೂ VII–೧೨೬೪.

"ಕಲ್ಯಾಣಪಟ್ಟಣದ ಹಾಳಿನ ಹರೆಯ (ಹಿರಿಯ) ಹಂಪಯ್ಯ, ಚಿಕ್ಕಹಂಪಯ್ಯ ಅಯ್ಯನವರು ಗುಮ್ಮಳಾಪುರದ ಚನ್ನಮಲ್ಲಿಕಾರ್ಜುನದೇವರ ಶಿಷ್ಯರು ವಿರಕ್ತ ಜೆಡೆಸಿದ್ಧಲಿಂಗದೇವರು ಅಯ್ಯನವರಿಗೆ ಬರೆಯಿಸಿ ಭಕ್ತಿಮಾಡಿದ ಲಿಂಗಲೀಲಾ ವಿಲಾಸಚಾರಿತ್ರ"[೬೪]

"ತೋಂಟದ ಸಿದ್ಧಲಿಂಗೇಶ್ವರನ ಸಂಪ್ರದಾಯಕರಾದ....ಪರಬಬ್ಮ ಕಟ್ಟಿಗೆ ಹಳ್ಳಿ ಸಿದ್ಧಲಿಂಗೇಶ್ವರನ ಚಿತ್ಕರಕಮಲೋದಯ....ಬಸವಪ್ರಭು ಚೀಲಾಳಸ್ವಾಮಿಗಳ ಪಾದಾರವಿಂದಕ್ಕೆ ಈ ವೀರಶೈವಾಮೃತ ಪುರಾಣವನ್ನು....ಅರ್ಪಿಸಿದರು....ಪುನರಪಿ ಈ ಶಾಸ್ತ್ರಮಂ ಚೀಲಾಳೇಶ್ವರನು ತಮ್ಮ ಕರಸರಸೀಜಾತ ಕಪಿಲಸಿದ್ಧಸಾಮಿಗಳಿಗೆ ಪಾಲಿಸಿದರು........"[೬೫]

"ಸ್ವಸ್ತಿ ವಿಜಯಾಭ್ಯುದಯ ಶಾಲಿವಾಹನ ಶಕವರುಷ ೧೫೦೨ ನೆಯ ವಿಕ್ರಮ ಸಂವತ್ಸರದ ಕಾರ್ತಿಕ ಬಹುಳ ೩ ಮಂಗಳವಾರದಲ್ಲು....ಸರ್ವಾಚಾರಸಂಪನ್ನ ಏಕ ಲಿಂಗನಿಷ್ಠಾಪರ ವೀರಶೈವಸಂಪನ್ನ ಗುಮ್ಮಳಾಪುರದ ಸಿಂಹಾಸನಕ್ಕೆ ಕರ್ತರಾದ ವಿರಕ್ತಸಿದ್ಧಲಿಂಗದೇವರಿಗೆ ಪದಿನಾಡ ಯಳವಂದೂರ ಅರಸು ಚೆನ್ನೊಡೆಯರು ಈ ಶೂನ್ಯಸಂಪಾದನೆಯ ವಚನಸಂಗ್ರಹವನ್ನು ಬರೆಸಿ ಶಿವಾರ್ಪಿತವಾಗಿ ನಮಸ್ಕರಿಸಿದರು"[೬೬]

"ಶ್ರೀ ವಿಜಯಾಭ್ಯುದಯ ಸಾಲಿವಾಹನ ಶಕವರುಷ ೧೫೩೮ನೆಯ ನಳ ಸಂವತ್ಸರದ ಮಾಘ ಬಹುಳ ೧೪ಯು ಸೋಮವಾರದಲ್ಲು ಗೂಳೂರ ಸಿದ್ಧ ವೀರಣ್ಣೊಡೆಯ ದೇವರಿಗೆ ನಂದಿಯಪುರದ ಪರ್ವತದೇವರ ಶಿಷ್ಯರು ತೋಟದ ದೇವರು ಲೇಖನಮಾಡಿದ ಪ್ರಭುದೇವರ ಶೂನ್ಯಸಂಪಾದನೆ"[೬೭]

ಈ ಪ್ರಶಸ್ತಿಗಳಲ್ಲಿ ಬರುವ ಹೋಳಿನ ಹಿರಿಯ ಹಂಪಯ್ಯ, ಚಿಕ್ಕಹಂಪಯ್ಯ ಸುಪ್ರಸಿದ್ಧ ದಾಸೋಹಿಗಳೆಂಬುದು ಸರ್ವವಿದಿತ. ಎರಡನೆಯ ಪ್ರಶಸ್ತಿಯು ಕಟ್ಟಿಗೆಹಳ್ಳಿ ಸಿದ್ಧಲಿಂಗೇಶ್ವರನಿಗೆ ಚೀಲಾಳಸ್ವಾಮಿಯು ಶಿಷ್ಯನಾಗಿದ್ದನೆಂದೂ, ಬಸವ ಪ್ರಭು ಎಂಬುದು ಆತನ ಪರ್ಯಾಯನಾಮವೆಂದೂ, ಕಪಿಲಸಿದ್ಧಸ್ವಾಮಿಯು ಆತನ ಶಿಷ್ಯನೆಂದೂ ತಿಳಿಸಿಕೊಡುವ ಅಪೂರ್ವ ಆಕರವಾಗಿದೆ. ಗಮ್ಮಳಾಪುರದ ಸಿದ್ಧಲಿಂಗ ದೇವರ ಕಾಲ ಶಾಲಿವಾಹನ ಶಕವರುಷ ೧೫೦೨ ಎಂದು ಮೂರನೆಯ ಪ್ರಶಸ್ತಿ

೬೪. ಮೈಹಸೂ VII–೭೩೯.

೬೫. ಧಾವಭಾ ೨೬೪೯. ವೀರಶೈವಾಮೃತ ಮಹಾಪುರಾಣ.

೬೬. ಗುಮ್ಮಳಾಪುರ ಸಿದ್ಧಲಿಂಗದೇವರ ಶೂನ್ಯಸಂಪಾದನೆ (ಸಂ. ಆರ್. ಸಿ. ಹಿರೇಮಠ) ಪ್ರಸ್ತಾವನೆ

೬೭. ಬೆಂಹಸೂ ೩೭೩ ಗೂಳೂರು ಸಿದ್ಧವೀರಣ್ಣೊಡೆಯರ ಶೂನ್ಯಸಂಪಾದನೆ. (ನೋಡಿ : ಮೈಹಸೂ VIII–೫೧೦.)

ಏಕೈಕ ಆಧಾರವಾಗಿ ತಿಳಿಸಿಕೊಡುತ್ತದೆ. ನಾಲ್ಕನೆಯ ಪ್ರಶಸ್ತಿಯಲ್ಲಿ ಬರುವ ತೋಟದದೇವರೆಂದರೆ ಸಿದ್ಧೇಶ್ವರಪುರಾಣದ ಕರ್ತೃವಾದ ವಿರಕ್ತ ತೋಂಟದಾರ್ಯ ನಾಗಿದ್ದು, ಇವರ ಕಾಲ ಶಾಲಿವಾಹನ ಶಕವರುಷ ೧೫೩೮ ಎಂದು ಪ್ರಥಮಬಾರಿ ಗೊತ್ತಾಗುತ್ತದೆ. ಇವೇ ಮೊದಲಾದ ಆದ್ಯಂತ್ಯ ಪ್ರಶಸ್ತಿಗಳು ಕೃತಿಯನ್ನು ಬರೆದವರ, ಬರೆಯಿಸಿದವರ ಚರಿತ್ರೆ ಮತ್ತು ಇತರ ವಿಷಯಗಳನ್ನೂ ಪೂರೈಸುತ್ತವೆ.*

ವೆಂಕಟರಾಜು ಎಂಬ ಲಿಪಿಕಾರನು ಕುಮಾರವ್ಯಾಸ ಭಾರತದ ಪ್ರತಿಯೊಂದು ಪರ್ವದ ಕೊನೆಗೆ ಮುಕ್ತಾಯದ ದಿನವನ್ನು ಸೂಚಿಸಿದ್ದು, ಇದರಿಂದ ೯,೦೦೦ ಭಾಮಿನಿಷಟ್ಪದಿಗಳನ್ನು ೨೨ ತಿಂಗಳಲ್ಲಿ ಲಿಪಿಸಿರುವುದಾಗಿ ತಿಳಿದುಬರುತ್ತದೆ.[೬೮] ''ಒಂದು ದಿಸಕ್ಕೆ ೧೦೦ ಪದ ಬರದ್ದು, ಮಳೈಯು ಬರದ''[೬೯] ''ಯೀ ಕವಿಕಂಠ ಹಾರ ನಿಘಂಟನ್ನು ೨ ದಿವ್ಸದಲ್ಲಿ ನಿಶ್ಚಯವಾಗಿ ಪೂರೈಸಿಯಿರುತ್ತೇನೆ''[೭೦] ಇತ್ಯಾದಿ ಮಾತುಗಳು ಅಂದಿನ ಬರೆವಣಿಗೆಯ ವೇಗವನ್ನು ತಿಳಿಸುತ್ತವೆ. ಬೋಳಮಲ್ಲಿಕಾರ್ಜುನ ದೇವರು ೧೦, ವಟ್ಟಕ್ಕಿ ಬಸ್ತಿ ಪದುಮಯ್ಯ ೧೦, ದಿಗ್ಗಾವಿಪುರದ ಅಂಬಾಜಯ್ಯ ೯, ಪುರಾಣದ ರುದ್ರಯ್ಯ ೭, ಉತ್ತಂಗಿ ಕೆಂಪಯ್ಯ ೬, ಅಮ್ಮಿನಭಾವಿ ಯಳವತ್ತಿ ಮಠದ ಸಾಲಿ ಚೆನ್ನಯ್ಯ ೫-ಹೀಗೆ ಹಸ್ತಪ್ರತಿ ಲೇಖನಕಾರ್ಯ ಮಾಡಿದ್ದಾರೆ. ಇವರಲ್ಲಿ ಬೋಳ ಮಲ್ಲಿಕಾರ್ಜುನದೇವ ಸೋಮಯ್ಯ, ಅಂಬಾಜಯ್ಯ ಕೇವಲ ತಾಳೆಪ್ರತಿ ಗಳನ್ನು ಪುರಾಣದ ರುದ್ರಯ್ಯ, ಸಾಲಿ ಚೆನ್ನಯ್ಯ ಕೇವಲ ಕಾಗದ ಪ್ರತಿಗಳನ್ನೂ ಲಿಪಿಗೊಳಿಸಿದ್ದಾರೆ.[೭೧]

ಹೀಗೆ ಒಬ್ಬನೇ ಹಲವು ಕೃತಿಗಳನ್ನು ನಕಲುಮಾಡಿದರೆ, ಇದಕ್ಕೆ ವಿರುದ್ಧವೆನ್ನು ವಂತೆ ಒಬ್ಬನಿಗಿಂತ ಹೆಚ್ಚು ಜನ ಸೇರಿ ಒಂದು ಕೃತಿಯನ್ನು ಲಿಪಿಸಿರುವುದೂ ಉಂಟು. ಅಖಂಡೇಶ್ವರ ವಚನ ಕಟ್ಟಿನ ಆರಂಭದಲ್ಲಿ ''ಸಾಧಾರಣ ಸಂವತ್ಸರದ ಕಾರ್ತೀಕ ಬಹುಳ ೧೩ ಭಾನುವಾರದಲ್ಲು ಕೊರಟಗೆರೆ ಬಳೇಸಾಲೆ ಚಿಕ್ಕನಂಜುಂಡಪ್ಪಗೆ ವುಪಾದ್ಯ ತಂಮೈಯ್ಯನವರ ಕುಮಾರ ಭಾಸ್ಕರೈಯನು ಬರೆದುಕೊಟ್ಟ ಅಖಂಡೇಶ್ವರ ವಚನಕ್ಕೆ ಶುಭಮಸ್ತು'' ಎಂದೂ, ಕೊನೆಯಲ್ಲಿ ''ಆನಂದನಾಮ ಸಂವತ್ಸರದ ಕಾರ್ತಿಕ ಶು ಬಾನುವಾರ ೧ ತೋಟಮಠದ ಚಿಕ್ಕಯ್ಯನವರು ಬಳೇಸಾಲ ನಂಜುಂಡಪ್ಪಗೆ ಅರಸಿ ಬರದುಕೊಟ್ಟ ಅಖಂಡೇಶ್ವರನ ವಚನ ಸಮಾಪ್ತ'' ಎಂದೂ

---

* ಹೆಚ್ಚಿನ ವಿವರಗಳಿಗಾಗಿ ''ಆಕರ ಸಾಮಗ್ರಿಯಾಗಿ ಹಸ್ತಪ್ರತಿ ಪ್ರಶಸ್ತಿಗಳು'' (ಬಿ. ಆರ್. ಹಿರೇಮಠ,) ಚಿನ್ಮೂಲಾದ್ರಿ ಚೇತನ ಪು. ೧೭೦. ನೋಡಿರಿ.

೬೮. ಮೈಹಸೂ III-೧೧೫೭.

೬೯. ಮೈಹಸೂ IX-೧೨೧.

೭೦. ಮೈಹಸೂ I-೨೬೧ ಕವಿಕಂಠಹಾರ.

೭೧. ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ. ಪುಟ-೮೨-೭೩. (ಡಾ. ಬಿ. ಕೆ. ಹಿರೇಮಠ)

ಉಲ್ಲೇಖಿಸಲಾಗಿದೆ.[೭೨] ಇಲ್ಲಿ ಭಾಸ್ಕರಯ್ಯ ಪ್ರಾರಂಭಿಸಿದ್ದ ಪ್ರತಿಯನ್ನು ಚಿಕ್ಕಯ್ಯ ಮುಕ್ತಾಯಗೊಳಿಸಿದ್ದಾನೆ. "ಐದು ಗಣಂಗಳು ಬರದುಕೊಟ್ಟ ನೂರೊಂದುಸ್ಥಲ ಪುಸ್ತಕ"[೭೩] ಎಂಬುದು ೫ ಜನ ಲಿಪಿಕಾರರ ದುಡಿಮೆಯನ್ನು ಸೂಚಿಸುತ್ತದೆ.

ಹಸ್ತಪ್ರತಿಗಳನ್ನು ಶುದ್ಧವಾಗಿ ಬರೆಯಬೇಕೆಂಬುದು ನಮ್ಮ ಒಟ್ಟು ಲಿಪಿಕಾರರ ಆದರ್ಶ. ಅದಕ್ಕಾಗಿಯೇ–

ಯಾದೃಶಂ ಪುಸ್ತಕಂ ದೃಷ್ಟ್ವಾ। ತಾದೃಶಂ ಲಿಖಿತಂ ಮಯಾ ॥
ಅಬದ್ಧೋವಾ ಸುಬದ್ಧೋ ವಾ। ಮಮದೋಷೋ ನ ವಿದ್ಯತೇ ॥
ತಪ್ಪಂ ಬರೆದಾತಂ ಜಡ। ನಪ್ಪಾತಂ ಬರೆದನೆಂದು ಬಯ್ಯಲ್ವೇಡಿಂ ।
ತಪ್ಪಿಲ್ಲ ಶುದ್ಧಮಕ್ಕುಂ। ತಪ್ಪಿಲ್ಲದೆ ಪ್ರತಿಸಮಾನವಾಗಿಯೆ ಬರೆದೆಂ ॥

ಎಂಬಂಥ ಹೇಳಿಕೆಗಳು ಸಾಮಾನ್ಯವಾಗಿ ಎಲ್ಲ ಹಸ್ತಪ್ರತಿಗಳ ಕೊನೆಯಲ್ಲಿ ಕಂಡು ಬರುತ್ತವೆ. ಹೀಗಿದ್ದೂ ಕೈತಪ್ಪು, ಕಣ್ತಪ್ಪು, ಕಿವಿತಪ್ಪುಗಳು ಜರುಗುವವೆಂಬ ಅರಿವು ಅವರಿಗಿದ್ದಿತು. ಆದುದರಿಂದ ಆಗಾಗ "ಇದರಲ್ಲಿ ತಪ್ಪು ಯಿದ್ದರೆ ಬುದ್ಧಿವಂತರು ತಿದ್ದಿ ಕೊಂಬುದು. ಬೇಸರವ ಮಾಡಲಾಗದು। ನಿಂಮು ತೊತ್ತಿನ ತೊತ್ತು ಪಡಿದೊತ್ತು ನಂನ ಕೃಪಾಕಟಾಕ್ಷದಿಂದ ಪರಿಪಾಲಿಸೂದು[೭೪] ಎಂದು" ಕೇಳಿಕೊಂಡ ಅನೇಕ ಉದಾಹರಣೆಗಳು ಸಿಗುತ್ತವೆ.

ಲಿಪಿಕಾರರಿಗೆ ಕೆಲವು ಅರ್ಹತೆಗಳು ಅವಶ್ಯ. ಕೆಲವರ ಅಕ್ಷರ ಸುಂದರ, ಭಾಷೆ ಅಶುದ್ಧ. ಕೆಲವರು ಇದಕ್ಕೆ ವಿರುದ್ಧ. ಕೆಲವರು ಎರಡರಲ್ಲಿಯೂ ಶ್ಲಾಘ್ಯರು; ಮತ್ತೆ ಕೆಲವರು ಇದಕ್ಕೆ ವಿರುದ್ಧ. ಹೀಗಿದ್ದೂ ಸಾಮಾನ್ಯವಾಗಿ ಅರ್ಹಪ್ರತಿಕಾರರನ್ನೇ ಬರೆಯಲು ಆಯ್ದುಕೊಳ್ಳುತ್ತಿದ್ದರು.

"ಎರಡು ಮೂಲಪ್ರತಿಗಳನ್ನು ಇಟ್ಟುಕೊಂಡು ಸಮಗ್ರವಾಗಿ ಬರೆಯಲ್ಪಟ್ಟಿದೆ"[೭೫]

"ಬಸವಪುರಾಣದ ಪ್ರತಿಗಳಲ್ಲಿ ಪಟ್ಟದಂಗಳು ಸೂತ್ರ ತಪ್ಪಿ ಹಿಂಚುಮುಂಚಾಗಿಯೂ, ಪೂರ್ವಾರ್ಧಪರಾರ್ಧಗಳು ಹಿಂಚುಮುಂಚಾಗಿಯೂ ಕಥೆಯೂ ಕಾಂಡಗಳೂ ಹಿಂಚುಮುಂಚಾಗಿಯೂ ಇವೆ. ಕಾಂಡಗಳಲ್ಲಿ ಬಂದ ನಾಂದಿಯೇ ಪುನರಪಿ ಬಂದಿದೆ. ಕೆಲವು ಪದ್ಯಗಳು ಹೆಚ್ಚಿಗೆ. ಅಂತು ಕಾಂಡ ೮ಕ್ಕೆ ಸಂಧಿ ೬೦ಕ್ಕೆ ಪದ ೩೬೨೧ಕ್ಕಂ ಹೆಚ್ಚಾಗಿದ್ದರೆ ಹೆಚ್ಚಿಗೆಯೆಂದು ತಿಳಿವುದು. ಕಡಿಮೆಯಾಗಿದ್ದರೆ ಲೇಖನದೋಷವೆನ್ನುವುದು. ಕೆಲವು ಪದ್ಯಗಳನ್ನು ಸರ್ವಲಕ್ಷಣಪೂರ್ಣವಾಗಿ ತಿರ್ದಿ ಸೇರ್ಪಡಿಸಿದರು

೭೨. ಮೈಹಸೂ V–೩೩.
೭೩. ಮೈಹಸೂ V–೨೮೧.
೭೪. ಬೆಂಹಸೂ–೩೧೦, ವೀರಮಾಹೇಶ್ವರಾಚಾರ ಸಂಗ್ರಹ.
೭೫. ಮೈಹಸೂ III–೧೫೦೮ ಲೀಲಾವತಿ

ನೀಲಕಂಠಾಚಾರ್ಯರು"[೭೬] ಎಂಬಂಥ ವಿವರಗಳೂ ಅಕ್ಷರಗಳ ರೂಪಸಾದೃಶ್ಯಕ್ಕೆ ಮೋಸ ಹೋಗದೆ ನಕಲುಕಾರ್ಯ ಮಾಡಿರುವುದನ್ನು ತಿಳಿಸುವ–

ಘುಪ ದಡ ತಕ ನಿಗಿ ಗೊಣಂ ಸಪ ಯಮು ಬಿಖಿ ಭಿಜಿ
ರಿಲಿಯೆಂಬ ವಿಪ್ರುಳಕ್ಷರಂ ಭೇದಿಸಿ ಬರದ ಬರಹ ದೂಷಣವಿಲ್ಲಂ"[೭೭]

ಎಂಬ ಉಲ್ಲೇಖಗಳೂ ಈ ಲಿಪಿಕಾರರು ಇಂದಿನ 'ಸಂಪಾದನಶಾಸ್ತ್ರ ವಿದ್ವಾಂಸ'ರ ಮನೋಧರ್ಮದವರಾಗಿದ್ದರೆಂದು ಸೂಚಿಸುತ್ತವೆ.

ತಾಳೆಗರಿ/ಕಾಗದ/ಕಂಟ/ಲೆಕ್ಕಣಿಕೆ/ಕಪ್ಪು/ಮಸಿ–ಇವುಗಳನ್ನು ಬಳಸಿಕೊಂಡು ಕವಿ/ಲಿಪಿಕಾರ ರೂಪಿಸಿದ ಗ್ರಂಥವನ್ನು ಓದುವಾಗ, ಸಾಮಾನ್ಯವಾಗಿ ಕೈಯಲ್ಲಿ ಹಿಡಿಯದೆ, ವ್ಯಾಸಪೀಠದ ಮೇಲಿಡುತ್ತಿದ್ದರು. ಕನ್ನಡಿಗರು ಇದನ್ನು 'ಅಟ್ಟವಣೆ' ಎಂದು ಕರೆಯುತ್ತಿದ್ದರು. "ಅಟ್ಟವಣೆ ಕೋಲ್ಗಳ ಮೇಲೆಸೆದಿರ್ದ ವೀರಸಿದ್ಧಾಂತದ ಶಾಸನಂ ಬರೆದ ಪೊತ್ತಗೆಯಂತೆ"[೭೮] ಎಂಬ ಪಂಪನ ವಾಕ್ಯ ಇದನ್ನು ತಿಳಿಸುತ್ತದೆ. ಅಟ್ಟಮಣೆ ಎಂದು ಇದರ ನಿಜರೂಪ. ಇದನ್ನು ಕಟ್ಟಿಗೆಯಂತೆ ಬಿದಿರಿನಿಂದಲೂ ಮಾಡುತ್ತಿರಬಹುದು. ಪಂಪ ಇಲ್ಲಿ 'ಕೋಲ್' ಎಂಬ ಪದ ಬಳಸಿದುದೇ ನಾವು ಹೀಗೆ ಊಹಿಸಲು ಕಾರಣ.

**II –ಲಿಪಿ:** ಹಸ್ತಪ್ರತಿಗಳು ಹೊಸದಾಗಿ ಹುಟ್ಟುತ್ತ ಬಂದಂತೆ ಹಳೆಯವು ನಾಶವಾಗುತ್ತ ಹೋಗುವುದರಿಂದ ಇಲ್ಲಿಯ ಅಕ್ಷರಗಳ "ಐತಿಹಾಸಿಕ ಬೆಳವಣಿಗೆ"ಯನ್ನೂ,ಕೆಲವೊಮ್ಮೆ ಹಸ್ತಪ್ರತಿಗಳು ಪ್ರದೇಶದಿಂದ ಪ್ರದೇಶಕ್ಕೆ ಪರಿಚಲನಗೊಳ್ಳುತ್ತ ಬಂದುದರಿಂದ ಅಕ್ಷರಗಳ "ಪ್ರಾದೇಶಿಕ ಸ್ವರೂಪ"ವನ್ನೂ ಅರ್ಥಮಾಡಿಕೊಳ್ಳುವುದು ಕಠಿಣವಾಗುತ್ತದೆ. ಹೀಗಿದ್ದೂ ಕಾಲ, ದೇಶ ನಮೂದಿತ ಹಸ್ತಪ್ರತಿಗಳನ್ನು ಕಣ್ಣೆದುರಿಗೆ ಇಟ್ಟುಕೊಂಡು ಅವುಗಳ ಲಿಪಿಯ ಐತಿಹಾಸಿಕ ಬೆಳವಣಿಗೆ, ಪ್ರಾದೇಶಿಕ ವ್ಯತ್ಯಾಸಗಳನ್ನು ಗುರುತಿಸಬಹುದಾಗಿದೆ.

ಕನ್ನಡ ಹಸ್ತಪ್ರತಿಗಳಿಗಾಗಿ ಕನ್ನಡ ಲಿಪಿಯನ್ನೇ ಬಳಸಿರುವುದು ಸಹಜವಾಗಿದ್ದರೂ, ಕೆಲವೊಮ್ಮೆ ತಿಗಳಾರಿ, ಮೋಡಿ, ಗ್ರಂಥಲಿಪಿ, ನಂದಿನಾಗರಿಲಿಪಿ ಬಳಸಿದ್ದಾರೆ. ಸಂಸ್ಕೃತಭಾಷೆಯ ನಾಗವರ್ಮನ ಕರ್ಣಾಟ ಭಾಷಾಭೂಷಣ ಮಲೆಯಾಳಿ, ಮೋಡಿ, ಗ್ರಂಥ, ಕನ್ನಡ–ಇಷ್ಟು ಲಿಪಿಗಳಲ್ಲಿ ಸಿಗುತ್ತದೆ.[೭೯] ಕನ್ನಡ ಭಾಷೆಯ ಪ್ರತಿಭಾಗೀ ಕನ್ನಡ ವ್ಯಾಖ್ಯಾನ, ಪ್ರಾಕೃತಮಂಜರಿ, ಭಾಗವತ ಟೀಕೆಗಳು

೭೬. ಕಕಚ I–೪೮೨ (೧೯೬೧)

೭೭. ಮೈಹಸೂ I–೨೪೧, ೪೨, ೪೩.

೭೮. ಪಂಭಾ XI–೪೬

೭೯. ಮೈಹಸೂ I–೨೪೧ (ಮಲೆಯಾಳಿ ಲಿಪಿ), ೨೪೨ (ಗ್ರಂಥಲಿಪಿ), ೨೪೩ (ಮೋಡಿ ಲಿಪಿ), ೨೪೪ (ಕನ್ನಡಲಿಪಿ).

ನಂದಿನಾಗರಿ ಲಿಪಿಯಲ್ಲಿವೆ.[೮೦] ಕುಮಾರವ್ಯಾಸ ಭಾರತ ತೆಲುಗು ಲಿಪಿಯಲ್ಲಿದೆ.[೮೧] ಇದಕ್ಕೆ ವಿರುದ್ಧವೆನ್ನುವಂತೆ ಕರ್ನಾಟಕದಲ್ಲಿ ಸಿಗುವ ಅನ್ಯಭಾಷೆಯ ಕೃತಿಗಳಿಗಾಗಿ ಕನ್ನಡ ಲಿಪಿಯನ್ನು ಬಳಸಿದುದು ಕಂಡುಬರುತ್ತದೆ. ಸಾಮಾನ್ಯವಾಗಿ ಇಲ್ಲಿಯ ಸಂಸ್ಕೃತಕೃತಿಗಳೆಲ್ಲ ಕನ್ನಡ ಲಿಪಿಯಲ್ಲಿಯೇ ಇವೆ. ಪ್ರಾಕೃತ-ಸಂಸ್ಕೃತ ಮಿಶ್ರಭಾಷೆಯ ಸುಪ್ರಸಿದ್ಧ ಧವಲಾ, ಜಯಧವಲಾ, ಮಹಾಧವಲಾ ಪ್ರತಿಗಳು ಕನ್ನಡ ಲಿಪಿಯಲ್ಲಿರುವುದು ಗಮನಿಸತಕ್ಕ ಸಂಗತಿಯಾಗಿದೆ.

ಈ ಸಂದರ್ಭದಲ್ಲಿ ಕನ್ನಡ ಹಸ್ತಪ್ರತಿಗಳಿಗೆ ಬಳಸಲಾದ ತಿಗಳಾರಿ, ಗ್ರಂಥ, ಅರವ, ಮೋಡಿ, ನಂದಿನಾಗರಿಗಳೆಂಬ ವಿಶಿಷ್ಟಲಿಪಿಗಳ ವಿವೇಚನೆ ಅಗತ್ಯ. ತಿಗಳಾರಿ ಯೆಂಬುದು ತಿಗಳು+ಆರಿ ಎಂಬಿವುಗಳ ಸಮಸ್ತರೂಪವಾಗಿದೆ. ಇದರ ನಿಜರೂಪ ತಮಿಳು ಆರ್ಯ. ಪ್ರಾಚೀನಕಾಲದಲ್ಲಿ ತಮಿಳರನ್ನು ತಿಗುಳರೆಂದೇ ಕರೆಯುತ್ತಿದ್ದರು. ದ್ರಾವಿಡ ಪ್ರಾಂತದಲ್ಲಿ ನೆಲೆನಿಂತ ಬ್ರಾಹ್ಮಣರು ಬಳಸುತ್ತಿದ್ದ ಲಿಪಿಯಿದು. ಕರ್ನಾಟಕಕ್ಕೆ ಬಂದರೆ ಕರಾವಳಿ ತೀರ, ಮಲೆನಾಡು ಮತ್ತು ದಕ್ಷಿಣಕನ್ನಡ-ಉತ್ತರಕನ್ನಡ ಜಿಲ್ಲೆಗಳ ಬ್ರಾಹ್ಮಣರು ಮಾತ್ರ ಇದನ್ನು ಬಳಸುತ್ತಿದ್ದರು. ಹೀಗಾಗಿ ಇದು ಸಾಮಾಜಿಕ ಲಿಪಿ (Social Script) ಮತ್ತು ಪ್ರಾದೇಶಿಕಲಿಪಿ (Regional Script) ಎರಡೂ ಲಕ್ಷಣಗಳನ್ನು ಹೊಂದಿದೆ. ಬಹುಶಃ ಸಂಸ್ಕೃತ ಸಾಹಿತ್ಯವನ್ನು ಕರ್ನಾಟಕದಲ್ಲಿ ರಕ್ಷಿಸಲು ಈ ಲಿಪಿಯನ್ನು ರೂಢಿಸಿಕೊಂಡಂತಿದೆ. ಇದರ ಸ್ವರೂಪ ತಮಿಳಿಗಿಂತ ಮಲೆಯಾಳಿ ಲಿಪಿಗೆ ಹೆಚ್ಚು ಸಮೀಪವಿದೆ. ಕೇರಳ ದೇಶದ ಗಾಢಸಂಪರ್ಕದಿಂದ ಇದು ಹುಟ್ಟಿದೆಯೆಂದೂ, ವೇದಶಾಸ್ತ್ರಾದಿಗಳು ಕನ್ನಡ ಲಿಪಿಯ ಮೂಲಕ ಸಾಮಾನ್ಯರ ಕೈಸೇರಿ, ಅವುಗಳ ಪಾಠ ಹಾಳಾಗಬಾರದೆಂಬ ಉದ್ದೇಶದಿಂದ ಈ ರಹಸ್ಯಲಿಪಿ ಬೆಳೆಸಿದರೆಂದೂ ವಿದ್ವಾಂಸರು ಹೇಳುತ್ತಾರೆ. ೧೨೨೦ರ ಮೈಸೂರು ಜಿಲ್ಲೆಯ ಮೂಲಿಂಗ ಅಗ್ರಹಾರದ ಶಾಸನದಲ್ಲಿ "ನಾಗರ ಕನ್ನಡ ತಿಗುಳಾರ್ಯಮನೋದಿಸುವ ಬಾಲಶಿಕ್ಷೆ"ಯ ಶಿಕ್ಷಕರಿಗೆ ದಾನನೀಡಿದ ಉಲ್ಲೇಖವಿದ್ದು, ಇಲ್ಲಿಯ ತಿಗುಳಾರ್ಯ ಎಂಬುದು ತಿಗುಳಾರಿಯೇ ಆಗಿರಬಹುದು. ಕರ್ನಾಟಕದಲ್ಲಿ ಸಂಸ್ಕೃತಭಾಷೆಯಂತೆ ಕನ್ನಡಭಾಷೆಯ ಕೃತಿಗಳನ್ನೂ ಈ ಲಿಪಿಯಲ್ಲಿ ಬರೆದುದಕ್ಕೆ ಅನೇಕ ಉದಾಹರಣೆಗಳಿವೆ. ಧಾರವಾಡ ಕನ್ನಡ ಸಂಶೋಧನ ಸಂಸ್ಥೆಯಲ್ಲಿರುವ ನಳೋದಯ ಕಾವ್ಯ, ಅಗಸ್ತ್ಯಾಕ್ರಮ ವರ್ಣನೆ, ನರ್ಮದಾ ಮಹಾತ್ಮೆ, ಶೈವ ಕರುಣಾಮೃತ ಸಿದ್ಧಾಂತ, ಶಿವತತ್ವ ವಿವೇಕಾಖ್ಯಾನ, ಸಾಂಖ್ಯ ಯೋಗ, ವೈದ್ಯಸಾರ, ಮಂತ್ರಸಾರ ಮೊದಲಾದ ಕೃತಿಗಳು ತಿಗಳಾರಿ ಲಿಪಿಯಲ್ಲಿವೆ. ಸಾಳ್ವಭಾರತದ ಒಂದೇ ಒಂದು ಪ್ರತಿ ಕನ್ನಡ ಲಿಪಿಯಲ್ಲಿದೆ. ಆದರೆ ಇದರ ಬೇರೆ ಪ್ರತಿಗಳು ತಿಗಳಾರಿಯಲ್ಲಿರುವುದಾಗಿ ತಿಳಿದು ಬರುತ್ತದೆ.

---

೮೦. ಮೈಹಸೂ II-೯೩೦, ೩೧, III-೧೧೫೪

೮೧. ಮೈಹಸೂ III-೧೧೮೦, ೧೧೮೧.

ಗ್ರಂಥಲಿಪಿ ತಮಿಳುನಾಡಿನ ಉತ್ತರ ಅರ್ಕಾಡು, ದಕ್ಷಿಣ ಅರ್ಕಾಡು, ಸೇಲಂ, ತಿರುಚಿನಾಪಳ್ಳಿ, ಮಧುರೆ, ತಿರುನೇಲ್ವೇಲಿ ಜಿಲ್ಲೆಗಳಲ್ಲಿ ಬಳಕೆಯಾಗುತ್ತಲಿದ್ದಿತು. ಮಲೆಯಾಳಂ ಲಿಪಿಗೆ ಮೂಲ ಈ ಗ್ರಂಥಲಿಪಿಯಾಗಿದೆ. ಮಲೆಯಾಳಿ ಭಾಷೆಯಲ್ಲಿ ಇದಕ್ಕೆ 'ಆರ್ಯ ಎಟುತ್ತು' (ಎಟುತ್ತು=ಲಿಪಿ) ಎಂದು ಕರೆಯುತ್ತಾರೆ. ಮಲೆಯಾಳಿಗಳು ಬಿಡಿಸಿಕೊಳ್ಳದಷ್ಟು ಸಂಸ್ಕೃತದ ಪ್ರಭಾವಕ್ಕೆ ಒಳಗಾದ ಸಂದರ್ಭದಲ್ಲಿ, ಆ ಭಾಷೆಯ ಗ್ರಂಥಗಳನ್ನು ಬರೆಯಲು ತಮ್ಮ ಲಿಪಿಸಂಖ್ಯೆ ಸಾಲದಿರಲು, ಅನಿವಾರ್ಯವಾಗಿ ಈ ಲಿಪಿಯನ್ನು ರೂಪಿಸಿಕೊಳ್ಳಬೇಕಾಯಿತು. ಸಂಸ್ಕೃತದಲ್ಲಿ ಸಾಹಿತ್ಯಕೃತಿಗೆ 'ಗ್ರಂಥ' ಎಂದು ಹೆಸರು. ಹೀಗೆ ಗ್ರಂಥಗಳನ್ನು ಬರೆಯಲು ಬಳಸುತ್ತಿದ್ದ ಕಾರಣ ಈ ಲಿಪಿಗೆ 'ಗ್ರಂಥಲಿಪಿ' ಎಂಬ ಹೆಸರು ಪ್ರಚಲಿತವಾಯಿತು. ೭ ರಿಂದ ೧೫ನೆಯ ಶತಮಾನದ ವರೆಗೆ ರೂಪಾಂತರಗೊಳ್ಳುತ್ತ ಬಂದ ಈ ಲಿಪಿ ಮೊದಮೊದಲು ಕನ್ನಡ-ತೆಲುಗು ಲಿಪಿಗಳನ್ನೂ, ಪಲ್ಲವರ ತರುವಾಯ ಮಲೆಯಾಳಿ ಲಿಪಿಯನ್ನೂ ಹೋಲುವಂತೆ ಬೆಳೆಯಿತು. ತಮಿಳಿನ ಶಾಸನಲಿಪಿಗೂ ಇದಕ್ಕೂ ಹೋಲಿಕೆ ಇದೆ. ಅದಕ್ಕಾಗಿಯೇ ತಮಿಳುಲಿಪಿಯನ್ನು ವಿದ್ವಾಂಸರು 'ಗ್ರಂಥ ತಮಿಳುಲಿಪಿ' ಎಂದು ಕರೆಯುತ್ತಾರೆ. ತುಳುವಿನ ಕೆಲವು ಶಾಸನಗಳೂ ಈ ಲಿಪಿಯಲ್ಲಿ ಸಿಗುತ್ತವೆ.

ಕನ್ನಡ ಹಸ್ತಪ್ರತಿಗಳಿಗೆ ಬಳಸಿದ ಇನ್ನೊಂದು ಬಗೆಯ ಲಿಪಿ 'ಅರವ ಲಿಪಿ' ಯಾಗಿದೆ. ಅರವವೆಂದರೆ ತಮಿಳು. ಹೀಗಾಗಿ ಇದನ್ನು ಒಂದು ಕಾಲಘಟ್ಟದ ತಮಿಳುಲಿಪಿಯೆಂದೇ ಹೇಳಬಹುದು.

ಕನ್ನಡ ಹಸ್ತಪ್ರತಿಗಳು ಮೋಡೀ ಲಿಪಿಯಲ್ಲಿಯೂ ಸಿಗುತ್ತವೆ. ಇವು ಸಾಮಾನ್ಯವಾಗಿ ಮರಾಠಾ ಕಾಲದ ಪ್ರತಿಗಳು. ಕನ್ನಡ ಲಿಪಿಮಾಲೆಯನ್ನೇ ಒಳಗೊಂಡಿರುವ ಇದು, ಒಂದು ವಿಧವಾದ ಸಂಕ್ಷಿಪ್ತ ಹಾಗೂ ಸೇರಿಸಿ ಲಿಪಿಸುವ ಬರೆವಣಿಗೆಯಾಗಿದೆ.

ನಂದಿನಾಗರಿ ಲಿಪಿಯಲ್ಲಿಯೂ ಕೆಲವು ಕನ್ನಡ ಕೃತಿಗಳು ಬರೆಯಲ್ಪಟ್ಟಿವೆ. ಗುಜರಾಥ ಪ್ರಾಂತದ ನಾಗರಖಂಡದಲ್ಲಿ ರೂಪಗೊಂಡ ಬ್ರಾಹ್ಮೀಲಿಪಿಯೇ ನಾಗರಿ ಲಿಪಿಯಾಗಿದೆ. 'ದೇವ' ಬಿರುದಿನ ಗುಪ್ತ ಮನೆತನದ ಸ್ಕಂದಗುಪ್ತನ ಕಾಲದಲ್ಲಿ ಈ ನಾಗರೀ ಲಿಪಿಗೆ ತಲೆಕಟ್ಟು ಕೊಡುವ ಪದ್ಧತಿ ರೂಢವಾಗಿ ಅದಕ್ಕೆ 'ದೇವನಾಗರಿ' ಎಂಬ ಹೆಸರು ಬಳಕೆಗೆ ಬಂದಿತು. ಯಾದವ, ವಿಜಯನಗರ ಕಾಲದಲ್ಲಿ ಒಂದಿಷ್ಟು ಬದಲಾವಣೆ ಹೊಂದಿದ ಈ ಲಿಪಿಯನ್ನು 'ನಂದಿನಾಗರ' ಎಂದು ಕರೆಯುತ್ತಾರೆ.[೮೨]

೮೨. ಮಣಿಹ. ೩೮೫-೪೦೦.

ಕೊಡೆಕಲ್ಲು ಗ್ರಾಮದಲ್ಲಿ ೧೧ ಪ್ರಕಾರದ ಲಿಪಿಗಳಿದ್ದು, ೧೫ನೆಯ ಶತಮಾನದ ಬಸವಣ್ಣನೆಂಬ ಸಂತನ ವಚನಗಳನ್ನು ಈ ಲಿಪಿಗಳಲ್ಲಿ ಬರೆಯಲಾಗಿದೆ. ಇದಕ್ಕೆ 'ಅಮರಗನ್ನಡಲಿಪಿ' ಎಂದು ಕರೆಯುತ್ತಾರೆ.[೮೩]

ಇವುಗಳನ್ನು ಬಿಟ್ಟರೆ ಗಡಿಪ್ರದೇಶಗಳಲ್ಲಿ ತೆಲುಗು, ತಮಿಳು, ಮಲೆಯಾಳಂ, ಮರಾಠಿ ಭಾಷೆಯ ಕೃತಿಗಳನ್ನು ಕನ್ನಡ ಲಿಪಿಯಲ್ಲಿಯೂ, ಕನ್ನಡ ಭಾಷೆಯ ಕೃತಿಗಳನ್ನು ಈ ಭಾಷಾಲಿಪಿಗಳಲ್ಲಿಯೂ ಬರೆದುದಕ್ಕೆ ಅನೇಕ ನಿದರ್ಶನಗಳು ಸಿಗುತ್ತವೆ.

ಶಾಸನಕಾರರಂತೆ ಹಸ್ತಪ್ರತಿಕಾರರೂ ಕೆಲವೊಮ್ಮೆ ತಮ್ಮ ಅಕ್ಷರಗಳ ಬಗ್ಗೆ ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಇದರಿಂದ ಸುಂದರ ಬರಹ, ಸಣ್ಣಬರಹ ಎಂಬ ಎರಡು ರೀತಿಗಳ ಬಗ್ಗೆ ಅವರು ಆಸಕ್ತಿ ವಹಿಸುತ್ತಿದ್ದರೆಂದು ತಿಳಿದುಬರುತ್ತದೆ.

**ಸುಂದರ ಬರಹ :** ಸೌಂದರ್ಯ ಮನುಷ್ಯನ ಮೂಲಭೂತಪ್ರಜ್ಞೆಯಾಗಿದೆ, ಅಕ್ಷರಗಳ ವಿಷಯವಾಗಿಯೂ ಈ ಪ್ರಜ್ಞೆಯನ್ನು ನಮ್ಮ ಲಿಪಿಕಾರರು ಬೆಳೆಸಿಕೊಂಡುದಕ್ಕೆ ಅನೇಕ ಉದಾಹರಣೆಗಳು ಸಿಗುತ್ತವೆ. ಅವುಗಳಲ್ಲಿ ಪುಷ್ಪದಂತ ಪುರಾಣವನ್ನು ಬರೆದ ನವಿಲುಗುಂದದ ಮಾದಿರಾಜನ ಹೇಳಿಕೆ ಸುಪ್ರಸಿದ್ಧವಾದುದು :

ಬಿಂದುವಿನೊಂದು ಶೋಭೆ ತಲೆಕಟ್ಟಿನ ಪೊರ್ಕುಳ ಚೆಲ್ವು ಮಾತ್ರೆಯೊಳ್।<br>
ನಿಂದ ಬೆಡಂಗು ಬಳ್ಳಿಯೊಳೊಡಂಬಡುತಿರ್ಪ ನಯಂ ವಿಸರ್ಗದೊ ॥<br>
ಳ್ಪೊಂದಿರಲಕ್ಕರಕ್ಕೆ ಬರೆವಂ ಚದುರರ್ ಪರಿವರ್ಣಿಸಲ್ ನವಿ।<br>
ಲ್ಗುಂದದ ಮಾದಿರಾಜವಿಬುಧಂ ವಿಬುಧೋದಿತ ನವ್ಯಕಾವ್ಯಮಂ ॥[೮೪]

ಎಂಬ ಪದ್ಯ ನಮ್ಮ ಪ್ರಾಚೀನರ ಅಕ್ಷರಸೌಂದರ್ಯಪ್ರಜ್ಞೆಗೆ ನಿದರ್ಶನವಾಗಿದೆ. "....ದಿವ್ಯತಾಳಪತ್ರಮಂ ತಂದು....ಅಲಂಕಾರವಾಗಿ ಕಣ್ಗೆ ಚೆಲ್ವಾಗೊಪ್ಪಲ್ಪಟ್ಟ ದಿವ್ಯಶಿವಾಲಯವಂ ನಿರ್ಮಿಸಿದಂತಿಬಾರದೆಂದು, ಬಿಂದು ವಿಸರ್ಗಂ ದಡ್ಡತೆ ಹೊಂದಿದಾವೃತೋರ್ಧ್ವರೇಫ ದೀರ್ಘಹ್ರಸ್ವದಿಂದೊಪ್ಪುತ್ತಿರ್ದ ಅಕ್ಕರಮೂರ್ತಿಗಳಂ ಲೇಖನವಂ ಮಾಡೆಂದು''[೮೫] ಚಿಕ್ಕಯ್ಯನವರು ತನಗೆ ತಾಳೆಪ್ರತಿ ಕಟ್ಟನ್ನು ಕೊಟ್ಟರೆಂದು ಹೇಳಿದ ಅನ್ನದಾನದೇವರ ಈ ವಿವರ,ಅವರು ಅಕ್ಷರಗಳನ್ನು ದೇವತಾ ವಿಗ್ರಹಗಳೆಂದು ಪರಿಗಣಿಸಿದ್ದ ಪವಿತ್ರಭಾವನೆಯನ್ನು ತಿಳಿಸುತ್ತದೆ.

**ಸಣ್ಣ ಬರಹ :** ಕೆಲವು ಲಿಪಿಕಾರರು ತಮ್ಮ ಸಣ್ಣ ಗಾತ್ರದ ಲಿಪಿಯ ಬಗ್ಗೆ ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಪುಟಗಳ ಉಳಿತಾಯಕ್ಕಿಂತ ಇದನ್ನು ಒಂದು ಕಲೆಯಾಗಿ ಇವರು ಬೆಳೆಸಿಕೊಂಡಿದ್ದರೆಂದು ತಿಳಿದುಬರುತ್ತದೆ.

---

೮೩. ಕೊಡೆಕಲ್ಲ ಬಸವಣ್ಣ: ಒಂದು ಅಧ್ಯಯನ (ಅಪ್ರಕಟಿತ) ಪು ೫೩೨

೮೪. ಕಕಚ I–೪೬೨.

೮೫. ಮೈಹಸೂ I–ಪ್ರಸ್ತಾವನೆ.

"ಸಂಪಾದನೆಯ ಸಣ್ಣ ಬರಹದ ಗುರುಬಸವರಾಜದೇವರು ಸೇರಿಸಿದ ಶರಣ ಚಾರಿತ್ರದ ವಚನ"[೮೬]

"ಸಂಣಬರಹದ ಗುರುಬಸವರಾಜದೇವರ ಶ್ರೀಪಾದಕಟಾಕ್ಷದಿಂದ ಶಿವಲಿಂಗ ದೇವರಿಗೆ ಟೀಕು ಯೇಕೋತ್ತರ ಸಮಾಪ್ತಿ''[೮೭]

ಇತ್ಯಾದಿ ಹೇಳಿಕೆಗಳು 'ಸಣ್ಣಬರಹ'ದ ಬಗ್ಗೆ ಸೂಚನೆ ನೀಡುತ್ತವೆ. ಇವರ ಬರವಣಿಗೆಗಳನ್ನು ಸೂಕ್ಷ್ಮದರ್ಶಕದ ಸಹಾಯದಿಂದ ಮಾತ್ರ ಓದಲು ಸಾಧ್ಯ. ೧೮" ಉದ್ದನೆಯ ಒಂದು ಚರಣದಲ್ಲಿ ೪೨೦ ದೇವನಾಗರಿ ಅಕ್ಷರ ಬರೆದ ಹಸ್ತಪ್ರತಿಯ ಒಂದು ಗರಿ, ಮೈಸೂರು ಪ್ರಾಚ್ಯಸಂಶೋಧನ ಸಂಸ್ಥೆಯಲ್ಲಿದೆ.[೮೮] ಈ ಮಾದರಿಯ ಕೆಲವು ಪ್ರತಿಗಳು ಬೇರೆ ಬೇರೆ ಭಾಂಡಾರಗಳಲ್ಲಿಯೂ ಸಿಗುತ್ತವೆ. ಇದಲ್ಲದೆ ಅಕ್ಷರ ಗಳಲ್ಲಿ ಆನೆ ಸಿಂಹಗಳನ್ನು ಅಳವಡಿಸುವವರೂ, ಶೀಘ್ರಲಿಪಿಕಾರರೂ, ಬಹುಲಿಪಿ ಲೇಖಕರೂ, ಅವಧಾನಲೇಖಕರೂ ತಾವು ಆಗಿದ್ದ ಬಗ್ಗೆ ಶಾಸನಲಿಪಿಕಾರರು ಹೇಳುವರಾದರೂ ಹಸ್ತಪ್ರತಿಲಿಪಿಕಾರರು ಹೀಗೆ ಹೇಳಿಕೊಂಡುದಕ್ಕೆ ಉದಾಹರಣೆ ಗಳಿಲ್ಲ. ಆದರೆ ಶಬ್ದಮಣಿದರ್ಪಣದ ಲಿಪಿಕಾರ ಯ, ಮತ್ತು ಲ ಒತ್ತುಗಳನ್ನು ಉದ್ದೇಶಪೂರ್ವಕವಾಗಿಯೇ ಕೆಳಗಿನ ಮೂರು ಸಾಲುಗಳ ವರೆಗೆ ಬೆಳೆಸಿ, ಗರಿಯ ಮೇಲೆ ಅಲ್ಲಲ್ಲಿ ಬಲ್ಬ ಇಳಿಬಿಟ್ಟ ರೀತಿಯನ್ನು ನೆನಪಿಸುತ್ತಾನೆ.[೮೯] ವಿದುರನೀತಿಯ ಒಂದು ಹಸ್ತಪ್ರತಿಯಲ್ಲಿ (ಮೈಹಸೂ. ೧೧೫೭) ಅಕ್ಷರಗಳನ್ನು ಬಗೆ ಬಗೆಯ ಚೌಕ ಮನೆಗಳ ರೀತಿಯಲ್ಲಿ ವಿನ್ಯಾಸಗೊಳಿಸುತ್ತ ಹೋಗಲಾಗಿದೆ.[೯೦]

**III ಭಾಷೆ :** ಕರ್ನಾಟಕದಲ್ಲಿ ಕನ್ನಡಭಾಷೆಯ ಕೃತಿಗಳೇ ಅಧಿಕವಾಗಿರುವುದು ಸಹಜ. ಕನ್ನಡವನ್ನು ಬಿಟ್ಟರೆ ಇಲ್ಲಿ ಸಂಸ್ಕೃತಭಾಷೆಯ ಪ್ರತಿಗಳು ಸಿಗುತ್ತವೆ. ವೈದಿಕ ಪರಿಸರ ದಲ್ಲಿ ಇವು ಇನ್ನೂ ಹೆಚ್ಚು. ಜೈನಮಠಗಳಲ್ಲಿ ಪ್ರಾಕೃತ ಕೃತಿಗಳು ಲಭ್ಯವಾಗುತ್ತವೆ. ಇವುಗಳನ್ನು ಬಿಟ್ಟರೆ ಗಡಿನಾಡಿನಲ್ಲಿ ತಮಿಳು, ತೆಲುಗು, ಮಲಯಾಳಂ, ಮರಾಠಿ ಭಾಷೆಯ ಪ್ರತಿಗಳು ಅಲ್ಪಸಂಖ್ಯೆಯಲ್ಲಿ ಸಿಗುತ್ತವೆ. ಕೆಲವೊಮ್ಮೆ ವೀರಶೈವ ಹಸ್ತ ಪ್ರತಿಗಳಲ್ಲಿ ಜೈನ ಬ್ರಾಹ್ಮಣ ಹಸ್ತಪ್ರತಿಗಳಿಗಿಂತ ಭಾಷಾದೋಷ ಅಧಿಕ ಕಂಡು ಬರುತ್ತದೆ. ಇದಕ್ಕೆ ಕಾರಣ ಒಕ್ಕಲುತನ, ವ್ಯಾಪಾರ ವೃತ್ತಿಯ ವೀರಶೈವರಿಗೆ ಲೇಖನ ಕಲೆ, ಪ್ರಥಮ ಹವ್ಯಾಸವಲ್ಲ, ದ್ವಿತೀಯ ಹವ್ಯಾಸವಾಗಿರುವದು. ಈ ಎಲ್ಲ ಕಾರಣಗಳಿಂದಾಗಿ ಹಸ್ತಪ್ರತಿಗಳು, ಲಿಪಿಕಾರನ ವ್ಯಕ್ತಿತ್ವಕ್ಕೆ ಕನ್ನಡಿಯಾಗಿ ಉಳಿದಿವೆ.

---

೮೬. ಧಾವಭಾಂ–೩೨೭.

೮೭. ಧಾವಭಾಂ–೩೨೮.

೮೮. ಕನ್ನಡ ಹಸ್ತಪ್ರತಿಗಳ ಇತಿಹಾಸ. ಪುಟ–೩೫.

೮೯. ಶಬ್ದಮಣಿದರ್ಪಣ (ಕನ್ನಡ ಸಂಶೋಧನ ಸಂಸ್ಥೆ) ಹ. ಪ್ರ. ಸಂ. ೪೪.

೯೦. ಕನ್ನಡ ಹಸ್ತಪ್ರತಿಗಳ ಇತಿಹಾಸ. ಪುಟ–೩೬.

ಕನ್ನಡದಲ್ಲಿ ಹಳಗನ್ನಡ, ನಡುಗನ್ನಡ ಅವಸ್ಥೆಯ ಪ್ರತಿಗಳಿದ್ದು, ಇವುಗಳಲ್ಲಿ ನಡುಗನ್ನಡ ಅವಸ್ಥೆಯ ಪ್ರತಿಗಳು ವಿಪುಲ. ಇದಕ್ಕೆ ಕಾರಣ, ನಡುಗನ್ನಡದ ಕಾಲವ್ಯಾಪ್ತಿ ದೊಡ್ಡದು, ಕವಿಗಳ ಸಂಖ್ಯೆಯೂ ದೊಡ್ಡದು. ಅದು ಸರಳ ಶೈಲಿಯಲ್ಲಿರುವುದರಿಂದ ಸಾಮಾನ್ಯರೂ ಸ್ವ-ಪರ ಪ್ರಯೋಜನಾರ್ಥ ಇವುಗಳನ್ನು ಬರೆದಿದ್ದಾರೆ, ಬರೆಯಿಸಿದ್ದಾರೆ.

ಭಾಷೆ, ಲಿಪಿಗಳೇ ಹಸ್ತಪ್ರತಿಯ ಜೀವ-ಉಸಿರು. ಇವುಗಳ ಬಳಕೆ ಶುದ್ಧವಾಗಿದ್ದಷ್ಟೂ ಹಸ್ತಪ್ರತಿಗೆ ಉತ್ಕೃಷ್ಟತೆ ಪ್ರಾಪ್ತವಾಗುತ್ತದೆ. ದುರ್ದೈವದ ಸಂಗತಿಯೆಂದರೆ ಕರ್ನಾಟಕದಲ್ಲಿ ಅವುಗಳ ಉತ್ಕೃಷ್ಟತೆ ನಿರೀಕ್ಷಿತ ಎತ್ತರದಲ್ಲಿ ಸಾಗಿಬರಲಿಲ್ಲ. ಹೊಣೆಗೇಡಿ ಲಿಪಿಕಾರರು, ಕಿಡಿಗೇಡಿ ಲಿಪಿಕಾರರು ಹಸ್ತಪ್ರತಿಗಳ ಕೂಡ ಲಘುವಾಗಿ ವರ್ತಿಸಿರುವುದಕ್ಕೆ ಕೆಲವು ಉದಾಹರಣೆಗಳು ಸಿಗುತ್ತವೆ. ಕೂಲಿಗಾಗಿ ಬರೆದ ಹಸ್ತಪ್ರತಿಗಳಲ್ಲಿ ಈ ಧೋರಣೆ ವರ್ಧಿಸಿರುವುದು ಸಹಜ. ಇದಲ್ಲದೆ, ಧಾರ್ಮಿಕ ಕೃತಿಗಳಿಗಿಂತ ಲೌಕಿಕ ಕೃತಿಗಳ ಬಗ್ಗೆ, ಮಾರ್ಗಕೃತಿಗಳಿಗಿಂತ ದೇಶಿಕೃತಿಗಳ ಬಗ್ಗೆ, ಸಣ್ಣ ಗಾತ್ರದ ಕೃತಿಗಳಿಗಿಂತ ದೊಡ್ಡ ಗಾತ್ರದ ಕೃತಿಗಳ ಬಗ್ಗೆ ಇವರು ಲಘುವಾಗಿ ವರ್ತಿಸಿದ್ದಾರೆ. ಅಂದರೆ ವೈಯಕ್ತಿಕ ಹೊಣೆಗಾರಿಕೆ ಮತ್ತು ಹೊಣೆಗೇಡಿತನಗಳು ಕಾರಣವಾಗಿ ಹಸ್ತಪ್ರತಿಯ ಗುಣಮಟ್ಟದಲ್ಲಿ ವ್ಯತ್ಯಾಸ ತೋರಿಬಂದಿದೆ, "ಒಟ್ಟು ಪ್ರತಿಯ ಮೇಲೆ ಕಣ್ಣಾಡಿಸಿದಾಗ ಲಿಪಿಕಾರನ ಭಾಷಾಜ್ಞಾನ, ಲಿಪಿ ಪರಿಣತಿ, ಓರಣದ ಒಲವು, ಸೌಂದರ್ಯಪ್ರಜ್ಞೆಗಳೂ ಇವುಗಳಿಗೆ ವ್ಯತಿರಿಕ್ತವಾಗಿ ಗುಣದೋಷಗಳೂ ಕಂಡುಬಂದು, ದೈಹಿಕವಾಗಿ ಗತಿಸಿಹೋದ ಲಿಪಿಕಾರನ ವ್ಯಕ್ತಿತ್ವ ಹಸ್ತಪ್ರತಿಯ ಮೂಲಕ ಅರಿತಕ್ಕೆ ಬರುತ್ತದೆ. ಅವನ ಬದುಕಿನ ಶಿಸ್ತು-ಅಶಿಸ್ತು, ಹೊಣೆಗಾರಿಕೆ-ಹೊಣೆಗೇಡಿತನ, ಗಂಭೀರ-ಲಘುಸ್ವಭಾವಗಳೆಲ್ಲ ವೇದ್ಯವಾಗುತ್ತವೆ. ಅದಕ್ಕಾಗಿ ಒಂದರ್ಥದಲ್ಲಿ ಹಸ್ತಪ್ರತಿಗಳ ಅಭ್ಯಾಸವೆಂದರೆ ಪ್ರಾಚೀನ ಲಿಪಿಕಾರರ ಮನೋಧರ್ಮದ ಅಭ್ಯಾಸವೆನಿಸುತ್ತದೆ"[೯೧] ಎಂಬ ಮಾತನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

## ಗ್ರಂಥವಿನ್ಯಾಸ-ಗ್ರಥನವಿನ್ಯಾಸ:

ಗ್ರಂಥವಿನ್ಯಾಸವನ್ನು ಕುರಿತು ಹೇಳುವುದಾದರೆ, ಹಸ್ತಪ್ರತಿಯ ಆದಿ-ಅಂತ್ಯದಲ್ಲಿಯ ಒಂದೆರಡು ಗರಿಗಳ ಮೇಲೆ ಬರೆಯುತ್ತಿರಲಿಲ್ಲ. ಪತ್ರಭಾಗದ ರಕ್ಷಣೆಗಾಗಿ ಈ ವ್ಯವಸ್ಥೆ ಮಾಡುತ್ತಿದ್ದುದರಿಂದ ಈ ಗರಿಗಳನ್ನು "ರಕ್ಷಾಪುಟ" ಎಂದು ಕರೆಯುತ್ತಿದ್ದರು. ಕೆಲವೊಮ್ಮೆ ಇವುಗಳ ಮೇಲೆ ತ್ರಿಜ್ಯವನ್ನು ಬಳಸಿ ಚಿತ್ರಗಳನ್ನು ಬಿಡಿಸುತ್ತಿದ್ದರು. ಒಂದು ಕಟ್ಟಿನಲ್ಲಿ ಒಂದಕ್ಕಿಂತ ಹೆಚ್ಚು ಕೃತಿಗಳಿದ್ದರೆ ಅವುಗಳ ಯಾದಿಯನ್ನು ಆ ಕಟ್ಟಿನ ಆದಿ ಇಲ್ಲವೆ ಅಂತ್ಯ ಪುಟದ ಮೇಲೆ ಬರೆಯುತ್ತಿದ್ದರು. ಇದರಿಂದ ವಾಚಕರಿಗೆ ತಮಗೆ ಬೇಕಾದ ಕೃತಿಯನ್ನು ಸುಲಭವಾಗಿ ಗುರುತಿಸಲು ಅನುಕೂಲವಾಗುತ್ತಿತ್ತು.

---

೯೧. ಕನ್ನಡ ಗ್ರಂಥ ಸಂಪಾದನಶಾಸ್ತ್ರ (ಎಂ.ಎಂ. ಕಲಬುರ್ಗಿ, ೧೯೮೬) ಪು ೬೧

ಬರೆವಣಿಗೆಯ ಪ್ರಾರಂಭದಲ್ಲಿ ಶ್ರೀಕಾರ ಇಲ್ಲವೆ ಪುಷ್ಪರೂಪದ ನಕ್ಷೆ ಬಿಡಿಸುತ್ತಿದ್ದರು, ಆಮೇಲೆ ಸಾಮಾನ್ಯವಾಗಿ ದೇವತಾಸ್ತುತಿ, ಗುರುಸ್ತುತಿ, ಮತ್ತು ಗ್ರಂಥದ ಹೆಸರುಗಳನ್ನು ಬರೆಯುತ್ತಿದ್ದರು. ಜೈನಕೃತಿಗಳು 'ಶ್ರೀವೀತರಾಗಾಯನಮಃ' ಸ್ತುತಿಯಿಂದ, ವೀರಶೈವ ಕೃತಿಗಳು 'ಶ್ರೀಗುರು ಬಸವಲಿಂಗಾಯ ನಮಃ' ಸ್ತುತಿಯಿಂದ ಪ್ರಾರಂಭವಾಗುವುದೇ ಹೆಚ್ಚು, ವೈಷ್ಣವಕೃತಿಗಳು ವೈದಿಕ ದೇವತೆಗಳ ಸ್ತುತಿಯಿಂದ ಪ್ರಾರಂಭವಾಗುತ್ತವೆ. ಪ್ರತಿಯೊಂದು ಸಂಧಿಯ ಅಂತ್ಯಕ್ಕೆ ಸಂಧಿಯ ಹೆಸರು-ಸಂಖ್ಯೆ-ಅದರಲ್ಲಿಯ ಪದ್ಯಸಂಖ್ಯೆ ಹೇಳಿ, ಶ್ರೀಕಾರವನ್ನೋ ಗುರು-ದೇವತಾ ಸ್ತುತಿಯನ್ನೋ ಬರೆಯುತ್ತಿದ್ದರು. ಕೆಲವೊಮ್ಮೆ ಸುಳುಹು, ರೇಖಾಚಿತ್ರ ಬಿಡಿಸುತ್ತಿದ್ದರು, ಮುಂದಿನ ಸಂಧಿಯನ್ನು ಅಲ್ಲಿಯೇ ಪ್ರಾರಂಭಿಸಿದ ಇಲ್ಲವೆ ಹೊಸ ಪುಟದಿಂದ ಪ್ರಾರಂಭಿಸಿದ ಉದಾಹರಣೆಗಳು ಸಿಗುತ್ತವೆ. ಗ್ರಂಥದ ಕೊನೆಗೆ ಪ್ರತಿಯೊಂದು ಸಂಧಿಯಲ್ಲಿಯ ಪದ್ಯಸಂಖ್ಯೆ, ಒಟ್ಟುಪದ್ಯಸಂಖ್ಯೆ, ಲಿಪಿಕಾರನ-ಪ್ರತಿ ಬರೆಯಿಸಿದವನ ಹೆಸರು, ಲೇಖನಮಿತಿ ಇವುಗಳನ್ನು ಕೆಲವೊಮ್ಮೆ ಕಾಣಿಸುತ್ತಾರೆ. ತೀರ ಕೊನೆಯಲ್ಲಿ ಸುಳುಹು, ರೇಖಾಚಿತ್ರ ಬಿಡಿಸಿದ ಉದಾಹರಣೆಗಳಿವೆ. ಕಟ್ಟಿನಲ್ಲಿ ಒಂದಕ್ಕಿಂತ ಹೆಚ್ಚು ಕೃತಿಗಳಿದ್ದರೆ ಆಯಾ ಕೃತಿ ಪ್ರಾರಂಭವಾಗುವ ಪುಟದ ಮಾರ್ಜಿನ್ನಿನಲ್ಲಿ ಅವುಗಳ ಹೆಸರು ಬರೆದಿರುತ್ತಾರೆ. ಗ್ರಂಥಪ್ರಮಾಣ ದೊಡ್ಡದಿದ್ದರೆ ಮಾರ್ಜಿನ್ನಿನಲ್ಲಿ ಪ್ರಕರಣಗಳ ಹೆಸರನ್ನು ಬರೆದ ನಿದರ್ಶನಗಳಿವೆ. ಕೆಲವೊಮ್ಮೆ ತಾಳೆಪ್ರತಿ, ಕಾಗದ ಪ್ರತಿಗಳಲ್ಲಿ ಕೃತಿಯ ಸಂದರ್ಭಗಳನ್ನು ರೇಖಾಚಿತ್ರ, ವರ್ಣಚಿತ್ರಗಳಿಂದ ಚಾಕ್ಷುಷಗೊಳಿಸಿರುತ್ತಾರೆ. ಇಂಥ ಹಸ್ತಪ್ರತಿಗಳು ಹಲವು ಸಿಗುತ್ತವೆ.

ಗ್ರಂಥವಿನ್ಯಾಸ ಹಂತದ ಬಳಿಕ ನಡೆಯುವುದು ಗ್ರಥನವಿನ್ಯಾಸ ಹಂತದ ಕೆಲಸ. ಈ ಸಂದರ್ಭದಲ್ಲಿ ಪತ್ರಗಳ ಜೋಡಣೆ, ಕಂಬಿ ಅಳವಡಿಸುವಿಕೆ, ದಾರ ಪವಣಿಸುವಿಕೆ, ಫಲಕಗಳ ಸಿದ್ಧತೆ, ಫಲಕದ ಮೇಲೆ ಚಿತ್ರ ಬಿಡಿಸುವಿಕೆ, ಬಣ್ಣ ಲೇಪಿಸುವಿಕೆ, ಗರಿ-ಕಾಗದ ಪುಟಗಳ ಮೇಲೆ ಚಿತ್ರ ಬಿಡಿಸುವಿಕೆ, ವಸ್ತ್ರ ಹೊದಿಸುವಿಕೆ ಇತ್ಯಾದಿ ಚಟುವಟಿಕೆಗಳು ಜರುಗುತ್ತವೆ. ಇದು ಒಂದು ರೀತಿ, ಇಂದಿನ ಮುದ್ರಿತ ಪುಸ್ತಕಗಳಿಗೆ ಬೈಂಡ್ ಮಾಡುವುದಕ್ಕೆ ಸಮಾನವಾದುದು, ಈಗ ನೇಕಾರ, ಬಡಿಗ, ಚಿತ್ರಕಲಾವಿದರ ನೆರವು ಕವಿಗೆ-ಲಿಪಿಕಾರನಿಗೆ ಅಗತ್ಯವಾಗುತ್ತಿದ್ದಿತು. ಪತ್ರಗಳ ಜೋಡಣೆಯಿಂದ ತಮ್ಮ ಹಸ್ತಪ್ರತಿಯು "ದಿವ್ಯ ತಾಳಪತ್ರಮಂ ತಂದು, ದ್ವಿತೀಯ ರಂಧ್ರಮಂ ಮಾಡಿ, ಬಿಂಗದ ಹೊರೆಯಂತೊಂದೊಂದಂ ಪೊದಿಸಿಕ್ಕಿಲದಲುಘಯುಂ ಪಲಗೆಯುಷ್ಟ ಲೋಪೆಯುಷ್ಟ ಮೂಲೆಗಳಿಂದತ್ಯಂತಲಂಕಾರವಾಗಿ, ಕಣ್ಣಿಗೆ ಚೆಲ್ವಾಗೊಪ್ಪಲ್ಪಟ್ಟ ದಿವ್ಯಶಿವಾಲಯ"[೯೨] ದಂತೆ ಕಾಣಬೇಕೆಂಬ ಆದರ್ಶ ಅವರದಾಗಿದ್ದಿತು. ಈ ಆದರ್ಶಕ್ಕೆ ಅರ್ಥ ತುಂಬುವಂತೆ ಕುಮಾರವ್ಯಾಸಭಾರತದ ಒಂದು ಪ್ರತಿಯಲ್ಲಿ ಪ್ರತಿಯೊಂದು

೯೨. ಮೈಹಸೂ I ಪ್ರಸ್ತಾವನೆ.

ಗರಿಯ ರಂಧ್ರಗಳಿಗೂ ಬೆಳ್ಳಿಯ ಕಟ್ಟು ಜೋಡಿಸಲಾಗಿದೆ. ದಾರ ಜಗ್ಗುವಿಕೆಯಿಂದ ಗರಿಗೆ ಪೆಟ್ಟು ತಾಗಬಾರದೆಂದು ಹೀಗೆ ಮಾಡಿದುದು ಅಪರೂಪದ ಉದಾಹರಣೆಯಾಗಿದೆ.[೯೩] ಕೆಲವೊಮ್ಮೆ ಗರಿಸಂಖ್ಯೆ ಬಹಳವಿದ್ದರೆ ಕೈಯಲ್ಲಿ ಎತ್ತಿ ಹಿಡಿದು ಓದುವಾಗ ಗರಿ ಜಾರಬಾರದೆಂದು ರಂಧ್ರದಲ್ಲಿ ದಾರಕ್ಕೆ ಬದಲು ಕಬ್ಬಿಣದ ಅಥವಾ ಮರದ ಕಡ್ಡಿ ಬಳಸುತ್ತಿದ್ದರು, ಇದಕ್ಕೆ ಕಂಬಿಯೆಂದು ಕರೆಯುತ್ತಿದ್ದು, "ಕಾಮನ ಕಾರ್ಮುಕವ ಕತ್ತರಿಸಿ ಪುಸ್ತಕಕೆಸೆವ ಕಂಬಿಯ ಮಾಡಿ"[೯೪] ಎಂಬ ಭಾಸ್ಕರಕವಿಯ ಹೇಳಿಕೆಯನ್ನು ಇಲ್ಲಿ ಸ್ಮರಿಸಬಹುದು.

ಗ್ರಥನ ಸಂದರ್ಭದಲ್ಲಿ ಚಿತ್ರಕಲಾವಿದನ ಪಾತ್ರ ಮಿಗಿಲಾದುದು. ತಾಳೆಪ್ರತಿಗೆ ಸಂಬಂಧಪಟ್ಟಂತೆ ಹೇಳುವುದಾದರೆ, ಅವುಗಳ ಗರಿಗಳ ಮೇಲೆ ಈ ಹಿಂದೆ ಹೇಳಿದಂತೆ ಸುಳುಹು, ರೇಖಾಚಿತ್ರ, ತ್ರಿಜ್ಯಚಿತ್ರ ಬಿಡಿಸುತ್ತಿದ್ದರೇ ಹೊರತು ಬಣ್ಣದ ಚಿತ್ರಗಳನ್ನು ಸಾಮಾನ್ಯವಾಗಿ ಬಿಡಿಸುತ್ತಿರಲಿಲ್ಲ. ಇದಕ್ಕೆ ಅಪವಾದವೆಂಬಂತೆ ತಾಳೆಪ್ರತಿಗಳಾದ ಧವಲಾ, ಜಯಧವಲಾ ಮಹಾಧವಲಾದಂಥ ಕೆಲವೇ ಪ್ರತಿಗಳಲ್ಲಿ ಬಣ್ಣದ ಚಿತ್ರಗಳನ್ನು ಬಿಡಿಸಿದ್ದಾರೆ. ಕಾಗದಪ್ರತಿಯ ಪುಟಗಳ ಮೇಲೆ ಮತ್ತು ತಾಳೆ-ಕಾಗದ ಪ್ರತಿಗಳ ಫಲಕಗಳ ಮೇಲೆ ಬಣ್ಣದ ಚಿತ್ರ ಬಿಡಿಸುವುದು ಸಾಮಾನ್ಯವಾಗಿದ್ದಿತು. ಒಟ್ಟಿನಲ್ಲಿ ಹಸ್ತಪ್ರತಿ ಜಗತ್ತಿನ ಈ ಚಿತ್ರಗಳನ್ನು ೧. ತ್ರಿಜ್ಯ ಚಿತ್ರ (Geometrical designs) ೨. ಸುಳುಹು ಚಿತ್ರ ೩. ಸಾಮಾನ್ಯಚಿತ್ರ, ೪. ಸಾಂದರ್ಭಿಕ ಚಿತ್ರಗಳೆಂದು ವರ್ಗೀಕರಿಸಬಹುದು.

ತ್ರಿಜ್ಯವನ್ನು ಬಳಸಿ ಅನೇಕ ತಾಳೆಪ್ರತಿಗಳ ಆದ್ಯಂತ್ಯ ಗರಿಗಳ ಮೇಲೆ ಬಗೆ-ಬಗೆಯ ವರ್ತುಲಾಂತರ್ಗತವರ್ತುಲ ಚಿತ್ರಗಳನ್ನು ಬಿಡಿಸುತ್ತಿದ್ದರು. ಧಾರವಾಡದ ಕನ್ನಡ ಸಂಶೋಧನಸಂಸ್ಥೆಯ ಶಬ್ದಮಣಿದರ್ಪಣದಲ್ಲಿ (ಹಸ್ತಪ್ರತಿ ಸಂ. ೪೪)ಇಂಥ ಸುಂದರ ಚಿತ್ರಗಳನ್ನು ಕಾಣಬಹುದು.[೯೫] ತಾಳೆ ಪ್ರತಿಗಳ ಮೇಲೆ ಈ ಬಗೆಯ ಚಿತ್ರಗಳು ಸರ್ವೇಸಾಮಾನ್ಯವೆನಿಸಿವೆ.

'ಸುಳುಹ'ನ್ನು ಕೆಲವೊಮ್ಮೆ ಕಾಗದಪ್ರತಿಯ ಪ್ರತಿಯೊಂದು ಪುಟದ ಸುತ್ತಲೂ ಫಲಕದ ಹೊರಬದಿಯ ಮೇಲೂ ಬಿಡಿಸುತ್ತಿದ್ದರು. ರೇಖೆ-ಪುಷ್ಪಾಕೃತಿಗಳಿಂದ ಕಂಗೊಳಿಸುವ ಇವುಗಳನ್ನು ಬಣ್ಣದಿಂದಲೂ ತುಂಬುತ್ತಿದ್ದರು. ಬಸವಪುರಾಣದ (ಮೈ.ಹ. ಸೂ III—೧೦೨೬) ಒಂದು ಕಾಗದ ಪ್ರತಿಯಲ್ಲಿ ಪ್ರತಿಯೊಂದು ಪುಟದ ಮೇಲೆ ಎಲೆ, ಹೂವು, ಬಳ್ಳಿಗಳ ವರ್ಣರಂಜಿತ ಚೌಕಟ್ಟನ್ನು ಚಿತ್ರಿಸಲಾಗಿದೆ. ಒಂದು

---

೯೩. ಮೈಹಸೂ III-೧೧೬೨.

೯೪. ಜೀವಂಧರ ಚರಿತೆ I-೧೩

೯೫. ಈ ಚಿತ್ರಗಳು "ಮುಂಬಯಿ ರಾಜ್ಯದಲ್ಲಿ ಕನ್ನಡ ಸಂಶೋಧನೆ (೧೯೪೬-೧೯೫೧) ಈ ಪುಸ್ತಕದಲ್ಲಿ ಅಚ್ಚಾಗಿವೆ. ಸಧ್ಯಹಸ್ತಪ್ರತಿಯಲ್ಲಿ ಇಲ್ಲ. ಬಹುಶಃ ಬ್ಲಾಕ್ ಮಾಡಲು ಹೊರತೆಗೆದ ಆ ಗರಿಗಳನ್ನು ಮತ್ತೆ ಹಸ್ತಪ್ರತಿಗೆ ಸೇರಿಸಲಿಲ್ಲವೆಂದು ತೋರುತ್ತದೆ.

ವರ್ಣರಂಜಿತ ಚೌಕಟ್ಟಿನಿಂದ ಇನ್ನೊಂದು ವರ್ಣರಂಜಿತ ಚೌಕಟ್ಟು ಭಿನ್ನವಾಗಿರುವುದು ಇಲ್ಲಿಯ ವೈಶಿಷ್ಟ್ಯ. ಇಂಥ ಅನೇಕ ಕಾಗದ ಪ್ರತಿಗಳು ಅಲ್ಲಲ್ಲಿ ಸಿಗುತ್ತವೆ. ಕೆಲವೊಮ್ಮೆ ಬಣ್ಣರಹಿತ ಸುಳುಹುಗಳನ್ನು ತಾಳೆಪ್ರತಿಯ ಪ್ರತಿಯೊಂದು ಗರಿಯ ಮೇಲೆಯೂ ಬರೆದಿರುವುದು ಕಂಡು ಬರುತ್ತದೆ.

'ಸಾಮಾನ್ಯಚಿತ್ರ'ಗಳು ಆಯಾ ಧರ್ಮಗಳಿಗೆ ತಕ್ಕವುಗಳಾಗಿರುತ್ತಿದ್ದವು. ಶೈವ ಹಸ್ತಪ್ರತಿಗಳಲ್ಲಿ ನಂದಿ, ಶಿವಲಿಂಗ, ಶಿವ-ಪಾರ್ವತಿ ಇತ್ಯಾದಿ; ಜೈನಹಸ್ತಪ್ರತಿಗಳಲ್ಲಿ ಜಿನ, ಮಾನಸ್ತಂಭ ಇತ್ಯಾದಿ; ವೈಷ್ಣವ ಹಸ್ತಪ್ರತಿಗಳಲ್ಲಿ ವಿಷ್ಣು ಮತ್ತು ಅವನ ದಶಾವತಾರ ಇತ್ಯಾದಿ ಚಿತ್ರಗಳನ್ನು ಬಿಡಿಸುತ್ತಿದ್ದರು. ಕೆಲವೊಮ್ಮೆ ಇವುಗಳನ್ನು ಬಣ್ಣಗಳಿಂದ ತುಂಬುತ್ತಿದ್ದರು.

ಬೆಲೆಯುಳ್ಳ ಚಿತ್ರಕಲಾ ಕಾಣಿಕೆಯೆಂದರೆ 'ಸಾಂದರ್ಭಿಕ ಚಿತ್ರ'ಗಳೇ. ರಾಮಾಯಣ ಮಹಾಭಾರತ ಕೃತಿಗಳಲ್ಲಿ ಸನ್ನಿವೇಶಕ್ಕೆ ತಕ್ಕ ಚಿತ್ರ ಬಿಡಿಸಿದುದನ್ನು ಕೆಲವೆಡೆ ನೋಡುತ್ತೇವೆ. ಜೈನಪುರಾಣಗಳಲ್ಲಿ ತೀರ್ಥಂಕರನ ಪಂಚಕಲ್ಯಾಣಗಳನ್ನು ಅಂದವಾಗಿ ಬಿಡಿಸಿದ ಅನೇಕ ಉದಾಹರಣೆಗಳಿವೆ. ರಾಘವಾಂಕಚರಿತೆಯ ಒಂದು ಕಾಗದ ಪ್ರತಿಯಲ್ಲಿ ಪ್ರಭುದೇವ-ಸಿದ್ಧರಾಮ, ರಾಘವಾಂಕ-ಹರಿಹರ, ಚಿಕ್ಕನಂಜಾರ್ಯ-ಚೆನ್ನವೀರಾಂಬಿಕೆ, ಮಹಾದೇವ-ರುದ್ರಾಣಿ, ಮೂರುಮಂದಿ(ಏಕ, ದ್ವಿ ಮತ್ತು ತ್ರಿದಂಡಿ) ಕವಿಗಳು-ಪ್ರತಾಪರುದ್ರ, ವಿರೂಪಾಕ್ಷಪಂಡಿತ, ಕೆರೆಯ ಪದ್ಮರಸರ ಚಿತ್ರಗಳಿವೆ.[೯೬]

ಅಳಿಯ ಲಿಂಗರಾಜನ 'ಚಂದ್ರಾವಳಿ ಕಥೆ' ಹೆಸರಿನ ಯಕ್ಷಗಾನ ಸಚಿತ್ರಹಸ್ತಪ್ರತಿಯಾಗಿದೆ. ಇಲ್ಲಿಯ ಒಂದು ಪುಟದಲ್ಲಿ ರಾಜಲೀವಿಯ ವ್ಯಕ್ತಿ ಕುಳಿತಿದ್ದು, ಎದುರಿನಲ್ಲಿ ಕಲಾವಿದನೊಬ್ಬ ಮೊಳಕಾಲ ಮೇಲೆ ಚಿತ್ರ ಹಲಗೆ ಇಟ್ಟುಕೊಂಡು, ಅವನ ಚಿತ್ರ ಬಿಡಿಸುವ ದೃಶ್ಯವಿದೆ. ಇದು ಚಿತ್ರಕ್ಕೆವಸ್ತುವಾದ ವ್ಯಕ್ತಿ ಮತ್ತು ಅವನ ಚಿತ್ರ ಬಿಡಿಸುವ ಕ್ರಿಯೆಗಳನ್ನು ಸೂಚಿಸುವ ಅಪೂರ್ವ ಉದಾಹರಣೆಯಾಗಿದೆ.[೯೭] ವೃಷಭೇಂದ್ರವಿಲಾಸ ಹೆಸರಿನ ಯಕ್ಷಗಾನದ ಪುಟಪುಟಗಳಲ್ಲಿ ಬಸವಣ್ಣನವರ ಜೀವನಕ್ಕೆ ಸಂಬಂಧಪಟ್ಟ ಅನೇಕಾನೇಕ ವರ್ಣಚಿತ್ರಗಳಿವೆ.[೯೮] ಇವಲ್ಲದೆ ಅಲ್ಲಮಪ್ರಭು, ತೋಂಟದ ಸಿದ್ಧಲಿಂಗ, ಮಾಚಿದೇವ ಮೊದಲಾದವರ ಚಿತ್ರಗಳು ಅಲ್ಲಲ್ಲಿ ಸಿಗುತ್ತವೆ. ಇವುಗಳಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಹಸ್ತಪ್ರತಿಯಲ್ಲಿರುವ ತೋಂಟದಸಿದ್ಧಲಿಂಗಯತಿಯ ವರ್ಣಚಿತ್ರ ಅಪೂರ್ವವೂ ಅರ್ಥಪೂರ್ಣವೂ ಆಗಿದೆ.[೯೯] ಈ ದೃಷ್ಟಿಯಿಂದ ಎತ್ತಿಹೇಳಬೇಕಾದುವು ಧವಲಾ, ಜಯಧವಲಾ, ಮಹಾಧವಲಾ

---

೯೬. ಧಾವಭಾಂ ೧೧೭೪.

೯೭. ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ (ಡಾ. ಬಿ. ಕೆ. ಹಿರೇಮಠ) ೨೦೬.

೯೮. ಕರ್ನಾಟಕ ಸಂಸ್ಕೃತಿ ಸಮೀಕ್ಷೆ. ಪು ೭೬೬-೮೬.

೯೯. ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ (ಡಾ. ಬಿ. ಕೆ. ಹಿರೇಮಠ ೧೭೮)

ತಾಳೆಪ್ರತಿಗಳು.೧೦೦ ಇಲ್ಲಿ ಬಿಡಿಸಲಾದ ಪಶ್ರ್ವನಾಥ, ಬಾಹುಬಲಿ ಮೊದಲಾದವರ ವರ್ಣಚಿತ್ರಗಳು ಅಭ್ಯಾಸಯೋಗ್ಯವಾಗಿವೆ. ವರ್ಣಸಂಯೋಜನೆಯೂ ಆಕರ್ಷಕ ವಾಗಿದೆ.

ಈ ನಾಲ್ಕು ಬಗೆಯ ಚಿತ್ರಗಳಲ್ಲದೆ, 'ಚಿತ್ರಪ್ರಧಾನಹಸ್ತಪ್ರತಿ'ಯೆಂಬ ಬೇರೊಂದು ವರ್ಗವನ್ನು ಕಲ್ಪಿಸಬಹುದಾಗಿದೆ. ಈ ವರ್ಗದಲ್ಲಿ ವೀರಶೈವ ಉದ್ಧರಣೆ ಗ್ರಂಥಗಳು, ಜೈನ ಪ್ರತಿಷ್ಠಾ ತಿಲಕಗಳು, ವೈಷ್ಣವ ಶ್ರೀತತ್ವನಿಧಿ ಪರಿಗಣಿತವಾಗು ತ್ತವೆ. ಉದ್ಧರಣೆಗಳು ಯೋಗಕ್ಕೆ ಸಂಬಂಧಪಟ್ಟ ಚಿತ್ರಪಟಗಳಾಗಿದ್ದು. ಇವುಗಳದೇ ಒಂದು ಸ್ವತಂತ್ರ ಅಭ್ಯಾಸವಾಗಿದೆ. ಕನ್ನಡ ಅಧ್ಯಯನಪೀಠ, ಕನ್ನಡ ಅಧ್ಯಯನ ಸಂಸ್ಥೆ ಮತ್ತು ಅನೇಕ ವೈಯಕ್ತಿಕ ಭಂಡಾರಗಳಲ್ಲಿ ವೃಷಭೋದ್ಧರಣೆ ಮೊದಲಾದ ಚಿತ್ರಗಳಿವೆ. ಇಲ್ಲಿ ಬಿಡಿಸಿದ ಚಿತ್ರಗಳ ಕಲಾವಂತಿಕೆ, ವೈಜ್ಞಾನಿಕತೆ, ಬಣ್ಣಗಾರಿಕೆಗಳು ಬೆರಗುಗೊಳಿಸುತ್ತವೆ.ಜೈನ 'ಪ್ರತಿಷ್ಠಾ' ಗ್ರಂಥಗಳು ಬಸದಿ, ಪೂಜಾ ವಿಧಿ-ವಿಧಾನಗಳ ಬಣ್ಣಬಣ್ಣದ ಚಿತ್ರಗಳಿಂದ ಗಮನಸೆಳೆಯುತ್ತವೆ. ಇಂಥ ಅನೇಕ ಪ್ರತಿಗಳು ಕೊಲ್ಲಾಪುರ ಮೊದಲಾದ ಜೈನಮಠಗಳಲ್ಲಿ ಸಿಗುತ್ತವೆ. ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿರುವ ವೈಷ್ಣವ ಪರಂಪರೆಗೆ ಸೇರಿದ, ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ ರಚಿತವಾದ ಶ್ರೀತತ್ವನಿಧಿ ಹೆಸರಿನ ೧೧೪೬ ಪುಟಗಳ ಗ್ರಂಥದಲ್ಲಿ ೨೦೦೦ಕ್ಕೂ ಮೇಲ್ಪಟ್ಟು ಸುಂದರ ವರ್ಣಚಿತ್ರಗಳಿವೆ. ಇವುಗಳನ್ನು ಬಿಡಿಸಿದವನು ತಿಪ್ಪಯ್ಯ ನೆಂಬ ಕಲಾವಿದನೆಂದು ತಿಳಿದುಬರುತ್ತದೆ.೧೦೧ ಇದಲ್ಲದೆ ಕನ್ನಡ ಅಧ್ಯಯನ ಸಂಸ್ಥೆಯ, ಚದುರಂಗಚಕ್ರ ಗಂಜೀಪು ಆಟಗಳು ಇತ್ಯಾದಿ, ಹೆಸರಿನ ಹಸ್ತಪ್ರತಿಯಲ್ಲಿ ನಂದಿ, ಬಾಲಗೋಪಾಲ, ಬ್ರಹ್ಮ, ಲಕ್ಷ್ಮಿ, ಗಿರಿಜೆ, ಗಣಪತಿ, ಸರಸ್ವತಿ, ಕಾಮಧೇನು ಮೊದಲಾದ ಅಪೂರ್ವ ವರ್ಣಚಿತ್ರಗಳು ಕಂಡುಬರುತ್ತವೆ.

ಇನ್ನೂ ಒಂದು ವರ್ಗವೆಂದರೆ 'ಶಾಸ್ತ್ರಸಂಬಂಧಿ ಹಸ್ತಪ್ರತಿ'ಗಳು. ಇಲ್ಲಿ ಗೆರೆಮನೆ, ವೈವಿಧ್ಯಪೂರ್ಣ ಚಿತ್ರಗಳಿದ್ದು, ಅವುಗಳದೇ ಒಂದು ಪ್ರತ್ಯೇಕ ಅಭ್ಯಾಸವಾಗಿದೆ. ಜ್ಯೋತಿಷ, ಶಿಲ್ಪ, ಯಂತ್ರ-ಮಂತ್ರ ಮೊದಲಾದ ಶಾಸ್ತ್ರಗ್ರಂಥಗಳಲ್ಲಿ ಇಂಥ ಚಿತ್ರ ಗಳನ್ನು ಕಾಣಬಹುದಾಗಿದೆ.

* * * * *

ಹಸ್ತಪ್ರತಿಗಳ ಪ್ರಾಚೀನತೆಯನ್ನು ಕುರಿತು ಹೇಳುವುದಾದರೆ, ಕವಿರಾಜ ಮಾರ್ಗಪೂರ್ವದ ಪ್ರತಿಗಳು ಸಿಕ್ಕಿಲ್ಲ. ಈ ತರುವಾಯದ ಗುಣವರ್ಮ, ಅಸಗ ಮೊದಲಾದ ಕವಿಗಳ ಕೃತಿಗಳ ಆಸೆ ಬಿಟ್ಟಂತೆಯೇ. ೧೧ನೆಯ ಶತಮಾನದ ಕೃತಿಗಳಲ್ಲಿ ಪೊನ್ನನ ಭುವನೈಕರಾಮಾಭ್ಯುದಯ, ರನ್ನನ ಪರುಶರಾಮಚರಿತೆ, ಚಕ್ರೇಶ್ವರ

೧೦೦. ಮಣಿಹ-೪೧೩.

೧೦೧. ಕನ್ನಡ ಹಸ್ತಪ್ರತಿಗಳ ಇತಿಹಾಸ (ಎಚ್. ದೇವೀರಪ್ಪ)-೬೪.

ಚರಿತೆಗಳು ಸಿಕ್ಕಿಲ್ಲ. ಕರ್ಣಾಟ ಕಾದಂಬರಿಯ ಒಂದು ಪ್ರತಿ, ಗದಾಯುದ್ಧದ ಒಂದೂವರೆಪ್ರತಿ, ವಿಕ್ರಮಾರ್ಜುನವಿಜಯದ ಎರಡೂವರೆ ಪ್ರತಿ ಸಿಕ್ಕಿವೆ. ಈ ದೃಷ್ಟಿಯಿಂದ ಈ ಶತಮಾನದ ಪೊನ್ನನ ಶಾಂತಿಪುರಾಣ, ಪಂಪನ ಆದಿಪುರಾಣ, ಚಾವುಂಡರಾಯನ ಚಾವುಂಡರಾಯ ಪುರಾಣ, ರನ್ನನ ಅಜಿತ ಪುರಾಣ, ನಾಗವರ್ಮ ಛಂದೋಂಬುಧಿಗಳ ಲಭ್ಯ ಪ್ರತಿಸಂಖ್ಯೆ ವಾಸಿ.

೧೧ನೆಯ ಶತಮಾನದಿಂದ ಮುಂದೆ ಹುಟ್ಟಿದ ಕೃತಿಗಳ ಹಸ್ತಪ್ರತಿಗಳು ಸೂಕ್ತ ಸಂಖ್ಯೆಯಲ್ಲಿ ಸಿಗುತ್ತವೆ. ಹೀಗಿದ್ದೂ, ರಾಘವಾಂಕನ ಹರಿಹರಮಹತ್ವ, ಶರಭಚಾರಿತ್ರ, ಕೇಶಿರಾಜನ ಶ್ರೀಚಿತ್ರಮಾಲೆ, ಸುಭದ್ರಾಹರಣ, ಪ್ರಬೋಧಚಂದ್ರೋದಯ ಕೃತಿಗಳಂಥವು ಸಿಗಬೇಕಾಗಿದೆ.

ಕವಿಗಳೇ ಕೈಮುಟ್ಟಿ ಬರೆದ ತಾಳೆಪ್ರತಿ, ಕಾಗದಪ್ರತಿಗಳು ಸಿಗುವುದು ಕಡಿಮೆ. ಈಗ ತಿಳಿದ ಮಟ್ಟಿಗೆ ಮುದ್ದಣ, ಬಸವಪ್ಪಶಾಸ್ತ್ರಿ ಇಂಥ ಕೆಲವರನ್ನು ಬಿಟ್ಟರೆ, ೧೯ನೆಯ ಶತಮಾನದ ಕವಿಗಳ ಸ್ವಹಸ್ತಾಕ್ಷರ ಪ್ರತಿಗಳೂ ಸಿಗುವುದಿಲ್ಲವೆಂದ ಮೇಲೆ, ಈ ಹಿಂದಣ ಕವಿಗಳ ಸ್ವಹಸ್ತಾಕ್ಷರ ಪ್ರತಿಗಳನ್ನು ಬಯಸುವುದು ವ್ಯರ್ಥ ಆಸೆಯೇ ಸರಿ. ಹೀಗಿದ್ದೂ "ಆನಂದ ಸಂವತ್ಸರದ ಮಾರ್ಗಶಿರ ಸು. ೫ ಬುಧವಾರ ಬೆಳಗುಳದ ಸ್ಥಾನಿಕ ಚಿನ್ನಪ್ಪಯ್ಯನ ಮಗ ಕವಿ ಪಂಚಬಾಣನು ಕವಿತ್ವವ ಹೇಳಿ ತನ್ನ ಸ್ವಹಸ್ತದಲ್ಲಿ ಬರೆದ ಪುಸ್ತಕಕ್ಕೆ ಮಂಗಳಮಹಾಶ್ರೀ"[೧೦೨] ಎಂಬ ಮಾತಿನಿಂದ ೧೬೧೪ರಲ್ಲಿ ಲಿಪಿಸಲ್ಪಟ್ಟ ಭುಜಬಲಚರಿತ ಈಗಿನ ಮಟ್ಟಿಗೆ ಕನ್ನಡದ ಪ್ರಾಚೀನತಮ ಕವಿಹಸ್ತಾಕ್ಷರ ಪ್ರತಿಯೆಂದು ತಿಳಿದುಬರುತ್ತದೆ.

ಈಗ ಲಭ್ಯವಿರುವ ಹಸ್ತಪ್ರತಿಗಳಲ್ಲಿ ಯಾವುದು ತೀರ ಪ್ರಾಚೀನ? ಎಂಬುದೂ ಚರ್ಚಾಸ್ಪದವಾಗಿದೆ. ಸಂಸ್ಕೃತಪಾಠ ಕನ್ನಡಟೀಕೆಯುಳ್ಳ ನಾಮಲಿಂಗಾನುಶಾಸನ ಕೃತಿಯನ್ನು ತಾಳೆಗರಿಯಲ್ಲಿ ನಕಲು ಮಾಡಲಾದ ಕಾಲ ೧೧೩೦. ಬಹುಶಃ ಇದೇ ಪ್ರಾಚೀನತಮ ತಾಳೆಪ್ರತಿಯಾಗಿದೆ.[೧೦೩]

ಇದನ್ನು ಬಿಟ್ಟರೆ ಇಡಿಯಾಗಿ ಕನ್ನಡ ಭಾಷೆಯಲ್ಲಿಯೇ ಬರೆಯಲ್ಪಟ್ಟ ಪ್ರಾಚೀನತಮ ತಾಳೆಪ್ರತಿಯೆಂದರೆ ೧೩೭೯ರಲ್ಲಿ ಪ್ರತಿಮಾಡಲ್ಪಟ್ಟ ಪಂಪನ ಆದಿಪುರಾಣವೆಂದು ಡಿ. ಎಲ್. ಎನ್. ಹೇಳುತ್ತಾರೆ.[೧೦೪] ಆದರೆ ರನ್ನನ ಗದಾಯುದ್ಧವನ್ನು ೧೩೪೨ರಲ್ಲಿ ಪ್ರತಿಮಾಡಲಾದ ಸೂಚನೆಯೊಂದು ಸಿಗುತ್ತದೆ ಎಂಬುವರ ಕಡೆಗೆ ನಾನು ವಿದ್ವಾಂಸರ ಗಮನ ಸೆಳೆದಿದ್ದೇನೆ. ಆದರೆ ಈ ಪ್ರತಿಯಲ್ಲಿಯ ಕಾವ್ಯಪಾಠದ ಬರವಣಿಗೆಗೂ, ಕಾಲ ನಮೂದಿತ ಪಾಠದ ಬರವಣಿಗೆಗೂ ಅಕ್ಷರ ವ್ಯತ್ಯಾಸ ಕಂಡು

---

೧೦೨. ಕಕಚ II–೩೧೧.

೧೦೩. ಮೈಹಸೂ II–೭೬೮.

೧೦೪. ಕನ್ನಡ ಗ್ರಂಥಸಂಪಾದನೆ (ಡಿ.ಎಲ್.ಎನ್.) ೩೮–೩೯

ಬರುವುದರಿಂದ, ಶ್ರೀ ಬಿ. ಎಸ್. ಸಣ್ಣಯ್ಯ ಅವರು ಈ ಹಸ್ತಪ್ರತಿಯ ಕಾಲದ ಬಗ್ಗೆ ಸಂದೇಹ ವ್ಯಕ್ತಪಡಿಸಿದ್ದಾರೆ.[೧೦೫] ಆದರೆ ಕಾಲ ನಮೂದಿತ ಪದ್ಯಕ್ಕೆ ಬಳಸಿದ ಅಕ್ಷರ ಮತ್ತು ಅದನ್ನು ಗದ್ಯದಲ್ಲಿ ವಿವರಿಸಿ ಬರೆದ ಪಾಠದ ಅಕ್ಷರಗಳಲ್ಲಿ ಭಿನ್ನತೆ ಇದೆಯೇ ಹೊರತು ಕಾಲ ನಮೂದಿತ ಪದ್ಯಕ್ಕೆ ಬಳಸಿದ ಅಕ್ಷರ ಮತ್ತು ಕಾವ್ಯ ಅಕ್ಷರಗಳಲ್ಲಿ ವ್ಯತ್ಯಾಸವಿಲ್ಲ. ಕಾರಣ ಇಲ್ಲಿಯ ಕಾಲವನ್ನು ಒಪ್ಪಿಕೊಳ್ಳಲು ಯಾವ ತೊಂದರೆಯೂ ಇಲ್ಲವೆನಿಸುತ್ತದೆ. ಹೀಗಾಗಿ ಗದಾಯುದ್ಧದ ತಾಳೆಪ್ರತಿಯೇ ಕನ್ನಡದಲ್ಲಿ ಲಭ್ಯವಾದ ಪ್ರಾಚೀನ ಉದಾಹರಣೆಯೆಂದು ಇಟ್ಟುಕೊಳ್ಳಬಹುದು.

ಕಾಗದ ಪ್ರತಿಯ ವಿಷಯಕ್ಕೆ ಬಂದರೆ ೧೫೫೭ರಲ್ಲಿ ಬರೆದ ನಾಗವರ್ಮನ ವರ್ಧಮಾನ ಪುರಾಣವೇ ತೀರ ಪ್ರಾಚೀನಪ್ರತಿಯೆಂದು ಶ್ರೀ ಬಿ. ಎಸ್. ಸಣ್ಣಯ್ಯ ಹೇಳಿದರೆ, ೧೫೦೦ ರಲ್ಲಿ ಹುಟ್ಟಿದ 'ಏಕೋತ್ತರ ಶತಸ್ಥಲಿ ಟೀಕು' ಪ್ರಾಚೀನ ಕಾಗದ ಪ್ರತಿಯೆಂದು ಶ್ರೀ ಎಚ್. ದೇವೀರಪ್ಪ ಹೇಳುತ್ತಾರೆ. ಆದರೆ ಏಕೋತ್ತರ ಶತಸ್ಥಲಿ ಟೀಕೆಗೆ ಬಳಸಿದ ಕಾಗದ ಆಧುನಿಕ ಕಾಲಕ್ಕೆ ಸೇರಿರುವುದರಿಂದ ಇಲ್ಲಿಯ ತೇದಿ ಈ ಪ್ರತಿಗೆ ಮೂಲವಾಗಿದ್ದ ಹಸ್ತಪ್ರತಿಯನ್ನು ನಕಲು ಮಾಡಿದುದಾಗಿರಬಹುದೆಂದು ಶ್ರೀ ಸಣ್ಣಯ್ಯ ಹೇಳುತ್ತಾರೆ.[೧೦೬] ಆದುದರಿಂದ ಸಧ್ಯದ ಮಟ್ಟಿಗೆ ೧೫೫೭ರಲ್ಲಿ ಲಿಪಿಸಲ್ಪಟ್ಟ ನಾಗವರ್ಮನ ವರ್ಧಮಾನಪುರಾಣವೇ ಲಭ್ಯ ಪ್ರಾಚೀನತಮ ಕಾಗದ ಪ್ರತಿಯೆಂದು ಇಟ್ಟುಕೊಳ್ಳಬಹುದಾಗಿದೆ.



---

೧೦೫. ಹಸ್ತಪ್ರತಿಶಾಸ್ತ್ರ-೯೦.
೧೦೬. ಹಸ್ತಪ್ರತಿಶಾಸ್ತ್ರ-೯೧.

೨

# ಪ್ರಸರಣ

ವೈದಿಕ–ಜೈನ–ವೀರಶೈವ/ಪ್ರಾಚೀನ ಕನ್ನಡ ಹಸ್ತಪ್ರತಿ ಭಾಂಡಾರಗಳು: ಜೈನಹಸ್ತಪ್ರತಿ ಭಾಂಡಾರಗಳು, ವೀರಶೈವ ಹಸ್ತಪ್ರತಿ ಭಾಂಡಾರಗಳು/ಕನ್ನಡ ಹಸ್ತಪ್ರತಿಗಳ ವಿಷಯ ಸಂಪತ್ತು.

ಕೃತಿಯ ಸೃಷ್ಟಿ ಮತ್ತು ಪ್ರತಿಯ ಉತ್ಪಾದನೆಗಳಷ್ಟೇ ಅವುಗಳ ಪ್ರಸರಣ ಮತ್ತು ಸಂರಕ್ಷಣಗಳು ಮುಖ್ಯವಾದುವು. 'ದೇವಾಲಯವನ್ನು ನಿರ್ಮಿಸಿದವನಿಗಿಂತ ಅದನ್ನು ರಕ್ಷಿಸಿದವನು ಪುಣ್ಯಶಾಲಿ' ಎಂಬಂತೆ, ಕೃತಿ ಬರೆದವನಿಗಿಂತ ಅದನ್ನು ಪ್ರಸಾರ ಮಾಡಿದವರು ಪುಣ್ಯಶಾಲಿಗಳೇ ಸರಿ. ಒಂದರ್ಥದಲ್ಲಿ ಗತಿಸಿಹೋದ ಕವಿಯನ್ನು ಇವರು ಕೃತಿರೂಪದಲ್ಲಿ ಬದುಕಿಸಿದ ಪುಣ್ಯಭಾಜನರೆನಿಸುತ್ತಾರೆ. ಹೀಗೆ ಕೃತಿ ಪ್ರಸರಣಕ್ಕೆ ಲಿಪಿಕಾರರು, ಅಭ್ಯಾಸಿಗಳು, ಮೋಕ್ಷಾಪೇಕ್ಷಿಗಳು, ಧರ್ಮಾಧಿಕಾರಿಗಳು, ಧರ್ಮಾಭಿಮಾನಿಗಳು, ರಾಜಕೀಯ ವ್ಯಕ್ತಿಗಳು, ಗಮಕಿಗಳು, ಪುರಾಣಕಾರರು, ಪ್ರವಚನಕಾರರು, ಉಪಾಧ್ಯಾಯರು, ವಿದ್ಯಾರ್ಥಿಗಳು ಕಾರಣರಾದರೂ ಈ ಪ್ರಸರಣದ ಮುಖ್ಯ ಮಾಧ್ಯಮ ನಿಯುಕ್ತ, ಹವ್ಯಾಸಿ, ವೃತ್ತಿ ಲಿಪಿಕಾರರಾಗಿದ್ದು, ಸ್ವಪ್ರಯೋಜನ–ಪರಪ್ರಯೋಜನಾರ್ಥ ಇವರು ಕೆಲಸ ಮಾಡಿದ್ದಾರೆ. ಇವುಗಳಲ್ಲಿ ಸ್ವಪ್ರಯೋಜನಾರ್ಥ ಬರೆದುಕೊಳ್ಳುವುದು, ಪರಪ್ರಯೋಜನಾರ್ಥ ಬರೆದುಕೊಡುವುದು ಮತ್ತು ಬರೆಯಿಸಿಕೊಡುವುದು ಎಂಬಿವು ಮೂರು ಮುಖ್ಯದಾರಿಗಳಾಗಿವೆ. ಈ ಮೂರೂ ದಾರಿಗಳ ಹಿಂದಿರುವ ಉದ್ದೇಶಗಳು ನೂರು ದಾರಿಗಳನ್ನು ತೆರೆಯುತ್ತವೆ. ಈ ನೂರಾರು ದಾರಿಗಳಲ್ಲಿ ಕರ್ನಾಟಕದ ಹಸ್ತಪ್ರತಿಗಳು ಹುಟ್ಟಿ ಬೆಳೆದುಬಂದಿವೆ.

ವ್ಯಕ್ತಿಯ ಬೌದ್ಧಿಕ ಹಸಿವುಗಳು ಹಲವು. ಈ ಹಸಿವನ್ನು ಹಿಂಗಿಸುವ ಸಾಮಗ್ರಿಗಳಲ್ಲಿ ಸಾಹಿತ್ಯ ಮುಖ್ಯವಾದುದು. ಈ ಕಾರಣಕ್ಕಾಗಿ ಕೆಲವು ಅಭ್ಯಾಸಿಗಳು ಕೃತಿಗಳನ್ನು ನಕಲು ಮಾಡಿಕೊಂಡಿದ್ದಾರೆ:

"ಪುರಾಣದ ವಿರೂಪಾಕ್ಷದೇವರ ಮಗ ವೀರಣ್ಣೊಡೆಯದೇವರು ತಮಗೆ ಬರೆದ ಸೋನೆಯ ಪುಸ್ತಕ"[೧]

"ಶ್ರೀ ಶಾಂತಿಮತಿ ಅವ್ವಗಳ ಜೀಯಸವರು ತಮಗೆ ಕೇವಲಜ್ಞಾನಪ್ರಾಪ್ತಿ ನಿಮಿತ್ತವಾಗಿ ಬರೆದಂಥಾ ಹಿರೇಪಂಚವರಮೇಷ್ಠಿಗಳ ವ್ಯಾಖ್ಯಾನ"[೨]

ಇಲ್ಲಿ ಸಾಹಿತ್ಯಕ ಆಸಕ್ತಿ ಮತ್ತು ಅಧ್ಯಾತ್ಮಿಕ ಹಸಿವು ಕಾರಣವಾಗಿ ಹಸ್ತಪ್ರತಿಗಳನ್ನು ಬರೆದುಕೊಂಡುದುದನ್ನು ಗಮನಿಸಬಹುದು. ಹೀಗೆ ಸ್ವಪ್ರಯೋಜನಾರ್ಥ ಬರೆದುಕೊಂಡ ಹಸ್ತಪ್ರತಿಗಳು ಸಹಜವಾಗಿಯೇ ಪ್ರಾಮಾಣಿಕವಾಗಿರುತ್ತವೆ. ಇವುಗಳ ಸಂಖ್ಯೆಯೂ ತಕ್ಕ ಪ್ರಮಾಣದಲ್ಲಿದೆ. ಇದಕ್ಕಿಂತ ಪರಪ್ರಯೋಜನಕ್ಕಾಗಿ ಬರೆದು ಕೊಟ್ಟ ಹಸ್ತಪ್ರತಿಗಳ ಸಂಖ್ಯೆ ತುಂಬ ದೊಡ್ಡದು. ಇವರು ನಿಯುಕ್ತ ಲಿಪಿಕಾರರಿರ ಬಹುದು, ಹವ್ಯಾಸಿ ಲಿಪಿಕಾರರಿರಬಹುದು, ವೃತ್ತಿಲಿಪಿಕಾರರಿರಬಹುದು, ವ್ಯಕ್ತಿಗಳ ಅಧ್ಯಯನಕ್ಕಾಗಿ,ಸಮುದಾಯದ ಪ್ರಯೋಜನಕ್ಕಾಗಿ ಇವರು ಬರೆದುಕೊಟ್ಟಿರುತ್ತಾರೆ:

"...............ಸಿದ್ಧಲಿಂಗದೇವರಿಗೆ.......... ಪರ್ವತದೇವರು ಕೃಪೆಯಿಂದ ಬರೆದ ಬಸವೇಶ್ವರದೇವರ ವಚನ"[೩]

"ಸ್ವಾಮಿಯವರ ಅಪ್ಪಣೆಯಿಂದ ಚಂದ್ರಸಾಗರವರ್ಣಿ ಬೆಳ್ಗೊಳ ಮಠಕ್ಕೆ ಬರೆದು ಒಪ್ಪಿಸಿದ ಚಂಪೂಭಾರತ ಸಂಪೂರ್ಣ..........."[೪]

ತಮಗೆ ಬರೆದುಕೊಡುವುದು ಸಾಧ್ಯವಾಗದ ಸಂದರ್ಭದಲ್ಲಿ ಕೆಲವರು ಇನ್ನೊಬ್ಬರಿಂದ ಬರೆಯಿಸಿ ಕೊಡುತ್ತಿದ್ದರು. ಸಾಮಾನ್ಯವಾಗಿ ಗುರುಗಳಿಗೆ, ಮಠಕ್ಕೆ ಅರ್ಪಿಸುವಾಗ ಈ ಕೆಲಸ ನಡೆಯುತ್ತಿದ್ದಿತು:

"ವಿಕಾರಿ ಸಂವತ್ಸರದ ಜೇಷ್ಠ ಬ ೭ ಯಲ್ಲು ಹಂಪಯ್ಯನ ಮಟದ ಕಾಶಿದೇವರು ಭೋಗದೇವರು ಮಟದ ಕಂಥೆ ಸಂಗೈಯ್ಯನವರಿಗೆ ಅಂಬಿಗರ ಹಳ್ಳಿಯ ಸಂಗನಬಸವನ ಕೈಯ್ಯ ಬರೆಯಿಸಿಕೊಟ್ಟ ಲೀಲೆ ಪುಸ್ತಕ"[೫]

ಈ ಬಗೆಯ ಲೇಖನ ಚಟುವಟಿಕೆ ಕಾರಣವಾಗಿ ಹಸ್ತಪ್ರತಿಗಳು ಬೆಳೆದು ವೈಯುಕ್ತಿಕ – ಸಾರ್ವಜನಿಕ ಗ್ರಂಥಭಾಂಡಾರಗಳು ಅಸ್ತಿತ್ವಕ್ಕೆ ಬರುತ್ತಿದ್ದವು. ಇವುಗಳಲ್ಲಿ ಕವಿಗಳ, ಶಾಸ್ತ್ರಜ್ಞರ, ಧರ್ಮಾಧಿಕಾರಿಗಳ, ರಾಜರ ಹತ್ತಿರ ದೊಡ್ಡ ವೈಯಕ್ತಿಕ ಭಾಂಡಾರಗಳೇ ಇದ್ದಿರಬೇಕು. ಗದಾಯುದ್ಧ ಬರೆಯುವ ಕಾಲಕ್ಕೆ ರನ್ನನ ಹತ್ತಿರ ವ್ಯಾಸಭಾರತ, ವೇಣೀಸಂಹಾರ, ಊರುಭಂಗ, ಪಂಪಭಾರತ ಮೊದಲಾದ ಕೃತಿಗಳ ಸಂಗ್ರಹವಿರಲೇಬೇಕು. ಮಲ್ಲಿಕಾರ್ಜುನ ಸೂಕ್ತಿಸುಧಾರ್ಣವವನ್ನು ರೂಪಿಸುವ

೧. ಮಹಸೂ VI–೧೯೭೫
೨. ಕೊಲ್ಲಾಪುರ ಲಕ್ಷ್ಮೀಸೇನ ಬಸದಿಯ ಹಸ್ತಪ್ರತಿ ೨೫೩
೩. ಮೈಹಸೂ VII–೨೩.
೪. ಶ್ರವಣಬೆಳ್ಗೊಳ ಶ್ರೀ ಜೈನ ಮಠದ ತಾಡಪತ್ರೀಯ ಗ್ರಂಥಗಳ ವಿವರ–೧೬೭.
೫. ಶ್ರೀ ಜಗದ್ಗುರು ಮುರುಘರಾಜೇಂದ್ರ ಬೃಹನ್ಮಠದ ಹಸ್ತಪ್ರತಿಸೂಚೀ I-೩೮೬.

ಕಾಲಕ್ಕೆ ಅವನ ಮನೆಯಲ್ಲಿ ನೂರಾರು ಹಸ್ತಪ್ರತಿಗಳ ದೊಡ್ಡ ಸಂಗ್ರಹವಿರುವುದು ಸಹಜ. ಅಜಿತಪುರಾಣದ ಪದ್ಯಗಳನ್ನೊಳಗೊಂಡ ಸೂಕ್ತಿಸುಧಾರ್ಣವದಲ್ಲಿ ಗದಾಯುದ್ಧದ ಪದ್ಯಗಳಿಲ್ಲದುದನ್ನು ನೋಡಿದರೆ, ಮಲ್ಲಿಕಾರ್ಜುನನ ಭಾಂಡಾರದಲ್ಲಿ ಆ ಕೃತಿಯ ಪ್ರತಿ ಇರಲಿಕ್ಕಿಲ್ಲವೆನಿಸುತ್ತದೆ. ಅಜಿತಪುರಾಣವು ಧಾರ್ಮಿಕ ಕಾವ್ಯವೆಂಬ ಕಾರಣದಿಂದ ಅನೇಕ ನಕಲುಗಳಾಗಿ ಬೆಳೆದಿರಬಹುದು. ಗದಾಯುದ್ಧ ಆ ಕಾಲಕ್ಕಾಗಲೇ ವಿರಳಪ್ರತಿಗಳನ್ನು ಹೊಂದಿರಬಹುದು. ಇಂದಿಗೂ ಅದರ ಒಂದೂವರೆ ಪ್ರತಿಗಳು ಸಿಗುವುದನ್ನು ಇಲ್ಲಿ ಸ್ಮರಿಸಬಹುದು. ಈ ಭಂಡಾರವನ್ನು ಅವನ ಮಗನಾದ ಕೇಶಿರಾಜ ಬಳಸಿಕೊಂಡು ಶಬ್ದಮಣಿದರ್ಪಣವನ್ನು ರಚಿಸಿದ. ತಂದೆಯ ಭಂಡಾರ ಇವನ ಕಾಲಕ್ಕೆ ಇನ್ನೂ ದೊಡ್ಡದಾಗಿರಬಹುದು. ಗದಾಯುದ್ಧದ ಪದ್ಯಗಳು ದರ್ಪಣದಲ್ಲಿರುವುದರಿಂದ ಕೇಶಿರಾಜ ಅದರ ಒಂದು ಪ್ರತಿಯನ್ನು ದೊರಕಿಸಿಕೊಂಡಿರಬಹುದು. ಹೀಗೆ ಕವಿಗಳು, ಶಾಸ್ತ್ರಜ್ಞರಲ್ಲದೆ ಬಹಿರಂಗ ಆಹ್ವಾನ ಒಡ್ಡುತ್ತಿದ್ದ ವಾದಿಗಳ ವಶದಲ್ಲಿಯೂ ಬಹುದೊಡ್ಡ ವೈಯಕ್ತಿಕ ಗ್ರಂಥಭಾಂಡಾರ ಇರುವುದು ಸಹಜ. ಪಾಲ್ಕುರಿಕೆ ಸೋಮನಾಥನನ್ನು ಎದುರಿಸಿದ ಚಕ್ರಪಾಣಿ ರಂಗನಾಥನಲ್ಲಿ ಬಹುದೊಡ್ಡ ಸ್ವಧರ್ಮಗ್ರಂಥಭಂಡಾರವೇ ಇರಬಹುದು. ಕೆರೆಯ ಪದ್ಮರಸನನ್ನು ವಾದಕ್ಕೆ ಆಹ್ವಾನಿಸಿದ ತ್ರಿಭುವನತಾತ "ಆನೆಯೊಳ್ ಸಕಲಶಾಸ್ತ್ರ ಪರಿಮಿತೋರು ಪುಸ್ತಕ ನಿಚಯಮಂ ಹೇರಿಕೊಂಡು"[೬] ಬಂದಿದ್ದನೆಂದು ಪದ್ಮರಾಜಪುರಾಣ ತಿಳಿಸುತ್ತದೆ. ಇದಲ್ಲದೆ, ಕೆಲವುಜನ ಪುಸ್ತಕಪ್ರಿಯರು ಅಧ್ಯಯನ ಮಾಡದಿದ್ದರೂ ಬಹುದೊಡ್ಡ ಭಾಂಡಾರವನ್ನು ಪ್ರತಿಷ್ಠೆಗಾಗಿ ಬೆಳೆಸಿಕೊಳ್ಳುತ್ತಿರಬಹುದು. ರತ್ನಾಕರ ವರ್ಣಿಯ ಭರತೇಶ ವೈಭವದಲ್ಲಿ ಬರುವ "ನೆರಪಿ ಪೊತ್ತಗೆಗಳ ಹೊರೆಗಟ್ಟಿ ಭವಸೇನ । ಗುರುಗಳಂತವರಾಡುತಿಹರು"[೭] ಎಂಬ ಹೇಳಿಕೆ ಅಂಥ ವ್ಯಕ್ತಿಗಳನ್ನು ಸೂಚಿಸುತ್ತದೆ. ಹೀಗೆ ಕವಿ, ಶಾಸ್ತ್ರಜ್ಞ, ಪುಸ್ತಕಪ್ರಿಯ ವ್ಯಕ್ತಿಗಳ ವಶದಲ್ಲಿ ಹಸ್ತಪ್ರತಿಗಳ ದೊಡ್ಡ ಭಾಂಡಾರಗಳೇ ಇದ್ದಿರಬಹುದು. ಇವುಗಳಿಗೆ ಶಾರದಾಭಾಂಡಾರ, ಸರಸ್ವತಿ ಭಾಂಡಾರ ಶ್ರುತ ಭಾಂಡಾರ, ವಚನಭಾಂಡಾರ, ಪುಸ್ತಕ ಭಾಂಡಾರ ಎನ್ನುತ್ತಿದ್ದರು. "ಹದಿನಾಡ ಸೀಮೆಯ ಯಳವಂದೂರ ಸ್ಥಳಕ್ಕೆ ಪೂರ್ವಿಕರಾದ ಕಾಸ್ಯಪಗೋತ್ರದ ತಮ್ಮಣ್ಣ ಪಂಡಿತರ ಕುಮಾರರಾದ ಸೂರಿಪಂಡಿತರ ಕಿರಿಯಮಗ ಬೊಮ್ಮರಸ ಪಂಡಿತನು ನಮ್ಮ ಶಾರದಾ ಭಾಂಡಾರಕ್ಕೆ ಪೊಸ್ತುಕವಾಗಬೇಕುಯೆಂದು ಬರೆದಂಥ ಸನತ್ಕುಮಾರನ ಕೃತಿಯ ಪೊಸ್ತುಕಕ್ಕೆ"[೮] ಎಂಬ ಮಾತನ್ನು ಇಲ್ಲಿ ಗಮನಿಸಬಹುದು.

ಹೀಗೆವಿದ್ವಾಂಸ ವ್ಯಕ್ತಿಗಳ ಮನೆಗಳಲ್ಲಲ್ಲದೆ, ರಾಜಮನೆತನಗಳಲ್ಲಿಯೂ ವೈಯಕ್ತಿಕ ಭಂಡಾರಗಳು ಬೆಳೆದುಬಂದ ಬಗ್ಗೆ ಅನೇಕ ಉದಾಹರಣೆಗಳು ಸಿಗುತ್ತವೆ:

೬. ಪದ್ಮರಾಜಪುರಾಣ (ಪದ್ಮಣಾಂಕ) IX-೯

೭. ಭರತೇಶ ವೈಭವ (ರತ್ನಾಕರವರ್ಣಿ) ೮೦-೧೦೨

೮. ಮೈಪಸೂ X -೪೯.

"ರೌದ್ರಿ ಸಂವತ್ಸರದ ಶ್ರಾವಣಶುದ್ಧ ೧೧ಲ್ಲು ಶ್ರೀಮನ್ಮಹಾನಾಡಪ್ರಭು ಬಿಜ್ಜವರದ ಇಮ್ಮಡಿ ಚಿಕ್ಕಪ್ಪಗೌಡರಯ್ಯನವರ ಶಾರದಾಭಾಂಡಾರಕ್ಕೆ ಅನುಭವದ ಸೊಂಪದೇವರ ಮಕ್ಕಳು ವೀರಸೊಂಪದೇವರು ಬರೆದ ಸ್ತೋತ್ರಭಾಷ್ಯಗಳ ಪುಸ್ತಕೆ"[೯]

"ಶ್ರೀಮನ್‌ಮಹಾನಾಡಪ್ರಭು ಬಿಜ್ಜಾವರದ ಇಮ್ಮಡಿ ಚಿಕ್ಕಪ್ಪಗೌಡರು ಬರೆಸಿದ ಸಾನಂದ ಪುರಾಣ. ಇದನು ಬರೆದಾತನು ಯಜ್ಞನಾರಾಯಣ ದೀಕ್ಷಿತರ ಮಗ ವಿಶ್ವನಾಥನು"[೧೦]

ಈ ಹೇಳಿಕೆಗಳು ಬಿಜ್ಜಾವರದ ಅರಸರ ಮನೆಯಲ್ಲಿ ಬೆಳೆಯುತ್ತಲಿದ್ದ 'ಶಾರದಾ ಭಾಂಡಾರ'ದತ್ತ ಬೆರಳು ನೀಡುತ್ತವೆ. ಮೈಸೂರು ಅರಮನೆಯಲ್ಲಿ ಇಂಥ ಹಸ್ತಪ್ರತಿ ಭಾಂಡಾರ ಈಗಲೂ ಇದ್ದು, ಅದು ಬೆಳೆದುಬಂದ ಬಗೆಯನ್ನು ಅನೇಕ ಹೇಳಿಕೆಗಳು ಹೀಗೆ ತಿಳಿಸುತ್ತವೆ:

"ಚಿಕ್ಕದೇವರಾಯಸ್ವಾಮಿಯವರ ಕುಮಾರಿತಿ ಆದ ಚಿಕ್ಕ ಅಮೃತಾಜಮ್ಮಣ್ಣಿಯವರ ಪಾದದ ದಯಕ್ಕೆ ಪಾತ್ರನಾದ ಚೊಕ್ಕಸ ಬಾಳಯ್ಯನವರ ಮಕ್ಕಳು ಚೆನ್ನರಾಜಯ್ಯನವರ ಮಗ ಮ(ಮಾ)ರಯ್ಯನು ಬರೆದು ಒಪ್ಪಿಸಿದ ಕನ್ನಡ ಕಾದಂಬರಿ ಪುಸ್ತಕ"[೧೧]

"ಆಳಿದ ಮಹಾಸ್ವಾಮಿಯವರ ಮಹಾಸನ್ನಿಧಾನದ ರಾಯಸದ ಭಾಗವತದ ಕೃಷ್ಣಪ್ಪನು ಶಾಲೀವಾಹನ ಶಕೆ ವರ್ಷಂಗಳು ೧೭೬೪ ಸಂದ ವರ್ತಮಾನವಾದ ಶುಭಕೃತ್ಸರದ ಚೈತ್ರಶುದ್ಧ ೮ ಯಲ್ಲು ಶ್ರೀಕೃಷ್ಣ ಕಥಾಸಾರಸಂ"[೧೨]

"ಅರಮನೆಗೆ ಮದ್ದಗಿರಿ ಹನುಮಂತಯ್ಯನು ಬರೆದು ಒಪ್ಪಿಸಿದ ಕೃಷ್ಣರಾಜ ವಿಳಾಸ"[೧೩]

"ಚಿಕ್ಕೇಂದ್ರಭೂಮೀಶಂಗೆಂದಾ ಲಕ್ಷ್ಮಾಖ್ಯಬುಧೋತ್ತಮಂ ಬರೆದುಕೊಟ್ಟ"[೧೪]

"ಶ್ರೀಮದ್ರಾಜಾಧಿರಾಜರಾದ ಬೆಟ್ಟದ ಚಾಮರಸು ಒಡೆಯವರ ಕುಮಾರಕರಾದ ಕಂಠೀರವ ನರಸರಾಜೇಂದ್ರಂಗೆ....ಭಾರತಿ ಅಯಣ್ಣನು ಬರೆದುಕೊಟ್ಟಂಥಾ"[೧೫]

ಇತ್ಯಾದಿ ಹೇಳಿಕೆಗಳು ರಾಜರ ವೈಯಕ್ತಿಕ ಗ್ರಂಥಭಾಂಡಾರಗಳನ್ನು, ಅವರ ಅಭಿರುಚಿಗಳನ್ನು ತಿಳಿಸಿಕೊಡುತ್ತವೆ.ರಾಜರಂತೆ ರಾಜಕುಮಾರರೂ, ಕುಮಾರಿತಿಯರೂ ಗ್ರಂಥದ ವಿಷಯವಾಗಿ ತೋರುತ್ತಲಿದ್ದ ಆಸಕ್ತಿಗಳು ಇಲ್ಲಿ ವೇದ್ಯವಾಗುತ್ತವೆ. ಆಕಾಶ

೯. ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ, ಪೀಠಿಕೆ XXIII

೧೦. ಮಹಸೂ VI–೧೦೭೦.

೧೧. ಮೈಹಸೂ V—೩೩೨.

೧೨. ಮೈಹಸೂ V—೫೨೩.

೧೩. ಮೈಹಸೂ V—೫೨೯.

೧೪. ಮೈಹಸೂ I —೨೮.

೧೫. ಮೈಹಸೂ III – ೧೫೦೭.

ಭೈರವಕಲ್ಪ (೧೫ನೆಯ ಶತಮಾನ) ಹೆಸರಿನ ಹಸ್ತಪ್ರತಿಯ ೩೨ನೆಯ ಪಟಲದಲ್ಲಿ ಅರಮನೆಯಲ್ಲಿರಬೇಕಾದ ಹಸ್ತಪ್ರತಿ ಭಂಡಾರದ ನೆಲೆ, ಸ್ವರೂಪಗಳನ್ನು ಕುರಿತು ಹೇಳಲಾಗಿದೆ.

ಸಾರ್ವಜನಿಕ ಭಾಂಡಾರಗಳನ್ನು ಕುರಿತು ಹೇಳುವುದಾದರೆ ವೈದಿಕ, ಜೈನ, ವೀರಶೈವ ಪರಿಸರಗಳಲ್ಲಿ ಆಯಾ ಧರ್ಮಗಳಿಗೆ ಸಂಬಂಧಪಟ್ಟ ಗ್ರಂಥಸಂಗ್ರಹಗಳು ಹೀಗೆ ಬೆಳೆದು ಬರುತ್ತಿದ್ದವು:

**ವೈದಿಕ :** ಈ ಧರ್ಮದಲ್ಲಿ ಘಟಿಕಾಸ್ಥಾನ ಮತ್ತು ಮಠಗಳು ಪುಸ್ತಕಗಳನ್ನು ಬೆಳೆಸಿಕೊಂಡು ಬಂದವು. ಇವುಗಳಲ್ಲಿ ಘಟಿಕಾಸ್ಥಾನಗಳು ಸಾರ್ವಜನಿಕ ವಿದ್ಯಾಕೇಂದ್ರಗಳಾಗಿದ್ದು, ಇಲ್ಲಿ ಧಾರ್ಮಿಕ ಗ್ರಂಥಗಳ, ವ್ಯಾಕರಣಾದಿ ಶಾಸ್ತ್ರಗಳ, ಸುಪ್ರಸಿದ್ಧ ಕಾವ್ಯಗಳ ಪ್ರೌಢ ಅಧ್ಯಯನಕ್ಕೆ ಅವಕಾಶವಿದ್ದಿತು. ಅದೂ ಸಂಸ್ಕೃತ ಕೃತಿಗಳ ಅಭ್ಯಾಸವೇ ಇಲ್ಲಿ ನಡೆಯುತ್ತಿದ್ದಿತು. ಗುಲಬರ್ಗಾ ಜಿಲ್ಲೆಯ ಚಿತಾಪುರ ತಾಲೂಕಿನ ನಾಗಾವಿಯ ಘಟಿಕಾಸ್ಥಾನದಲ್ಲಿ ಓದುವ "ವೇದಾಧ್ಯಾಯಿಗಳಿನ್ನೂರ್ವರ್ಗಂ, ಶಾಸ್ತ್ರಾಧ್ಯಾಯಿಗಳಯ್ವದಿಂಬರ್ಗಂ ತದುಪಾಧ್ಯಾಯಿಗಳು ೩ ಭಟ್ಟದರ್ಶನ ನ್ಯಾ(ಸ) ಪ್ರಭಾಕರ ವ್ಯಾಖ್ಯಾತೃಗಳ್ಮೂವರ್ಗ್ಗಂ ವೇದಮನೋದಿಸುಪಾಧ್ಯಾಯಮ್ಮೂವರ್ಗ್ಗಂ ಶಾಲೆಯ ಸರಸ್ವತೀಭಣ್ಡಾರಿಗರಾ (=ರೊ)ವ್ವರ್ಗ್ಗಮನ್ತು ೨೫೭ ಮಾನಸ"ರಿಗೆ ದತ್ತಿಬಿಟ್ಟ ವಿಷಯ ಶಾಸನದಲ್ಲಿದೆ.[೧೬] ಇಲ್ಲಿಯ ವಿಷಯ ವೈವಿಧ್ಯಕ್ಕನುಗುಣವಾಗಿ ಗ್ರಂಥಸಂಗ್ರಹ ಬೆಳೆದಿರುವದು ಸಹಜ. ಈ ಸಂಗ್ರಹವನ್ನು 'ಸರಸ್ವತೀ ಭಾಂಡಾರ' ಎಂದು ಕರೆದಿದ್ದು, ನೋಡಿಕೊಳ್ಳಲು ಒಬ್ಬ ಗ್ರಂಥ ಪಾಲನಿದ್ದನು. ಅವನಿಗೆ ಸ್ವಲ್ಪ ಹೆಚ್ಚು ಕಡಿಮೆ ಭಾಟ್ಟದರ್ಶನವ್ಯಾಖ್ಯಾತೃ, ನ್ಯಾಸವ್ಯಾಖ್ಯಾತೃ ಪ್ರಭಾಕರ ವ್ಯಾಖ್ಯಾತೃಗಳಿಗೆ ಸಮಾನವಾಗಿ ೩೦ ಮತ್ತರು ಭೂಮಿಯನ್ನು ನೀಡಲಾಗಿದೆ. ಕರ್ನಾಟಕದಲ್ಲಿ ಸಾಲೊಟಗಿ, ಹೂವಿನಬಾಗೆ, ಹೆಂಜೇರು, ಹೊಟ್ಟೂರು ಮೊದಲಾದವು ಇಂಥ ಘಟಿಕಾಸ್ಥಾನಗಳಾಗಿದ್ದವು.

ಘಟಿಕಾಸ್ಥಾನಗಳನ್ನು ಬಿಟ್ಟರೆ ವೈದಿಕ ಮಠಗಳು ಹಸ್ತಪ್ರತಿ ಉತ್ಪಾದನೆ ಮತ್ತು ಪ್ರಸಾರ ಕಾರ್ಯವನ್ನು ಪೂರೈಸಿವೆ, ಆದರೆ ಬ್ರಾಹ್ಮಣರಿಗೆ ಕನ್ನಡ ಅಸ್ಪೃಶ್ಯ ಭಾಷೆಯಾಗಿದ್ದುದರಿಂದ ಇವರು ಮೊದಲು ಕನ್ನಡಹಸ್ತಪ್ರತಿಗಳನ್ನು ನಕಲು ಮಾಡಿಸಲಿಲ್ಲವೆಂದು ತೋರುತ್ತದೆ. ಹೀಗಾಗಿ ವೈದಿಕ ಮಠಗಳಲ್ಲಿ ಸಂಸ್ಕೃತ ಹಸ್ತಪ್ರತಿಗಳೇ ಹೆಚ್ಚು ಸಂಗ್ರಹವಾದವು. ಬಹಳೆಂದರೆ ಮಠಗಳನ್ನು ಹೊರತುಪಡಿಸಿ, ಸಾಮಾನ್ಯರ ವಶದಲ್ಲಿ ದಾಸರ ಕೀರ್ತನೆ, ಕುಮಾರವ್ಯಾಸ ಭಾರತದಂಥ ಕಾವ್ಯಗಳನ್ನು ಆಗಾಗ ನಕಲು ಮಾಡಿಸುತ್ತ ಬಂದಿದ್ದಾರೆ.

ಮಠಗಳಲ್ಲಿ ಸಂಗ್ರಹಿತವಾದ ಸಂಸ್ಕೃತ ಹಸ್ತಪ್ರತಿಗಳನ್ನು ವಿದ್ಯಾಪ್ರೇಮಿಗಳಾದ ಇವರು ತುಂಬ ಎಚ್ಚರ ಗೌರವದಿಂದ ರಕ್ಷಿಸಿರಲು ಸಾಕು. ಶೃಂಗೇರಿ ವೈದಿಕ ಧರ್ಮದ

---

೧೬. A.P.G.A.S. No. 3. Gb. 2 ನಾಗಾವಿ ಶಾಸನ (೧೦೫೮)

ಕೇಂದ್ರಪೀಠ, ನರಸಿಂಪಭಾರತಿ ಒಡೆಯರ ಆದೇಶದ ಮೇರೆಗೆ ಇಲ್ಲಿಯ 'ಪೊಸ್ತಕ ಭಾಂಡಾರದ ಸಂರಕ್ಷಣಾರ್ಥವಾಗಿ, ಬೆಳಂಜಿ ಗ್ರಾಮದ ಉತ್ಪನ್ನವನ್ನು ಕವಿ ಕೃಷ್ಣ ಭಟ್ಟನಿಗೆ ದತ್ತಿಯಾಗಿ ಕೊಟ್ಟರೆಂದು ಪೆರ್ದೂರಿನ ಒಂದು ಶಾಸನ ಹೇಳುತ್ತದೆ.'[೧೭] ಬುಕ್ಕರಾಯನ ಆಳಿಕೆಗೆ ಸಂಬಂಧಪಟ್ಟ ಈ ಶಾಸನದ ಕಾಲ ಕ್ರಿ. ಶ. ೧೪೨೬. ಇದಲ್ಲದೆ ಮೇಲುಕೋಟೆಯ ಶ್ರೀ ವೈಷ್ಣವಮಠ, ಉಡುಪಿಯ ಅಷ್ಟಮಠ, ಸ್ವಾದಿಯ ವಾದಿ ರಾಜಮಠ, ಮುಳುಬಾಗಿಲನ ಶ್ರೀಪಾದರಾಯರ ಮಠದಲ್ಲಿ ಅನೇಕ ಹಸ್ತಪ್ರತಿಗಳ ಸಂಗ್ರಹವಿದೆ. ಇವೆಲ್ಲ ಸಾಮಾನ್ಯವಾಗಿ ಸಂಸ್ಕೃತ ಹಸ್ತಪ್ರತಿಗಳು.[೧೭A] ಇವುಗಳನ್ನು ಬಿಟ್ಟರೆ ಬಳ್ಳಾರಿ, ಲಿಂಗಸಗೂರು, ಮಾನ್ವಿ, ರಾಯಚೂರುಗಳಲ್ಲಿ ಹರಿದಾಸರ ಕೀರ್ತನ ಸಾಹಿತ್ಯ ಸಿಗುವುದು ಸರ್ವವಿದಿತವಾಗಿದೆ,

**ಜೈನ :** ಜೈನರಲ್ಲಿ 'ಚತುರ್ವಿಧದಾನ' ಸುಪ್ರಸಿದ್ಧವಾದುದು. ನಯಸೇನನು ರಾಜ್ಯಕ್ಕೆ ಚತುರಂಗಮುಂ, ಮಂತ್ರಕ್ಕೆ ಚತುರ್ವಿಧೋಪಾಯಮುಮೊಪ್ಪುವಂತಾ ದಾನಕ್ಕೆ ಶಾಸ್ತ್ರಾದಿ ದಾನಚತುಷ್ಟಯಮೊಪ್ಪುಗುಮಿಂತು:

ಪರಮಾಗಮದಿಂದಲ್ಲದೆ ।
ಪರತ್ರೆಯುಂ ಪಡೆವುಪಾಯಮಿಲ್ಲದರಿಂದಂ ।
ವರಶಾಸ್ತ್ರಂ ಮಿಗಿಲೆಂದಾ ।
ದರದಿಂ ಮಾಡುವುದು ಶಾಸ್ತ್ರದಾನಮನಳಿಪಿಂ ॥

ಶ್ರುತವನಿತೆಯು ಮುಕ್ತಿಶ್ರೀ ।
ಸತಿಯಲ್ಲಿಗೆ ಬೇಗಮುಯ್ವ ದೂದವಿಯೆಂಬೀ ।
ಮತಮನರಿದೋತು ಮಾಡುವು ।
ದತಿಶಯದಿಂ ಶಾಸ್ತ್ರದಾನಮಂ ಪದಪಿಂದಂ ॥

ಶ್ರುತಭಾವನೆಯೊಳಮತಿಮನ ।
ಶ್ರುತಿ ನಿರ್ಮಲಮನದಿನಘಹರಂ ತದ್ದುರಿತ ।
ಕ್ಷತಿಯಿಂ ಕೈವಲ್ಯಶ್ರೀ ।
ಸತಿ ಸಾರ್ಗುಂ ಶಾಸ್ತ್ರದಾನದುನ್ನತಿ ಕಿರಿದೇ ॥ [೧೮]

ಎನ್ನುತ್ತ ಶಾಸ್ತ್ರ, ಅನ್ನ, ಅಭಯ, ಭೈಷಜ—ಎಂಬ ನಾಲ್ಕು ದಾನಗಳಲ್ಲಿ ಶಾಸ್ತ್ರ ದಾನದ ಮಹತ್ವವೇನೆಂಬುದನ್ನು ಈ ಪದ್ಯಗಳಲ್ಲಿ ಸ್ಪಷ್ಟಪಡಿಸುತ್ತಾನೆ. "ಧರ್ಮಶಾಸ್ತ್ರ ದಿಂದಲ್ಲದೆ ಮೋಕ್ಷಸಾಧ್ಯವಿಲ್ಲ. ಕಾರಣ ಶಾಸ್ತ್ರಗಳೇ ಶ್ರೇಷ್ಠವೆಂದು ತಿಳಿದು, ಶಾಸ್ತ್ರ

---

೧೭. A.R.S.I.E.೨೮೩ (೧೯೩೬-೩೭)

೧೭A. ಕರ್ನಾಟಕದಲ್ಲಿ ಸಿದ್ಧವಾದ ಸಂಸ್ಕೃತ ಹಸ್ತಪ್ರತಿಗಳು ಬಿಕಾನೇರ ಭಾಂಡಾರದಲ್ಲಿವೆಯೆಂದು ತಿಳಿದು ಬರುತ್ತದೆ. (ಸಂಯುಕ್ತ ಕರ್ನಾಟಕ ಪತ್ರಿಕೆ ೨೯-೬-೧೯೮೬)

೧೮. ಧರ್ಮಾಮೃತ (ನಯಸೇನ)IV—೩೩, ೩೪, ೩೫,

ದಾನ ಮಾಡಬೇಕು. ಈ ಶಾಸ್ತ್ರವನಿತೆಯೇ ನಮ್ಮನ್ನು ಮುಕ್ತಿಸ್ತ್ರೀ ಹತ್ತಿರ ಒಯ್ಯುತ್ತಾಳೆ. ಶ್ರುತಭಾವನೆಯಿಂದ ಮನಶುದ್ಧಿ, ಮನಶುದ್ಧಿಯಿಂದ ಪಾಪನಿವಾರಣೆ, ಪಾಪನಿವಾರಣೆಯಿಂದ ಕೈವಲ್ಯಸಿದ್ಧಿ. ಹೀಗಾಗಿ ಶಾಸ್ತ್ರದಾನ ಸರ್ವಶ್ರೇಷ್ಠವಾದುದು" ಎಂದು ಈ ಪದ್ಯಗಳಲ್ಲಿ ಹೇಳಲಾಗಿದೆ. ಈ ಮೇರೆಗೆ ಜೈನಪುರುಷರೂ ಮಹಿಳೆಯರೂ ಶಾಸ್ತ್ರದಾನಕಾರ್ಯವನ್ನು ಭಕ್ತಿಯಿಂದ ಪೂರೈಸುತ್ತ ಬಂದಿದ್ದಾರೆ. "ಅಹಾರಾಭಯ ಭೈಷಜ್ಯಶಾಸ್ತ್ರದಾನವಿನೋದೆಯುಂ"[೧೯] "ಆಹಾರಾಭಯ ಭೈಷಜ್ಯಶಾಸ್ತ್ರದಾನ ದತ್ತಾವಧಾನನುಂ"[೨೦] ಎಂಬಂಥ ವಿಶೇಷಣಗಳನ್ನು ಹೊತ್ತ ನೂರಾರು ಸ್ತ್ರೀ-ಪುರುಷರು ಶಾಸನಗಳಲ್ಲಿ ಕಂಡುಬರುತ್ತಾರೆ. ಈ ಶಾಸ್ತ್ರದಾನವನ್ನು ವ್ಯಕ್ತಿಗಳಿಗೂ ಬಸದಿಗಳಿಗೂ ಮಾಡಿದ ಅನೇಕ ಉದಾಹರಣೆಗಳು ಸಿಗುತ್ತವೆ. "ವರ್ಧಮಾನಕ್ಕಗಳು ಸೇನಗಣದ ನೇಮಕ್ಕಗಳಿಗೆ ಶಾಸ್ತ್ರದಾನವಾಗಿ ಬರೆದುಕೊಟ್ಟ ಧನ್ಯಕುಮಾರಚರಿತೆ"[೨೧] ಎಂಬಂಥ ಉಲ್ಲೇಖಗಳು ವ್ಯಕ್ತಿಗೆ ನೀಡಿದ ಶಾಸ್ತ್ರದಾನಕ್ಕೆ ಉದಾಹರಣೆ ಎನಿಸಿವೆ. "ಚಂದ್ರ ಸಾಗರವರ್ಣಿ ಬೆಳಗುಳಮಠಕ್ಕೆ ಬರೆದು ಒಪ್ಪಿಸಿದ ಚಂಪೂಭಾರತ ಸಂಪೂರ್ಣ"[೨೨] ಎಂಬಂಥಹ ನೂರಾರು ಹೇಳಿಕೆಗಳು ಬಸದಿಗಳಿಗೆ ನೀಡಿದ ಗ್ರಂಥದಾನವನ್ನು ತಿಳಿಸುತ್ತವೆ. ಕರ್ನಾಟಕದ ಹೆಮ್ಮೆಯ ಹಸ್ತಪ್ರತಿಗಳಾದ ಧವಲಾ, ಜಯಧವಲಾ, ಮಹಾಧವಲಾಗಳು ಗ್ರಂಥದಾನಕ್ಕೆ ಪರಮಾವಧಿ ನಿದರ್ಶನವೆನಿಸಿವೆ. ದೇವಿಯಕ್ಕನು ಶ್ರುತಪಂಚಮಿ ನೋಂಪಿಯನ್ನು ನೋಂತು, ಬನ್ನಿಗೆರೆಯ ಉತ್ತುಂಗ ಚೈತ್ಯಾಲಯದ ಆಚಾರ್ಯ ಶುಭಚಂದ್ರಸಿದ್ಧಾಂತದೇವರಿಗೆ ಧವಲಗ್ರಂಥದ ಪ್ರತಿಯನ್ನು, ಅಣ್ಣ ಶ್ರೇಷ್ಠಿಯು ಪದ್ಮಸೇನಮುನೀಂದ್ರರಿಗೆ ಜಯಧವಲದ ಪ್ರತಿಯನ್ನು, ಶ್ರೀಮತಿಯು ಶ್ರೀ ಪಂಚಮಿ ಉದ್ಯಾಪನಾ ಸಂದರ್ಭದಲ್ಲಿ ಮಾಘನಂದಿ ಆಚಾರ್ಯರಿಗೆ ಮಹಾಧವಲಾ ಪ್ರತಿಯನ್ನು ಗ್ರಂಥದಾನವಾಗಿ ಅರ್ಪಿಸಿದ್ದಾರೆ.[೨೩] ಮುನಿಗಳಿಗೆ ನೀಡಲಾಗಿದ್ದರೂ ಇವು ಬಸದಿಗಳ ಭಂಡಾರಕ್ಕೆ ಅರ್ಪಿಸಿದುವಾಗಿವೆ. ಹೀಗೆ ಅರ್ಪಿತವಾದ ಹಸ್ತಪ್ರತಿಗಳಿಂದ ಬೆಳೆದ ಪ್ರಾಚೀನ ಜೈನ ಹಸ್ತಪ್ರತಿಭಂಡಾರಗಳೆಂದರೆ ಮೂಡಬಿದರಿಯ ಸಿದ್ಧಾಂತ ಬಸದಿ ಮತ್ತು ಜೈನಮಠ, ವರಾಂಗ, ಕಾರ್ಕಳ, ನರಸಿಂಹರಾಜಪೇಟೆ, ಹುಂಬುಜ, ಶ್ರವಣಬೆಳ್ಗೊಳ, ಅಲಿಯೂರು, ಕೊಲ್ಲಾಪುರ ಜೈನಮಠಗಳಿಗೆ ಸಂಬಂಧಿಸಿದುವು.

ಗ್ರಂಥಸಂಪತ್ತನ್ನು ಬೆಳೆಯಿಸುವ ಇಂತಹದೇ ಇನ್ನೊಂದು ಕಡ್ಡಾಯವೆನ್ನ ಬಹುದಾದ ಸಂದರ್ಭವೆಂದರೆ ಮೃತರು ಮೋಕ್ಷಕ್ಕೆ ಹೋಗಬೇಕೆಂಬ ಉದ್ದೇಶದಿಂದ ಗ್ರಂಥದಾನ ಮಾಡುವುದು. ಇದನ್ನು 'ಪರೋಕ್ಷವಿನಯ' ಎಂದು ಕರೆಯುತ್ತಿದ್ದರು.

---

೧೯. E.C. II– ೧೪೩ (ಕ್ರಿ. ಶ. ೧೧೩೧)

೨೦. ಮೈಹಸೂ II—೭೦೪, ಧರ್ಮನಾಥ ಪುರಾಣ

೨೧. ಕೊಲ್ಲಾಪುರ ಲಕ್ಷ್ಮೀಸೇನ ಬಸದಿ ಹಸ್ತಪ್ರತಿ. ೧೫೭/೨.

೨೨. ಶ್ರವಣಬೆಳ್ಗೊಳ ಶ್ರೀ ಜೈನಮಠದ ತಾಡಪತ್ರೀಯ ಗ್ರಂಥಗಳ ವಿವರ–೧೬೭.

೨೩. ಕನ್ನಡ ಪ್ರಾಂತೀಯ ತಾಡಪತ್ರೀಯ ಗ್ರಂಥಸೂಚೀ (ಕೆ. ಭುಜಬಲಿಶಾಸ್ತ್ರಿ) ೨೫೫–೫೬–೫೭

ಅತ್ತಿಮಬ್ಬೆ ಪೊನ್ನನ ಶಾಂತಿಪುರಾಣದ ಸಾವಿರ ಪ್ರತಿಗಳನ್ನು ಬರೆಯಿಸಿದುದು 'ಪರೋಕ್ಷವಿನಯ'ಕ್ಕೆ ಉತ್ತಮ ಉದಾಹರಣೆಯಾಗಿದೆ.

> ಎಸೆಯದೆ ಪೂಳ್ದು ಕೆಟ್ಟಪುದು ಶಾಂತಿಪುರಾಣಮದಂ ನೆಗಳ್ಚುವೆಂ ।
> ವಸುಧೆಯೊಳಿನ್ನ ತಂದೆಯ ಪರೋಕ್ಷದೊಳೆಂದು ಸಹಸ್ರ ಪುಸ್ತಕ ।
> ಪ್ರಸರಮನತ್ತಿಮಬ್ಬೆ ಪರಮಾದರದಿಂ ಬರೆಯಲ್ಕೆವೇಳ್ದ ಪೆಂ ।
> ಪಸದಳಮದ್ವಿತೀಯಮಸಮಂ ಸಲೆ ಭಾವಿಸಲೆಯ್ದೆ ಬಣ್ಣಿಸಲ್ ॥[೨೪]

ಎಂಬ ಪದ್ಯ ಈ ವಿಷಯವನ್ನು ಸ್ಪಷ್ಟಪಡಿಸುತ್ತದೆ.

ಇಂಥದೇ ಗ್ರಂಥೋತ್ಪಾದನೆಯ ಇನ್ನೊಂದು ಕಾರಣವೆಂದರೆ ಕರ್ಮೋಪಶಮನ. ಜ್ಞಾನವನ್ನು ಮುಚ್ಚಿ ಹಾಕುವ ಜ್ಞಾನಾವರಣೀಯ ಕರ್ಮವನ್ನು ನಾಶಮಾಡುವುದಕ್ಕಾಗಿ ಧರ್ಮಗ್ರಂಥಗಳನ್ನು ಪ್ರತಿಮಾಡಿಕೊಳ್ಳುವ, ಪ್ರತಿ ಮಾಡಿಸಿಕೊಳ್ಳುವ, ಪ್ರತಿಮಾಡಿಕೊಡುವ ಸಂಪ್ರದಾಯ ಜೈನ ಸಮಾಜದಲ್ಲಿದೆ.

"ಶ್ರೀಮದಲಂಕದೇವರ ಶಿಷ್ಯರಾದ ಜಯಕೀರ್ತಿದೇವರು ಹನ್ನಾವರದ ಚಂದ್ರಕೀರ್ತಿದೇವರಿಗೆ ಜ್ಞಾನಾವರಣೀಯ ಕರ್ಮದುಪಶಮನ ನಿಮಿತ್ತವಾಗಿ ....ಬರೆದು ಕೊಟ್ಟರು"[೨೫]

"ಶ್ರೀ ಜ್ಞಾನಸಾಗರವರ್ಣಿಯವರು ತಮ್ಮ ಜ್ಞಾನಾವರಣೀ ಕರ್ಮೋಪಶಮನ ನಿಮಿತ್ಯವಾಗಿ....ಸಂಪೂರ್ಣವಾಗಿ ಬರೆದ ಶ್ರೀ ಪದ್ಮಾವತಿ ಅಮ್ಮನವರ ಚರಿತೆ"[೨೬]

ಕರ್ಮನಾಶನದಿಂದ ಕೇವಲಜ್ಞಾನ ಪ್ರಾಪ್ತಿಯಾಗುತ್ತದೆ. ಇಂಥ ಜ್ಞಾನಪ್ರಾಪ್ತಿಗಾಗಿಯೂ ನಕಲುಮಾಡಿಕೊಂಡುದಕ್ಕೆ "ಶ್ರೀ ಶಾಂತಿಮತಿ ಆವ್ವಗಳ ಜೀಯನವರು ತಮಗೆ ಕೇವಲಜ್ಞಾನಪ್ರಾಪ್ತಿ ನಿಮಿತ್ತವಾಗಿ ಬರದಂಥ ಹಿರೆಪಂಚಪರಮೇಷ್ಠಿಗಳ ವ್ಯಾಖ್ಯಾನ ಸಮಾಪ್ತ"[೨೭] ಎಂಬ ಪ್ರಶಸ್ತಿ ಉದಾಹರಣೆಯಾಗಿದೆ.

ಲೋಕಪರ್ಯಟನ ಮಾಡುವ ಮುನಿಗಳು ಮಳೆಗಾಲದಲ್ಲಿ ಒಂದೆಡೆ ನೆಲೆನಿಂತು ಚಾತುರ್ಮಾಸ ಆಚರಿಸುವ ಸಂದರ್ಭದಲ್ಲಿಯೂ ಹಸ್ತಪ್ರತಿ ರಚನಾಕಾರ್ಯ ನಡೆಯುತ್ತಿದ್ದುದನ್ನು "೧೬೮೩ನೆಯ ದುರ್ಮುಖಿ ಸಂವತ್ಸರದ ಶ್ರಾವಣ ಬಹುಳದಲ್ಲೂ ನೇಮಿನಾಥಸ್ವಾಮಿಯ ಚೈತ್ಯಾಲಯದಲ್ಲಿ ಅಣ್ಣಗಳ ಜೀಯನವರು ನೇಮಿಸಾಗರವರ್ಣಿಜೀಯವರು ಚಾತುರ್ಮಾಸ ಮಾಡುವಾಗ ಚಂದಯ್ಯ ಬರೆದ ಪರಮಾತ್ಮಪ್ರಕಾಶ ಎಂಬ ಗ್ರಂಥ"[೨೮] ಎಂಬ ಪ್ರಶಸ್ತಿ ತಿಳಿಸುತ್ತದೆ. ಹೀಗೆ ಹಲವು ಕಾರಣಗಳಿಂದಾಗಿ ಜೈನರಲ್ಲಿ ಹಸ್ತಪ್ರತಿಗಳು ಬೆಳೆದು ಬರುತ್ತಿದ್ದವು.

---

೨೪. ಶಾಂತಿಪುರಾಣ (ಪೊನ್ನ), ಪರಿಶಿಷ್ಟ I

೨೫. ಕೊಲ್ಲಾಪುರ ಲಕ್ಷ್ಮೀಸೇನ ಬಸದಿ, ಹ. ಪ್ರ. ೨೩/೧

೨೬. ಕೊಲ್ಲಾಪುರ ಲಕ್ಷ್ಮೀಸೇನ ಬಸದಿ, ಹ. ಪ್ರ. ೧೪೪/೩.

೨೭. ಕೊಲ್ಲಾಪುರ ಲಕ್ಷ್ಮೀಸೇನ ಬಸದಿ, ಹ. ಪ್ರ. ೨೫೩.

೨೮. ಶ್ರವಣಬೆಳಗೊಳ ಶ್ರೀ ಜೈನಮಠದ ತಾಡಪತ್ರೀಯ ಗ್ರಂಥಗಳ ವಿವರ ಪು ೧೦-೧೧.

ವೀರಶೈವ : ಕರ್ನಾಟಕದಲ್ಲಿ ಜೈನರಂತೆ ಕನ್ನಡ ಹಸ್ತಪ್ರತಿಗಳನ್ನು ಇನ್ನೂ ಅಧಿಕವಾಗಿ ಬೆಳೆಸಿದವರು ವೀರಶೈವರು. ವೀರಶೈವಕ್ಕೆ ಹಿನ್ನೆಲೆಯಾಗಿರುವ ಮತ್ತು ೧೫ನೆಯ ಶತಮಾನದ ವರೆಗೆ ಬದುಕಿ ಬಂದಿದ್ದ ಕಾಳಾಮುಖಯತಿಗಳು ಬಹುದೊಡ್ಡ ವಿದ್ವಾಂಸರಾಗಿದ್ದರು. ಅವರ ಮಠಗಳು ವಿದ್ಯಾಕೇಂದ್ರಗಳಾಗಿದ್ದ ಕಾರಣ ಅಲ್ಲಿ ದೊಡ್ಡ ಗ್ರಂಥಭಾಂಡಾರಗಳಿರುವುದು ಸಹಜ. ಬಳ್ಳಿಗಾವಿಯ ಕೇದಾರೇಶ್ವರ ಮಠವನ್ನು ಕುರಿತ "ಋಗ್ಯಜುಸ್ಸಾಮಥರ್ವ ಚತುರ್ವೇದ ಸ್ವಾಧ್ಯಾಯ ಸ್ಥಾನಮುಂ ಕೌಮಾರ ಪಾಣಿನೀಯ ಶಾಕಟಾಯನ ಶಬ್ದಾನುಶಾಸನಾದಿ ವ್ಯಾಕರಣ ವ್ಯಾಖ್ಯಾನ ಸ್ಥಾನಮುಂ ಅಷ್ಟಾದಶಪುರಾಣ ಧರ್ಮಶಾಸ್ತ್ರ ಸಕಳ ಕಾವ್ಯನಾಟಕ ನಾಟಿಕಾದಿ ವಿವಿಧ ವಿದ್ಯಾಸ್ಥಾನಮುಂ...."[೨೯] ಎಂಬ ಹೇಳಿಕೆ ಅಂದಿನ ಕಾಳಾಮುಖಮಠಗಳ ವಿದ್ವತ್ತಿನ ಸ್ವರೂಪವನ್ನು ಪ್ರತಿನಿಧಿಸುತ್ತದೆ. ಈ ಬಗೆಯ ಘನತೆಯುಳ್ಳ ಮಠಗಳು ಕರ್ನಾಟಕದ ತುಂಬ ಹರಡಿದ್ದವು. ಇವುಗಳನ್ನು ಬಿಟ್ಟರೆ ಶಿವಶರಣರ ಅನುಭವಮಂಟಪದಲ್ಲಿ ಓಲೆಭಾಂಡಾರವಿದ್ದಿತೆಂದು, ಭಾಂಡಾರಿ ಶಾಂತರಸನೆಂಬ ಶರಣ ಅದರ ವ್ಯವಸ್ಥಾಪಕನಾಗಿದ್ದನೆಂದು ತಿಳಿದುಬರುತ್ತದೆ. ಜೈನರಂತೆ ವೀರಶೈವರಲ್ಲಿಯೂ ಗ್ರಂಥದಾನ ಸಂಪ್ರದಾಯ ಅಸ್ತಿತ್ವದಲ್ಲಿದ್ದಿತು. ಕೆಳದಿಯ ಅರಸು ಬಸವರಾಜನ ಗ್ರಂಥದಾನವನ್ನು ಇಲ್ಲಿ ಉಲ್ಲೇಖಿಸಬಹುದು. "ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮಮೂರ್ತಿಗಳಿಗೆ ನಾನಾವಿಧ ಭಕ್ಷ್ಯ ಭೋಜ್ಯ ರಸಾಯನ ಫಲಂಗಳ್ ಮುಂತಾದ ಇಚ್ಛಾ ಪದಾರ್ಥಂಗಳಂ ನೀಡಿಸಿ, ಸಂತುಷ್ಟಿಪಡಿಸಿಯವರಿಗೆ ನಾನಾವಿಧ ವಿಚಿತ್ರತರ ವಸ್ತ್ರ ಕಂಬಳಿ ಕಂಥೆ ಶಿವದಾರ ವಿಭೂತಿಯಾಧಾರ ಭಸ್ಮರುದ್ರಾಕ್ಷಿ ಆಗಮಶಿವಶಾಸ್ತ್ರ ಲಿಖಿತ ಪುಸ್ತಕ ಪವಾಡ ಛತ್ರ ಪಾದುಕೆ ಹಸ್ತಾಧಾರ ದಂಡ ಮುಂತಾದ ಇಚ್ಛಾಪದಾರ್ಥಂಗಳಂ ಕೊಡಿಸಿ, ಪೇಟೆಯಲ್ಲಿ ಆರಾಧನಾಪೂರ್ವಕಂ ಮಹೋತ್ಸವ ಮೆರವಣಿಗೆಗಳಂ ಮಾಡಿಸಿ, ಶಾಶ್ವತಧರ್ಮಕೀರ್ತಿಗಳಂ ಸಂಪಾದಿಸಿ, ರಾಜ್ಯಂಗೆಯ್ಯುತಿರ್ದ ಬಸವನರೇಂದ್ರಂ"[೩೦] ಎಂಬಲ್ಲಿಯ "ಆಗಮಶಿವಶಾಸ್ತ್ರಲಿಖಿತ ಪುಸ್ತಕ"ಗಳ ದಾನ ಮುಖ್ಯವಾದುದು. ಅದರಲ್ಲಿಯೂ "ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮಮೂರ್ತಿಗಳಿಗೆ" ಎಂಬುದು ಗಮನ ಸೆಳೆಯುವ ಅಂಶವಾಗಿದೆ.

ವೀರಶೈವ ಮಠಾಧೀಶರಿಗೆ ದೀಕ್ಷಾಪ್ರಸಂಗದಲ್ಲಿ ಕೆಲವು ಧಾರ್ಮಿಕ ಗ್ರಂಥಗಳನ್ನು ಕೊಡುವುದು ಆಚರಣೆಯ ಒಂದು ಭಾಗವಾಗಿದ್ದಿತು. "ಪ್ರಭು ಚನ್ನಬಸವರಾಜೇಂದ್ರರು ಶಿವಮೂರ್ತಿಯಾದ ಸೊನ್ನಲಿಗೆಯ ಸಿದ್ಧರಾಮೇಶಂಗೆ ನಿರೂಪಿಸಿದ ಗೋಪೇಶ್ವರನ ವಚನ, ಕರಣಹಸಿಗೆ, ಮಿಶ್ರಾರ್ಪಣ, ಸಿದ್ಧರಾಮೇಶ್ವರ ಮಂತ್ರಗೋಪ್ಯ, ಅಕ್ಕಗಳ ಸೃಷ್ಟಿಯ ವಚನ, ಪ್ರಭುದೇವರ ಸೃಷ್ಟಿಯ ವಚನ, ಸಿದ್ಧೇಶ್ವರ

---

೨೯. E.C. VII, ಶಿಕಾರಿಪುರ ೧೦೨ ಬಳ್ಳಿಗಾವಿ, ೧೧೬೨

೩೦. ಕೆಳದಿ ನೃಪವಿಜಯ, ೧೧-೩೫ ಗ.

ವಚನ, ಹಿರಿಯ ಮಂತ್ರಗೋಪ್ಯ, ಶೂನ್ಯಸಂಪಾದನೆ ಮುಂತಾದವುಗಳ ಸಂಗ್ರಹಿಸಿದ ಪುಸ್ತಕವ, ಸಭಾಮಧ್ಯದಲ್ಲಿ ಆ ಶಿವಾನುಭವ ಚರಂತಿಗೆ ತೆಗೆದುಕೊಂಡ ಗುರುವರನ ಕಡೆಯಿಂದ ಆ ಶಾಸ್ತ್ರವಂ ಶಿಷ್ಯೋತ್ತಮನು ಶಿವಮಂತ್ರ ಗುರುಪ್ರಸಾದಮುಖವಾದ (೧), ಅಂಗಲಿಂಗ ಸಾಮರಸ್ಯ ಮುಂತಾಗಿ... ೩೬ ತತ್ವಂಗಳಂ ತಿಳಿದಾತನು ಶಾಸ್ತ್ರವಂ ಗುರುಗಳಿಂ ಶ್ರವಣಗೊಂಡಾತನಾದ ವಿರಕ್ತನೆ ಶಾಸ್ತ್ರದ ಕಟ್ಟು ಹಿಡಿಯಬೇಕು ... ಈತನಿಗೆ ಶಿವಾನುಭವಶಾಸ್ತ್ರವೆ ಆಗಲಿ, ಪುರಾಣ ಪುಸ್ತಕವೆ ಆಗಲಿ, ಇವುಗಳನ್ನು ಗುರುಗಳಾದ ಚರಮೂರ್ತಿಗಳು ಸಭೆಯಲ್ಲಿ ಕೊಟ್ಟು ತಮ್ಮಾಸನದಲ್ಲಿ ಕುಳ್ಳಿರಿಸಿ ಕೊಳ್ಳಲು, ಆ ಗಣವರನೆ ಚಮೂರ್ತಿ ಎನಿಸುವನು"[೩೧]–ಎಂಬ ನಿರಂಜನವಂಶರತ್ನಾಕರ ಗ್ರಂಥದ ಹೇಳಿಕೆಯಲ್ಲಿ ಸೂಚಿಸಲಾದ ಗ್ರಂಥಗಳು ಪಟ್ಟಾಧಿಕಾರ ಸಂದರ್ಭದಲ್ಲಿ ಕಡ್ಡಾಯವೆನಿಸಿದ್ದವೆಂದು ತಿಳಿದು ಬರುತ್ತದೆ. ಬಹುಶಃ ಈ ಕಾರಣಕ್ಕಾಗಿಯೇ ವೀರಶೈವಮಠಗಳಲ್ಲಿ ಕರಣ ಹಸಿಗೆ, ಮಿಶ್ರಾರ್ಪಣ, ಮಂತ್ರಗೋಪ್ಯ, ಸೃಷ್ಟಿಯ ವಚನ ಗ್ರಂಥಗಳು ಬಹುಸಂಖ್ಯೆಯಲ್ಲಿ ಸಿಗುತ್ತವೆ ಎಂದು ಕಾಣುತ್ತದೆ.

ಇವುಗಳಿಗಿಂತ ಎತ್ತಿ ಹೇಳಲೇಬೇಕಾದ ವಿಷಯವೆಂದರೆ ೧೨ನೆಯ ಶತಮಾನದಲ್ಲಿ ಉದ್ಭವಿಸಿದ ಶರಣರ ಜನಪರ ಚಳುವಳಿಯಿಂದಾಗಿ ಜ್ಞಾನ, ಅಕ್ಷರಜ್ಞಾನ ಸಾಮಾನ್ಯರ ಬಾಗಿಲ ವರೆಗೂ ಬಂದುದು. ಸ್ತ್ರೀ–ಪುರುಷ, ವಿಪ್ರ–ಶೂದ್ರ ಮೊದಲಾದವರೆಲ್ಲ ಈಗ ಸಾಹಿತ್ಯ ನಿರ್ಮಿತಿಯಲ್ಲಿ ತೊಡಗಿದ ಕಾರಣ, ಹಸ್ತಪ್ರತಿಗಳ ಉತ್ಪಾದನೆ ವರ್ಧಿಸಿತು.

ಕಾಲಜ್ಞಾನ ಸಾಹಿತ್ಯದಲ್ಲಿ ವಚನಗಳನ್ನು 'ಮುಚ್ಚಿ ಇಡಿರಿ' ಎಂಬ ಮಾತು ಪದೇ ಪದೇ ಬರುತ್ತಿದ್ದು, ಇದು ಕಲ್ಯಾಣ ಕ್ರಾಂತಿಯಿಂದಾಗಿ ಆದಕ್ಕೆ ಬಹಿಷ್ಕಾರದ ಗಂಡಾಂತರ ಒದಗಿದುದನ್ನು ಸೂಚಿಸುವಂತಿದೆ. ಹೀಗಾಗಿ ಅವರು ವಚನಸಾಹಿತ್ಯದ ಬಹುದೊಡ್ಡ ಭಾಗವನ್ನು ಹಂಪೆಯಲ್ಲಿ ಅಡಗಿಸಿಟ್ಟರೆಂದು ಕಾಣುತ್ತದೆ. ಕಾಲಜ್ಞಾನ ವಚನದಲ್ಲಿ ಬರುವ ಹಂಪೆಯಲ್ಲಿ ಮುಚ್ಚಿಟ್ಟ ವಾಲಿಭಂಡಾರವು ರಾಮಾಯಣ ಕಾಲದ ವಾಲಿಯ ದ್ರವ್ಯಭಾಂಡಾರವಲ್ಲ; ವಚನಗಳ ತಾಳೆ ಓಲೆಯ ಭಾಂಡಾರವೇ ಆಗಿರಬೇಕು. ಹಂಪೆ ಆ ಕಾಲದಲ್ಲಿ ಕುರುಗೋಡು ಸಿಂದರ ವಶದಲ್ಲಿದ್ದಿತು. ಪರಮ ಶಿವಭಕ್ತರಾದ ಇವರಲ್ಲಿ ರಕ್ಷಣೆಯನ್ನು ಬಯಸಿ, ಶರಣರು ಅಲ್ಲಿಗೆ ಹೋದಂತೆ ಕಾಣುತ್ತದೆ.

ಶರಣರ ಇನ್ನೊಂದು ತಂಡ ಬಿಜ್ಜಳನ ವಿರೋಧಿಗಳಾದ ಗೋವೆ ಕದಂಬರ ಅಧಿಪತ್ಯಕ್ಕೆ ಒಳಪಟ್ಟ ಉಳಿವೆಗೆ ಹೋಯಿತು. ಅದರೆ ಅಲ್ಲಿ ಅವರು ಮಾಡಿದ ವಚನ ಪ್ರಸಾರದ ಬಗ್ಗೆ ಏನೂ ತಿಳಿದುಬಂದಿಲ್ಲ. ಆಂಧ್ರಪ್ರದೇಶ ಬಿಜ್ಜಳನ ಆಳಿಕೆಗೆ ಹೊರಗಾಗಿದ್ದುದರಿಂದ ಶರಣರ ಮತ್ತೊಂದು ತಂಡ ಅಲ್ಲಿಗೆ ಹೋಯಿತು.

---

೩೧. ನಿರಂಜನ ಜಂಗಮವಂಶ ರತ್ನಾಕರ. ೪೦–೪೨.

ಗುರುರಾಜನ 'ಮಲ್ಲಿಕಾರ್ಜುನಪಂಡಿತಾರಾಧ್ಯ ಚರಿತ್ರೆ'ಯಲ್ಲಿ ಶ್ರೀಶೈಲಕ್ಕೆ ಹೊರಟ ಭಕ್ತರನ್ನು ಕುರಿತು–

"ಗಾಯಂತೋ ಬಸವೇಶಸ್ಯ ಗೀತಾನ್ಯಪಿ"

"ಪ್ರಭು ಸತ್ಯೇಶ ಚಾಮಯ್ಯ ಮಡಿವಳಮಾಚಯ್ಯ ಜಂಗಮೈಸ್ತಥಾ।
ವರದ ಶಂಕರದಾಸಯ್ಯ ದಾಸ ಕೇತೋದ್ಭಟೈರಪಿ।
ಕಕ್ಕಯ್ಯ ಚೆನ್ನಬಸವ ಕಲ್ಲಿದೇವ ಪಲಾಯುಧೈಃ॥
ಶ್ರೀ ಕೇಶಿರಾಜ ಚಿಕ್ಕಾರ್ಯ ಮಸಣಾರ್ಯೈರ್ಮಹಾತ್ಮಭಿಃ
ಸಿದ್ಧರಾಮಾಭಿಧಾನೇನ ಮಹಾದೇವ್ಯಾ ಪ್ರಸಿದ್ಧಯಾ ॥
ಭವ್ಯ ಸೊಡ್ಡಲಬಾಚಾರ್ಯ ಬಸವೇಶ ಪುರಸ್ಸರೈಃ।
ಕೃತೇಷು ಗೀತೇಷ್ವಪಿಚ ಗೀಯಮಾನೇಷು ಗಾಯಕೈಃ ॥

"ಬಸವೇಶೋಪರಚಿತಾ ಗೀತಾಂ....ಗಾಯಂತಃ"[೩೨]

ಎಂದು ಹೇಳಿದ ಈ ಮಾತುಗಳು ವಚನಸಾಹಿತ್ಯದ ಪ್ರಸಾರವನ್ನು ಸೂಚಿಸುತ್ತವೆ. ೧೩ನೆಯ ಶತಮಾನದಲ್ಲಿ ಕೆರೆಯ ಪದ್ಮರಸನು ತ್ರಿಭುವನತಾತನ ಜೊತೆ ವಾದಕ್ಕೆ ನಿಂತ ಸಂದರ್ಭದಲ್ಲಿ ದೇಶದ ಬೇರೆ ಬೇರೆ ಭಾಗಗಳಿಂದ ಹೊರಟ ವಿದ್ವಾಂಸರು 'ಬಸವೇಶ್ವರಾದಿಗಳ ಗೀತಂಗಳಂ'[೩೩] ಹಾಡುತ್ತ ನಡೆದರೆಂದು ಪದ್ಮರಾಜಪುರಾಣ ತಿಳಿಸುತ್ತದೆ. ಹೀಗೆ ಹಂಪೆ, ಉಳಿವೆ, ಆಂಧ್ರಪ್ರದೇಶ, ಹಳೇಬೀಡುಗಳಲ್ಲಿ ವಚನ ಸಾಹಿತ್ಯ ಪ್ರಚಾರ ಪಡೆದಿದ್ದಿತು. ಬಳಿಕ ವಿಜಯನಗರ ಸಾಮ್ರಾಜ್ಯ ಅಸ್ತಿತ್ವಕ್ಕೆ ಬಂದು ಪ್ರೌಢದೇವರಾಯನು ಸಿಂಹಾಸನವೇರುತ್ತಲೇ ಹಂಪೆ ವಚನಸಾಹಿತ್ಯದ ಪುನರುಜ್ಜೀವನಕ್ಕೆ ನೆಲೆಯಾಗಿ ಪರಿಣಮಿಸಿತು. ರಾಜನಲ್ಲದೆ–

ಲಕ್ಕಣ್ಣದಣ್ಣಾಯಕರು ಮುನ್ನ ಭಂಡಾರಿ
ಜಕ್ಕಪ್ಪ ಕಲ್ಲೆಹದ ಕೇತಿಶೆಟ್ಟಿಯರಿವರು
ಲಕ್ಕಸಂಖ್ಯೆಯ ವಿತ್ತಮಂ ವೆಚ್ಚಿಸುತ್ತ....[೩೪]

ವೀರಶೈವ ಧರ್ಮ–ಸಾಹಿತ್ಯೋದ್ಧಾರಕಾರ್ಯವನ್ನು ಕೈಕೊಂಡರೆಂದು ತಿಳಿಯಬರುತ್ತದೆ. ಗುರುವರ್ಗಪರಂಪರೆಯ ಏಕೋತ್ತರ ಶತಸ್ಥಲ, ವಿರಕ್ತವರ್ಗಪರಂಪರೆಯ ಲಿಂಗ ಲೀಲಾವಿಲಾಸ ಚಾರಿತ್ರಗಳು ಆಕಾರ ಪಡೆದುದು ಈ ಸಂದರ್ಭದಲ್ಲಿ. ಶೈವರಾದ ಸಂಗಮವಂಶದವರ ಆಳಿಕೆ ಮುಗಿದು, ವೈಷ್ಣವರಾದ ಸಾಳ್ವ–ತುಳುವರು ಅಧಿಕಾರಕ್ಕೆ ಬರುತ್ತಲೇ ವೀರಶೈವದ ಸಾಹಿತ್ಯಿಕ ಚಟುವಟಿಕೆ ಅಲ್ಲಿ ನಿಂತುಬಿಟ್ಟಿತು. ಈಗ

---

೩೨. ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತ್ರೆ (ಗುರುರಾಜ). ಪು ೧೭೪, ೯೫೭–೯೭೦.
೩೩. ಪದ್ಮರಾಜ ಪುರಾಣ (ಪದ್ಮಣಾಂಕ) IX–೩೫
೩೪. ವೀರಶೈವಾಮೃತ ಮಹಾಪುರಾಣ, VIII–೨೨–೫೨.





ಬಹುಶಃ ಆಂಧ್ರದ ಕಡೆಯ ಆರಾಧ್ಯವೀರಶೈವರು ಕರ್ನಾಟಕದ ಗುಮ್ಮಳಾಪುರ-ಗುಬ್ಬಿಗಳನ್ನು ನೆಲೆಮಾಡಿಕೊಂಡರು. ಪಂಡಿತಾರಾಧ್ಯ, ಪಾಲ್ಕುರಿಕೆ ಸೋಮನಾಥರ ಪ್ರಭಾವದಿಂದಾಗಿ ಇಲ್ಲಿ ತಲೆಯೆತ್ತಿದ್ದ ವೀರಶೈವರಲ್ಲಿ ಗುಬ್ಬಿಯ ಮಲ್ಲಣಾರ್ಯ (ಮಲ್ಲಣಾರಾಧ್ಯ)ನ ಸಂತತಿಯವರು ಉತ್ಸಾಹದಿಂದ ದುಡಿದರು. ಹಲಗೆಯಾರ್ಯ, ಕೆಂಚವೀರಣ್ಣ, ಗುಬ್ಬಿಯ ಮಲ್ಲಣ್ಣರು ಇಲ್ಲಿಯ ಜ್ಯೋತಿಯಮ್ಮನ ಮನೆಯಲ್ಲಿ ವೀರಶೈವಾಮೃತ ಮಹಾಪುರಾಣ ರಚಿಸಿದುದು ಬಹು ದೊಡ್ಡ ಘಟನೆಯೆಂದೇ ಹೇಳಬೇಕು.

ಈ ಸಂದರ್ಭದಲ್ಲಿ ತಲೆಯೆತ್ತಿದ ಹರದನಹಳ್ಳಿಯ ತೋಂಟದ ಸಿದ್ಧಲಿಂಗನಿಂದಾಗಿ ವಚನಸಂಪಾದನ ಕಾರ್ಯಕ್ಕೆ ವೇಗ, ವ್ಯಾಪ್ತಿ ಪ್ರಾಪ್ತವಾಯಿತು. ಶೂನ್ಯಸಂಪಾದನೆಗಳು ಈ ಕಾಲದಲ್ಲಿ ಸೃಷ್ಟಿಯಾದವು. ಮುಂದೆ ಈ ಸಂಪ್ರದಾಯದಲ್ಲಿ 'ಸಂಪಾದನ ಸಮಯ' ಹೆಸರಿನ ಒಂದು ಶಾಖೆಯೇ ಬೆಳೆಯಿತು. ಇದು ಹೊಸ ಗ್ರಂಥಗಳ ರಚನೆಗಿಂತ ಹಳೆಯ ಗ್ರಂಥಗಳ ಸಂಗ್ರಹ, ಸಂಕಲನ, ಸಂಪಾದನ ಕೆಲಸದಲ್ಲಿ ತೊಡಗಿ, ಹೊಸ ಸಾಹಿತ್ಯ ಪ್ರಕಾರವನ್ನೇ ಸೃಷ್ಟಿಸಿತು. ಈ ಪರಂಪರೆಯಲ್ಲಿ ಬಂದ




ಇವರೆಲ್ಲ ವಚನಸಾಹಿತ್ಯವನ್ನು ಕಣ್ಣುಮುಂದಿಟ್ಟುಕೊಂಡು ಅನೇಕ ಬಗೆಯ ಕೃತಿಗಳನ್ನು ಸಂಯೋಜಿಸಿದರು. ಇವರಿಂದಾಗಿ ಸೃಷ್ಟಿಯಾದ ಸಂಗ್ರಹ, ಸಂಕಲನ, ಸಂಪಾದನ ಕೃತಿಗಳ ಸಂಖ್ಯೆ ಸುಮಾರು ೧೬೦. ಸಂಕಲನಗಳಲ್ಲಿಯ ಅನೇಕರ ವಚನಗಳ ಆಯ್ಕೆಗಾಗಿ ಇವರು ನೂರಾರು ಕೃತಿಗಳನ್ನು ಸಂಗ್ರಹಿಸಬೇಕು. ಇವರು ಸಂಯೋಜಿಸಿದ ಒಂದೊಂದು ಕೃತಿಯ ಹಲವಾರು ಪ್ರತಿಗಳು ಸಿಗುವವನ್ನು ನೋಡಿದರೆ ಇವರಿಂದ ನಡೆದ ಹಸ್ತಪ್ರತಿ ಲೇಖನ-ಪ್ರಸಾರಕಾರ್ಯದ ಬಾಹುಳ್ಯ ಅರ್ಥವಾಗುತ್ತದೆ. ವೀರಶೈವ ಹಸ್ತಪ್ರತಿ ಭಾಂಡಾರಕ್ಕೆ ಉಕ್ಕು ಬಂದಿರುವುದೇ ಈ ಸಂಪಾದನ ಸಮಯದಿಂದ. ಗ್ರಂಥಗಳ ಪ್ರತಿಲೇಖನ-ಪ್ರಸಾರಗಳು ಧಾರ್ಮಿಕ ಚಟುವಟಿಕೆಯ ಒಂದು

ಭಾಗವೆಂಬ ಇವರ ಭಾವನೆ ಶ್ಲಾಘನೀಯವಾದುದು. ಈ ಪರಂಪರೆ ಪ್ರಾಚೀನ ಈಜಿಪ್ತದ ಸುಪ್ರಸಿದ್ಧ ಗ್ರಂಥಸಂಪಾದಕರಾದ ಜೇನೋಡೋಟಸ್, ಶಿಷ್ಯ ಅರಿಸ್ಟೋಫೇನಿಸ್, ಶಿಷ್ಯ ಅರಿಸ್ಟಾರ್ಕಸ್‌ಯೆಂಬ ಗುರು-ಶಿಷ್ಯ ಪರಂಪರೆಯನ್ನು ನೆನಪಿಗೆ ತರುತ್ತದೆ. ಇದಲ್ಲದೆ ಈ ಮಠಗಳು ಹಸ್ತಪ್ರತಿಯ ಉತ್ಪಾದನೆ, ಪ್ರಸಾರಕಾರ್ಯಗಳಲ್ಲಿ ಗಾಢವಾಗಿ ನಿರತವಾದುದನ್ನು ನೋಡಿದರೆ, ಪ್ರಾಚೀನ ಬೈಜಾಂಟಿಯಂ ಪ್ರದೇಶದ ಕ್ರೈಸ್ತಮಠಗಳ ಗ್ರಂಥಪ್ರಸಾರ ಚಟುವಟಿಕೆಗಳು ನೆನಪಾಗುತ್ತವೆ. ಈ ಬಗೆಯ ದೃಷ್ಟಿ-ಧೋರಣೆಯಿಂದಾಗಿ ಮಠಗಳು ಗ್ರಂಥೋತ್ಪಾದನೆಯ ಕೇಂದ್ರಗಳಾಗಿ ಪರಿಣಮಿಸಿದವು.

"ಓದಿಸುವ ಬಿದರಹಳ್ಳಿ ಮಠದಲ್ಲಿ ಕುಳಿತು ಮುಗಿಯ ಬರೆದ ಮಲ್ಲಪ್ಪದೇವರ ಹಸ್ತಾಂತರ........"[೩೫]

"ಜಂಬುಕಂಡಿಯ ಬದಿಯ ತೇರದಳವೆಂಬ ಗಾಳಿಪೇಟೆಯಲ್ಲಿ ವಿರಕ್ತಮಠದಲ್ಲಿ.... ಬರೆದ ಪುಸ್ತಕವು"[೩೬]

"........ಮಂಗಳದೇಶದ ಲಕ್ಷ್ಮಣೇಶ್ವರ ತೋಂಟಸ್ವಾಮಿಗಳ ಮಠದಲ್ಲಿ ಬರೆದ ಬಸವೇಶ್ವರನ ಪುರಾಣ........"[೩೭]

ಈ ಮೊದಲಾದ ಹೇಳಿಕೆಗಳನ್ನು ಗಮನಿಸಿದರೆ ಮಠಗಳು ಗ್ರಂಥಗಳ ಲೇಖನ ಕಾರ್ಯಕ್ಕೆ ನೀಡಿದ ಆಶ್ರಯ ಸ್ಪಷ್ಟವಾಗುತ್ತದೆ.

ಹೀಗೆ ವೀರಶೈವಮಠಗಳು ಕರ್ನಾಟಕದ ತುಂಬ ಗ್ರಂಥೋತ್ಪಾದನೆಯಲ್ಲಿ ತೊಡಗಿದ ಕಾರಣ, ಬೀದರ ಜಿಲ್ಲೆಯ ಬಸವತೀರ್ಥ ಹುಮ್ನಾಬಾದ್, ಗುಲ್ಬರ್ಗಾ ಜಿಲ್ಲೆಯ ಜೇವರ್ಗಿ ಗುಲ್ಬರ್ಗಾ, ವಿಜಾಪೂರ ಜಿಲ್ಲೆಯ ಇಳಕಲ್ ಗುಳೇದಗುಡ್ಡ ಶಿವಯೋಗ ಮಂದಿರ, ಧಾರವಾಡ ಜಿಲ್ಲೆಯ ಗದಗ ಹುಬ್ಬಳ್ಳಿ ಹಾವೇರಿ, ಬೆಳಗಾಂವ ಜಿಲ್ಲೆಯ ನಾಗನೂರು ಮುರಗೋಡ ಅರಭಾವಿ, ರಾಯಚೂರು ಜಿಲ್ಲೆಯ ಕೊಪ್ಪಳ, ಬಳ್ಳಾರಿ ಜಿಲ್ಲೆಯ ಕೊಟ್ಟೂರು, ಚಿತ್ರದುರ್ಗ ಜಿಲ್ಲೆಯ ಸಿರಿಗೆರೆ ಚಿತ್ರದುರ್ಗ, ಉತ್ತರ ಕನ್ನಡ ಜಿಲ್ಲೆಯ ಇಸಳೂರು ಸಿರಸಿ. ದಕ್ಷಿಣ ಕನ್ನಡ ಜಿಲ್ಲೆಯ ಗುರುಪುರ, ಚಿಕ್ಕಮಗಳೂರು ಜಿಲ್ಲೆಯ ರಂಭಾಪುರಿ, ಶಿವಮೊಗ್ಗ ಜಿಲ್ಲೆಯ ಆನಂದಪುರ ಜಡೆ, ತುಮಕೂರು ಜಿಲ್ಲೆಯ ಗುಬ್ಬಿ ಹೊನ್ನವಳ್ಳಿ ಕಂಬಾಳ, ಮೈಸೂರು ಜಿಲ್ಲೆಯ ಪಡಗೂರು ಸುತ್ತೂರು, ಹಾಸನ ಜಿಲ್ಲೆಯ ಹಾರ್ನಹಳ್ಳಿ, ಬೆಂಗಳೂರು ಜಿಲ್ಲೆಯ ರಾಜಾಪುರ ಹುಣಸಮಾರನಹಳ್ಳಿ – ಮೊದಲಾದ ಧಾರ್ಮಿಕ ಕೇಂದ್ರಗಳಲ್ಲಿ ಹಸ್ತಪ್ರತಿಗಳು ಸಿಗುತ್ತವೆ.

---

೩೫. ಮೈಹಸೂ III-೧೨೩೨, ಭೈರವೇಶ್ವರ ಕಾವ್ಯದ ಕಥೆಗಳು.

೩೬. ಮೈಹಸೂ V-೧೯೨

೩೭. ಬೆಂಪಸೂ-೩೦೭.

ಮಠಗಳಂಥ ಧಾರ್ಮಿಕ ಕೇಂದ್ರಗಳಲ್ಲಿ ಒಂದು ಕೃತಿಯು ಒಂದಕ್ಕಿಂತ ಹೆಚ್ಚು ಪ್ರತಿಗಳು ಸಿಗುತ್ತವೆ. ಬಹುಶಃ ಭಕ್ತರು ತಮ್ಮ ಇಚ್ಛಾನುಸಾರ ಕಾಲಕಾಲಕ್ಕೆ ಬರೆದು ಅರ್ಪಿಸಿದುದು ಇಲ್ಲವೆ ಈ ಸಾರ್ವಜನಿಕ ಭಾಂಡಾರಗಳಲ್ಲಿ ಓದಲು ಏಕಕಾಲಕ್ಕೆ ಹಲವು ಪ್ರತಿಗಳು ಬೇಕೆಂಬುದು ಇದಕ್ಕೆ ಕಾರಣವಾಗಿರಬಹುದು. ಚಿತ್ರದುರ್ಗ ಬೃಹನ್ಮಠದ ೩೬೦೦ ಕನ್ನಡ ಹಸ್ತಪ್ರತಿಗಳಲ್ಲಿ ಅಕ್ಕಗಳ ಸೃಷ್ಟಿಯು ವಚನ ೩೫, ಅಕ್ಷರಮಾಲಿಕಾ ಗದ್ಯ ೩೨, ಅಕರಾಂಕನ ಗದ್ಯ ೩೪, ಅನುಭವಸಾರ ೧೯, ಅಷ್ಟಾವರಣ ಸ್ತೋತ್ರದ ತ್ರಿವಿಧಿ ೩೧, ಏಕೋತ್ತರ ಶತಸ್ಥಲ (ಜಕ್ಕಣ) ೨೫, ಕರ್ನಾಟಕ ಶಬ್ದಮಂಜರಿ ೧೬, ಕರಣಹಸಿಗೆ (ಚೆನ್ನಬಸವಣ್ಣ) ೪೭, ಕೈವಲ್ಯಪದ್ಧತಿ ೧೩, ಗಿರಿಜಾಕಲ್ಯಾಣ ೮, ಪ್ರಭುದೇವರ ಟೀಕಿನ ವಚನ ೭, ಪ್ರಭುಲಿಂಗಲೀಲೆ ೧೫, ಬಸವಪುರಾಣ ೬, ಮಂತ್ರ ಮಹತ್ವಕಂದ ೨೮, ರಾಜಶೇಖರ ವಿಳಾಸ ೭, ವಿವೇಕಚಿಂತಾಮಣಿ ೧೨, ಶಬರಶಂಕರ ವಿಳಾಸ ೭, ಷಟ್‌ಸ್ಥಲಜ್ಞಾನ ಸಾರಾಮೃತ ೧೦–ಹೀಗೆ ಪ್ರತಿಗಳು ಸಿಗುವುದು ಗಮನಿಸ ಬೇಕಾದ ಸಂಗತಿಯಾಗಿದೆ. ಇದೇ ರೀತಿ ಕೊಲ್ಲಾಪುರದ ಲಕ್ಷ್ಮೀಸೇನ ಭಟ್ಟಾರಕ ಬಸದಿಯಲ್ಲಿ ಅಪರಾಜಿತೇಶ್ವರ ಶತಕ ೭, ಅಮರಕೋಶ ೬, ಕರ್ಮಪ್ರಕೃತಿ ವ್ಯಾಖ್ಯಾನ ೨೦, ಜಿನಮುನಿತನಯ ೭, ಜ್ಞಾನಭಾಸ್ಕರ ಚರಿತೆ ೯, ದ್ವಾದಶಾನು ಪ್ರೇಕ್ಷೆ ೧೪, ಧರ್ಮಪರೀಕ್ಷೆ ೫, ನೇಮಿಜಿನೇಶ ಸಂಗತಿ ೮, ಪಂಚಪರಮೇಷ್ಠಿಗಳ ಬೊಲ್ಲೆ ೮, ಭರತೇಶ ವೈಭವ ೬, ರತ್ನಕರಂಡಕ ಶ್ರಾವಕಾಚಾರ ೧೯ –ಹೀಗೆ ಸಿಗುವುದನ್ನೂ ಇಲ್ಲಿ ನೆನೆಯಬಹುದು.

* * * * *

ಈ ವರೆಗಿನ ವಿವೇಚನೆಯನ್ನು ಹಸ್ತಪ್ರತಿಗಳ ಭೌಗೋಲಿಕ ಪರಿಚಲನೆಯ ದೃಷ್ಟಿಯಿಂದಲೂ ಅಭ್ಯಸಿಸಬಹುದು. ಕರ್ನಾಟಕದಲ್ಲಿ ಮೊದಲು ತಲೆಯೆತ್ತಿದುದು ಜೈನಸಾಹಿತ್ಯ, ಆಮೇಲೆ ವೀರಶೈವ, ಕೊನೆಗೆ ಬ್ರಾಹ್ಮಣಸಾಹಿತ್ಯ. ಈ ನಾಡಿನಲ್ಲಿ ಇದೇ ಕಾಲಕ್ರಮದಲ್ಲಿ ಹಸ್ತಪ್ರತಿಗಳು ಹುಟ್ಟಿ ಬೆಳೆದುಬಂದುದು ಸಹಜ.

ಜೈನಕವಿಗಳು ಸಾಮಾನ್ಯವಾಗಿ ರಾಜಾಶ್ರಯದಲ್ಲಿ ಬೆಳೆದರು. ಪ್ರಾಚೀನ ಪ್ರಮುಖ ರಾಜಮನೆತನಗಳು ಉತ್ತರ ಕರ್ನಾಟಕಕ್ಕೆ ಸಂಬಂಧಿಸಿದುವು. ಹೀಗಾಗಿ ನಮ್ಮ ಹಸ್ತಪ್ರತಿಗಳು ಉತ್ತರ ಕರ್ನಾಟಕದಲ್ಲಿಯೇ ಮೊದಲು ವಿಪುಲ ಸಂಖ್ಯೆಯಲ್ಲಿ ಬೆಳೆದಿರಬೇಕು. ಆಮೇಲೆ ಬಂದ ವೀರಶೈವರ, ಇನ್ನೂ ಆಮೇಲೆ ಬಂದ ಬ್ರಾಹ್ಮಣರ ಚಟುವಟಿಕೆಗಳು ಉತ್ತರಕರ್ನಾಟಕದ ಕೊಡುಗೆಗಳೇ ಆಗಿವೆ. ಈ ಮೂರೂ ಧರ್ಮ ಗಳಿಗೆ ಸಂಬಂಧಪಟ್ಟ ಹಸ್ತಪ್ರತಿಗಳು ಮೊದಲು ಇಲ್ಲಿಯೇ ಕಣ್ಣು ತೆರೆದವೆಂದು ಇದರಿಂದ ತಿಳಿದುಬರುತ್ತದೆ.

ಉತ್ತರದಲ್ಲಿ ವೀರಶೈವ ತಲೆಯೆತ್ತುತ್ತಲೇ, ೧೨ನೆಯ ಶತಮಾನದ ಹೊತ್ತಿಗೆ ಹೊಯ್ಸಳರ ದಂಡನಾಯಕರಾದ ಗಂಗ, ಹುಳ್ಳ, ಭರತ ಮೊದಲಾದವರ ಆಶ್ರಯ

ಬಯಸಿ ಜೈನರು ದಕ್ಷಿಣಕರ್ನಾಟಕಕ್ಕೆ ಹೋದರು. ಬಳಿಕ ಕರಾವಳಿ ತೀರದ ಸಾಂತರಸರು-ಭೈರಸರನ್ನು, ಕೊಲ್ಲಾಪುರದ ಶಿಲಾಹಾರರನ್ನು ಆಶ್ರಯಿಸಲು ತೆರಳಿದರು. ಇದರಿಂದಾಗಿ ಜೈನಹಸ್ತಪ್ರತಿಗಳು ಉತ್ತರಕರ್ನಾಟಕದಿಂದ ದಕ್ಷಿಣಕರ್ನಾಟಕಕ್ಕೆ, ಆಮೇಲೆ ಪಶ್ಚಿಮಕರ್ನಾಟಕಕ್ಕೆ ವಲಸೆ ಹೋಗಿರಬಹುದು. ಇಂದಿಗೂ ಬೆಳ್ಗೊಳ ಹುಂಬಚ, ಕಾರ್ಕಳ, ಮೂಡಬಿದಿರೆ, ಕೊಲ್ಲಾಪುರ ಮೊದಲಾದ ಕೇಂದ್ರಗಳಲ್ಲಿ ಜೈನ ಹಸ್ತಪ್ರತಿಗಳು ವಿಪುಲಸಂಖ್ಯೆಯಲ್ಲಿ ಸಿಗುತ್ತಿರುವುದು ಇದಕ್ಕೆ ನಿದರ್ಶನವೆನಿಸಿದೆ.

ವಚನಕಾರರು, ಹರಿಹರಾದಿ ಕವಿಗಳು ಕಾರಣವಾಗಿ ವೀರಶೈವಹಸ್ತಪ್ರತಿಗಳು ಉತ್ತರಕರ್ನಾಟಕದಲ್ಲಿ ಬೆಳೆದುಬಂದವು. ಮುಂದೆ ಮುಸಲ್ಮಾನರ ದಾಳಿ, ವೈಷ್ಣವರಾದ ಸಾಳ್ವ-ತುಳು ಅರಸರ ಅಧಿಕಾರ ಕಾರಣವಾಗಿ ಇವರ ಸಾಹಿತ್ಯಕ ಚಟುವಟಿಕೆ ದಕ್ಷಿಣದ ಗುಮ್ಮಳಾಪುರ, ಗುಬ್ಬಿ, ಎಡೆಯೂರುಗಳಿಗೆ ನಡೆಯಿತು. ಈಗ ಸಹಜವಾಗಿಯೇ ವೀರಶೈವ ಹಸ್ತಪ್ರತಿಗಳು ಉತ್ತರಕರ್ನಾಟಕದಿಂದ ದಕ್ಷಿಣಕರ್ನಾಟಕಕ್ಕೆ ವಲಸೆಹೋದವು. ವಚನಸಾಹಿತ್ಯದ ಸೃಷ್ಟಿಕಾರ್ಯ ಉತ್ತರಕರ್ನಾಟಕದಲ್ಲಿ ಜರುಗಿದರೆ, ಸಂಗ್ರಹ-ಸಂಕಲನ-ಸಂಪಾದನ ಕಾರ್ಯಗಳೆಲ್ಲ ದಕ್ಷಿಣಕರ್ನಾಟಕದಲ್ಲಿ ಜರುಗಿದುದು ಈ ಕಾರಣಕ್ಕಾಗಿ. ಹೀಗೆ ಉತ್ತರ ಕರ್ನಾಟಕದ ಮೇಲಿನ ತುದಿಯಲ್ಲಿರುವ ಕಲ್ಯಾಣ, ಕೆಳತುದಿಯಲ್ಲಿರುವ ಗುಮ್ಮಳಾಪುರ-ಗುಬ್ಬಿ-ಎಡೆಯೂರುಗಳ ವರೆಗೆ ವೀರಶೈವರು ಉದ್ದಕ್ಕೂ ವ್ಯಾಪಿಸಿದ ಕಾರಣ, ಇವರ ಹಸ್ತಪ್ರತಿಗಳು ಕರ್ನಾಟಕದ ಎಲ್ಲ ಭಾಗಗಳಲ್ಲಿ ಹುಟ್ಟಿಬೆಳೆದವು.

ಬ್ರಾಹ್ಮಣಸಾಹಿತ್ಯದ ಪ್ರಮುಖ ಪ್ರಕಾರವಾದ ದಾಸಸಾಹಿತ್ಯ ಹಂಪೆಯ ಸುತ್ತುಮುತ್ತ ಹುಟ್ಟಿದ ಕಾರಣ, ಆ ಹಸ್ತಪ್ರತಿಗಳು ಅಲ್ಲಿ ವಿಶೇಷ ಪ್ರಮಾಣದಿಂದ ಬೆಳೆದುಬಂದವು. ಮುಂದೆ ಸಾಳ್ವ, ತುಳು ಅರಸರ ಅವನತಿಯಿಂದಾಗಿ ದಾಸ ಆಂದೋಲನ ಹಂಪೆಯಿಂದ ರಾಯಚೂರು ಪ್ರದೇಶದ ಪಾಳೇಗಾರರ ಆಶ್ರಯಕ್ಕೆ ಹೋಗುವಲ್ಲಿ, ಕೀರ್ತನೆಗಳ ಸೃಷ್ಟಿಕಾರ್ಯವೂ ಅಲ್ಲಿಗೆ ವರ್ಗಾವಣೆ ಹೊಂದಿತು. ಕೀರ್ತನ ಸಾಹಿತ್ಯದ ಹಸ್ತಪ್ರತಿಗಳು ಇಲ್ಲಿ ವಿಪುಲಪ್ರಮಾಣದಲ್ಲಿ ಸಿಗುವುದು ಈ ಕಾರಣಕ್ಕಾಗಿ.

ಕರ್ನಾಟಕದ ಇನ್ನೊಂದು ಮತವೆಂದರೆ ೧೨ನೆಯ ಶತಮಾನದಲ್ಲಿ ಇಲ್ಲಿ ಕಾಣಿಸಿಕೊಂಡ ಶ್ರೀವೈಷ್ಣವ, ನಾಲ್ಕುನೂರು ವರ್ಷದಷ್ಟು ತಡವಾಗಿ, ಅಂದರೆ ೧೭ನೆಯ ಶತಮಾನದಲ್ಲಿ ಮೈಸೂರು ಅರಸರ ಆಶ್ರಯ ಸಿಗುತ್ತಲೇ ಆ ಪ್ರದೇಶದಲ್ಲಿ ಇವರ ಸಾಹಿತ್ಯಸೃಷ್ಟಿ, ಹಸ್ತಪ್ರತಿ ಉತ್ಪಾದನಾಕಾರ್ಯಗಳು ಕಣ್ಣುತೆರೆದವು. ಇದರ ಫಲವಾಗಿ ಮೇಲುಕೋಟೆ ಮೊದಲಾದ ಕೇಂದ್ರಗಳಲ್ಲಿ ಸಂಸ್ಕೃತ, ತಮಿಳು, ಹಸ್ತಪ್ರತಿಗಳು ಸಂಗ್ರಹಿತವಾದವು.

ಹೀಗೆ ಕರ್ನಾಟಕದಲ್ಲಿ ಹಸ್ತಪ್ರತಿಗಳ ಐತಿಹಾಸಿಕ ಬೆಳವಣಿಗೆ, ಭೌಗೋಲಿಕ ಪ್ರಸಾರ ಚಟುವಟಿಕೆ, ಹಸ್ತಪ್ರತಿ ಸೃಷ್ಟಿಕಾರ್ಯದ ಸಂಘಟನೆ-ವಿಘಟನೆಗಳು ಕಂಡು ಬರುತ್ತವೆ.

## ಪ್ರಾಚೀನ ಹಸ್ತಪ್ರತಿಭಾಂಡಾರಗಳು:

ಕನ್ನಡ ಹಸ್ತಪ್ರತಿಗಳನ್ನು ಅಲ್ಲಲ್ಲಿ ಚದುರಿಹೋದ "ಅರಕ್ಷಿತ ಹಸ್ತಪ್ರತಿಗಳು", ಅಧ್ಯಯನ-ಧರ್ಮಪ್ರಸಾರಗಳ ಉದ್ದೇಶಕ್ಕಾಗಿ ಶೇಖರಿಸಲ್ಪಟ್ಟ "ಸಂಗ್ರಹಿತ ಹಸ್ತಪ್ರತಿಗಳು" ಎಂದು ವರ್ಗೀಕರಿಸಬಹುದು. ಇವುಗಳಲ್ಲಿ ಸಂಗ್ರಹಿತ ಹಸ್ತಪ್ರತಿ ಭಾಂಡಾರಗಳು ಸಾರ್ವಜನಿಕ ಗ್ರಂಥಾಲಯಗಳಂತೆ ಕೆಲಸ ಮಾಡಿದವು.

ಈ ಮೊದಲು ತಿಳಿಸಿದ ಮೇರೆಗೆ ಬ್ರಾಹ್ಮಣರು ಶೂದ್ರಭಾಷೆಯೆನಿಸಿದ ಕನ್ನಡದ ಹಸ್ತಪ್ರತಿಗಳನ್ನು ಅಷ್ಟಾಗಿ ಸಂಗ್ರಹಿಸಲೇ ಇಲ್ಲ. ಹೀಗಾಗಿ ಪ್ರಾಚೀನ ಕರ್ನಾಟಕದ ಕನ್ನಡ ಹಸ್ತಪ್ರತಿಭಾಂಡಾರಗಳೆಂದರೆ ಜೈನ-ವೀರಶೈವ ಭಾಂಡಾರಗಳೇ ಆಗಿದ್ದು, ಅಂಥ ಕೆಲವು ಪ್ರಾಚೀನ ಕೇಂದ್ರಗಳನ್ನು ಇಲ್ಲಿ ಪರಿಚಯಿಸಬಹುದು.

**ಜೈನ ಹಸ್ತಪ್ರತಿ ಭಾಂಡಾರಗಳು :** ಶ್ರವಣಬೆಳ್ಗೊಳ ಭಾರತಪ್ರಸಿದ್ಧಿಯ ಒಂದು ಜೈನಕೇಂದ್ರ. ಭದ್ರಬಾಹುಮುನಿಯು ಚಂದ್ರಗುಪ್ತನೊಂದಿಗೆ ಇಲ್ಲಿಗೆ ಬಂದುದು, ಚಾವುಂಡರಾಯ ಇಲ್ಲಿ ಗೊಮ್ಮಟೇಶ ವಿಗ್ರಹ ನಿಲ್ಲಿಸಿದುದು ಬಹು ಮುಖ್ಯವಾದ ಎರಡು ಘಟನೆಗಳು. ಚಾವುಂಡರಾಯನ ಗುರು ನೇಮಿಚಂದ್ರಭಟ್ಟಾರಕರು ಇಲ್ಲಿ ಸ್ಥಾಪಿಸಿದ ಜೈನಮಠದಲ್ಲಿ ಹಸ್ತಪ್ರತಿಭಾಂಡಾರವನ್ನು ಮೊದಲಿನಿಂದಲೂ ಬೆಳೆಸಿ ಕೊಂಡುಬರಲಾಗಿದೆ. ಭಾಷಾದೃಷ್ಟಿಯಿಂದ ಕನ್ನಡಕೃತಿಗಳಿಗೆ ಅವಕಾಶ ಅಷ್ಟಾಗಿ ಸಿಕ್ಕಿಲ್ಲ ವೆಂಬಂತೆ ಇಲ್ಲಿ ಸಂಸ್ಕೃತ, ಪ್ರಾಕೃತ ಕೃತಿಗಳು ಅಧಿಕ, ಇದು ಧಾರ್ಮಿಕ ಕೇಂದ್ರ ವಾಗಿರುವುದೇ ಇದಕ್ಕೆ ಕಾರಣವೆಂದು ತೋರುತ್ತಿದ್ದು, ಧರ್ಮಾಧಿಕಾರಿಗಳ ಮನೋ ಧರ್ಮವನ್ನೂ ಸೂಚಿಸುತ್ತದೆ. ಇವುಗಳಲ್ಲಿಯೇ ಸಂಸ್ಕೃತ, ಪ್ರಾಕೃತ ಕೃತಿಗಳಿಗೆ ಬರೆದ ಕನ್ನಡ ಟೀಕೆಗಳು ವಿಪುಲವಾಗಿದ್ದು ಇದು ಜನಸಾಮಾನ್ಯರನ್ನು ದೃಷ್ಟಿಯಲ್ಲಿಟ್ಟು ಕೊಂಡುದರ ನಿದರ್ಶನವಾಗಿದೆ. ಚಾವುಂಡರಾಯ ಪುರಾಣ, ಅಗ್ಗಳನ ಚಂದ್ರಪ್ರಭ ಪುರಾಣ, ನಯಸೇನನ ಧರ್ಮಾಮೃತ, ಪೊನ್ನನ ಶಾಂತಿಪುರಾಣ, ಪಾರ್ಶ್ವಪಂಡಿತನ ಪಾರ್ಶ್ವನಾಥಪುರಾಣ, ಬ್ರಹ್ಮಶಿವನ ಸಮಯ ಪರೀಕ್ಷೆ, ವೃತ್ತವಿಲಾಸನ ಧರ್ಮ ಪರೀಕ್ಷೆ, ನಾಗರಾಜನ ಪುಣ್ಯಾಶ್ರವ ಕಥಾಕೋಶ, ರತ್ನಾಕರವರ್ಣಿಯ ಭರತೇಶವೈಭವ, ನಾಗಚಂದ್ರನ ಪಂಪರಾಮಾಯಣ, ಅಂಡಯ್ಯನ ಕಬ್ಬಿಗರ ಕಾವ್ಯ – ಮೊದಲಾದ ಕೃತಿಗಳು ಇಲ್ಲಿವೆ. ಸಂಸ್ಕೃತ ವಾದಿರಾಜ ಸೂರಿ, ದೇವವರ್ಣಿಗಳ ಯಶೋಧರ ಚರಿತೆಯ ಹಸ್ತಪ್ರತಿಗಳಿವೆಯೇ ಹೊರತು ಜನ್ನನ ಯಶೋಧರ ಚರಿತೆ ಇಲ್ಲ. ನೇಮಿಜಿನೇಶನ ಸಂಗತಿ, ಧರ್ಮಾಮೃತ ಹಲವು ಹತ್ತು ಪ್ರತಿಗಳಲ್ಲಿ ಸಿಗುತ್ತವೆ. ಶಾಕಟಾಯನ, ಕೌಮಾರ ಮೊದಲಾದ ಸಂಸ್ಕೃತ ವ್ಯಾಕರಣ ಗ್ರಂಥಗಳಿವೆ. ಕನ್ನಡದ ಪ್ರಸಿದ್ಧ ವ್ಯಾಕರಣವಾದ ಶಬ್ದಮಣಿದರ್ಪಣ ಇದ್ದಂತಿಲ್ಲ. ಇಲ್ಲಿ ಒಟ್ಟು ೫೮೪ ಪ್ರತಿ ಗಳಿದ್ದು, ಶ್ರವಣಬೆಳಗೊಳದ ಕೀರ್ತಿಗೆ ತಕ್ಕ ಸಂಖ್ಯೆಯೂ ಇವಲ್ಲ. ಇಲ್ಲಿ ತಾಳೆಪ್ರತಿ ಗಳು ನೂರಕ್ಕೆ ೯೫ ರಷ್ಟು, ಕಾಗದ ಪ್ರತಿ ಕಡಿಮೆ. ಬಹಳೆಂದರೆ ೧೪ನೆಯ

ಶತಮಾನದ ತಾಳೆಪ್ರತಿಯೇ ಪ್ರಾಚೀನವಾದುದು. ಇಲ್ಲಿ ಗ್ರಂಥದಾನದಿಂದ ಬಂದುವು, ಸ್ವತಃ ಮಠದವರೇ ಬರೆಯಿಸಿಕೊಂಡವು, ಆಕಸ್ಮಿಕವಾಗಿ ಸ್ವಾಮಿಗಳ ಕೈಗೆ ಬಂದುವು–ಹೀಗೆ ಸಂಗ್ರಹಗೊಂಡ ಹಸ್ತಪ್ರತಿಗಳಿವೆ. ಈ ಕಾರಣಗಳಿಂದಾಗಿ ಶ್ರವಣಬೆಳಗೊಳದಲ್ಲಿಯೇ ಬರೆದುವಲ್ಲದೆ, ದೂರದ ತೋವಿನಕೆರೆ, ಜಮರೆ, ಅಮ್ಮಯ್ಯನಭಾವಿ, ತೇರದಾಳಗಳಿಂದ ಬಂದ ಹಸ್ತಪ್ರತಿಗಳು ಇಲ್ಲಿವೆ. ಈ ಹಸ್ತ ಪ್ರತಿಗಳ ಸೂಚಿಯೊಂದು ದೇವಕುಮಾರಶಾಸ್ತ್ರಿ ಅವರಿಂದ ರಚಿತವಾಗಿ, 'ಶ್ರವಣ ಬೆಳಗೊಳ ಶ್ರೀ ಜೈನಮಠದ ತಾಡಪತ್ರೀಯ ಗ್ರಂಥಸೂಚಿ' ಹೆಸರಿನಿಂದ ಪ್ರಕಟ ವಾಗಿದೆ (೧೯೮೦).

ಜೈನಹಸ್ತಪ್ರತಿಗಳ ದೃಷ್ಟಿಯಿಂದ ಮೂಡಬಿದಿರೆ ಒಂದು ಅಪರೂಪದ ಊರು. ಮಠ–ಬಸದಿಗಳಲ್ಲಿ, ವ್ಯಕ್ತಿವಶದಲ್ಲಿ ನೂರಾರು ಜೈನಹಸ್ತಪ್ರತಿಗಳಿವೆ. ಇವುಗಳಲ್ಲಿ ಮೂಡಬಿದಿರೆಯ 'ಜೈನಮಠದ ಹಸ್ತಪ್ರತಿ ಭಾಂಡಾರ' ತುಂಬ ಮಹತ್ವದ್ದಾಗಿದೆ. ಕನ್ನಡ, ಸಂಸ್ಕೃತ, ಪ್ರಾಕೃತ ಭಾಷೆಯ ವಿಪುಲ ಗ್ರಂಥಗಳನ್ನು ಹೊಂದಿರುವ ಈ ಮಠದಲ್ಲಿ ಪ್ರಾಚೀನಕಾಲದಿಂದಲೂ ಹಸ್ತಪ್ರತಿಗಳನ್ನು ಸಂಗ್ರಹಿಸುತ್ತ ಬರಲಾಗಿದ್ದು, ಈ ಹಿಂದಿನ ಸ್ವಾಮೀಜಿಯವರ ಕಾಲದಲ್ಲಿ ಈ ಸಂಪತ್ತು ವಿಶೇಷ ವರ್ಧಿಸಿತೆಂದು ತಿಳಿದುಬರುತ್ತದೆ. ಪ್ರಕಟಿತ ಕನ್ನಡ ಪ್ರಾಂತೀಯ ತಾಡಪತ್ರೀಯ ಗ್ರಂಥ ಸೂಚಿಯ ಪ್ರಕಾರ ಇಲ್ಲಿ ಸಿದ್ಧಾಂತ ೧೬೪, ಅಧ್ಯಾತ್ಮ ೧೧೯, ಧರ್ಮ ೪೭೮, ಯೋಗಶಾಸ್ತ್ರ ೧೬, ಪ್ರತಿಷ್ಠಾ ೨೪, ವ್ರತವಿಧಾನ ೭೫, ನ್ಯಾಯ ೧೬೦, ವ್ಯಾಕರಣ ೧೧೨, ಕೋಶ ೫೪, ಕಾವ್ಯ ೧೬೧, ನಾಟಕ ೫, ಅಲಂಕಾರ ೩೦, ಛಂದಸ್ಸು ೧೭, ನೀತಿ–ಸುಭಾಷಿತ ೨೪, ಪುರಾಣ ೮೬, ಚರಿತ್ರ ೮೭, ಕಥಾ ೫೫, ಇತಿಹಾಸ ೯, ಆಯುರ್ವೇದ ೧೬, ಜ್ಯೋತಿಷ ೨೧, ಗಣಿತ ೯, ಮಂತ್ರಶಾಸ್ತ್ರ ೧೪, ಲೋಕವಿಜ್ಞಾನ ೨೫, ಶಿಲ್ಪಶಾಸ್ತ್ರ ೪, ಲಕ್ಷಣ ಕ್ರಿಯಾಕಾಂಡ ೬೯, ಸ್ತೋತ್ರ ೧೮೨, ಭಜನ–ಗೀತ ೧೫, ಪ್ರಕೀರ್ಣಕ ೨೦– ಹೀಗೆ ಒಟ್ಟು ೨೦೬೯ ಪ್ರತಿಗಳಿವೆ. ಈ ಕೇಂದ್ರಕ್ಕೆ 'ಜೈನಧರ್ಮಶಾಲಾ' ಎಂಬುದು ಪರ್ಯಾಯನಾಮ. ಕೆಲವು ವರ್ಷಗಳ ಹಿಂದೆ ಇಮ್ಮಡಿ ನಾಗವರ್ಮನ ವರ್ಧಮಾನ ಪುರಾಣ ಈ ಸಂಸ್ಥೆಯಲ್ಲಿ ಲಭ್ಯವಾಗಿದ್ದು, ಬಹುಶಃ ಜೈನಹಸ್ತಪ್ರತಿಭಾಂಡಾರಗಳ ಲ್ಲಿಯೇ ಇದು ದೊಡ್ಡದೆಂದು ಕಾಣುತ್ತದೆ.

ಮೂಡಬಿದಿರೆಯ ಇನ್ನೊಂದು ಜೈನ ಹಸ್ತಪ್ರತಿಭಾಂಡಾರ "ಶ್ರೀ ವೀರವಾಣೀ ವಿಲಾಸ ಜೈನಸಿದ್ಧಾಂತ ಭವನ". ಇದು ೧೯೩೩ರಲ್ಲಿ ಶ್ರೀ ಲೋಕನಾಥಶಾಸ್ತ್ರಿ ಅವರಿಂದ ಸ್ಥಾಪಿಸಲ್ಪಟ್ಟಿತು. ತಮ್ಮ ವಶದಲ್ಲಿದ್ದ ಹಸ್ತಪ್ರತಿಗಳನ್ನಲ್ಲದೆ, ಅನ್ಯರಿಂದ ಪಡೆದವು ಗಳನ್ನೂ ಸೇರಿಸಿ, ಈ ಸಂಸ್ಥೆಯನ್ನು ಶ್ರೀ ಶಾಸ್ತ್ರಿ ಅವರು ಬೆಳೆಸಿದ್ದಾರೆ. ಇಲ್ಲಿ ಸಿದ್ಧಾಂತ ೨೬, ಅಧ್ಯಾತ್ಮ ೧೩, ಧರ್ಮ ೭೮, ಪ್ರತಿಷ್ಠಾ ೧೬, ಪೂಜಾಪಾಠ– ಆರಾಧನಾ–ವ್ರತವಿಧಾನ ೪೩, ನ್ಯಾಯ ೧೩, ವ್ಯಾಕರಣ ೮, ಕಾವ್ಯ ೧೨, ಅಲಂಕಾರ,

ಛಂದಸ್ಸು ೨, ನೀತಿಸುಭಾಷಿತ ೪, ಪುರಾಣ ೨೮, ಚರಿತ್ರ ೬೫, ಕಥಾ ೨೯, ಇತಿಹಾಸ ೮, ಆಯುರ್ವೇದ ೨೩, ಜ್ಯೋತಿಷ ೩೧, ಗಣಿತ ೨, ಮಂತ್ರಶಾಸ್ತ್ರ ೨೩, ಲೋಕ ವಿಜ್ಞಾನ ೩, ಲಕ್ಷಣ ೪, ಕ್ರಿಯಾಕಾಂಡ ೧೭, ಸ್ತೋತ್ರ ೨೩, ಭಜನ-ಗೀತ ೧೩, ಪ್ರಕೀರ್ಣಕ ೧ –ಹೀಗೆ ಒಟ್ಟು ೪೮೭ ಪ್ರತಿಗಳಿವೆಯೆಂದು ಕನ್ನಡ ಪ್ರಾಂತೀಯ ತಾಡಪತ್ರೀಯ ಗ್ರಂಥಸೂಚಿಯಿಂದ ತಿಳಿದುಬರುತ್ತದೆ.

"ಸಿದ್ಧಾಂತಬಸದಿ" ಪರ್ಯಾಯನಾಮದ ಪಾರ್ಶ್ವಜಿನಬಸದಿಯಲ್ಲಿ ಗೊಮ್ಮಟಸಾರ (ಕರ್ಮಕಾಂಡ), ಗೊಮ್ಮಟಸಾರ(ಜೀವಕಾಂಡ), ಗೊಮ್ಮಟಸಾರಾದಿ ಸಂಗ್ರಹ, ತತ್ವಾರ್ಥರಾಜವಾರ್ತಿಕ, ಲಬ್ಧಸಾರ, ಸತ್ತಕಮ್ಮಪಂಜಿಅ, ಸಿದ್ಧಾಂತಾಲಾವ, ಕಾಶಿಕಾ ವೃತ್ತಿವಿವರಣ ಪಂಚಿಕಾ, ಶಾಕಟಾಯನ ಪ್ರಕ್ರಿಯಾಸಂಗ್ರಹ. ಉತ್ತರಪುರಾಣ, ತಿಲೋಯಸಾರ ಗ್ರಂಥಗಳಿವೆ. ಇವುಗಳಿಗೆ ತಿಲಕಪ್ರಾಯವಾಗಿ ಧವಲಾ, ಜಯಧವಲಾ ಮಹಾಧವಲಾ ಹೆಸರಿನ ಅಪೂರ್ವ ಸಿದ್ಧಾಂತಗ್ರಂಥಗಳಿವೆ. ಇಲ್ಲಿ ಪೂಜೆಗೊಳ್ಳುತ್ತಲಿರುವ ಈ ಸಿದ್ಧಾಂತಗ್ರಂಥಗಳು ಕಾರಣವಾಗಿ ಈ ಬಸದಿಗೆ 'ಸಿದ್ಧಾಂತಬಸದಿ' ಎಂಬ ಹೆಸರು ಬಳಕೆಯಲ್ಲಿದೆ. ಜೈನಮಠದ ಚಾರುಕೀರ್ತಿಸ್ವಾಮೀಜಿಯವರ ಪಟ್ಟಾಧಿಕಾರ ಇಲ್ಲಿ ಜರುಗುವದರಿಂದ 'ಗುರುಬಸದಿ'ಯೆಂದೂ ಇದನ್ನು ಕರೆಯುತ್ತಾರೆ. ಈ ಧವಲಾ ಗ್ರಂಥಗಳನ್ನು ತಾಳೆಗರಿಗಳ ಮೇಲೆ ಬಹುಶಃ ಅರಗಿನ ಮಸಿಯಿಂದ ಬರೆದಿರುವುದು ಒಂದು ಅಪವಾದಾತ್ಮಕ ವಿಶೇಷತೆಯೆಂದೇ ಹೇಳಬೇಕು. ಚಾವುಂಡರಾಯನ ಗುರು ನೇಮಿಚಂದ್ರಸಿದ್ಧಾಂತಿಗಳು "ಇಂತು ಮಹಾಧವಲಸಿದ್ಧಾಂತಮಂ ರಚಿಸಿರ್ದ ಪ್ರಸ್ತಕಗಳಂ ರಕ್ಷಿಸಲ್ ಸಿದ್ಧಾಂತಬಸ್ತಿಯಂ ಮಾಡಿಸಿ, ಅಲ್ಲಿ ಸ್ಥಾಪಿಸಿ, ಪೂಜಿಸುತ್ತಂ" ಎಂಬ ದೇವಚಂದ್ರನ ರಾಜಾವಳಿ ಕಥೆಯ ಹೇಳಿಕೆಯಿಂದ ಈ ಗ್ರಂಥಗಳು ೧೧ನೆಯ ಶತಮಾನದಲ್ಲಿ ಬೆಳ್ಗೊಳದಿಂದ ಮೂಡಬಿದರೆಗೆ ಸಾಗಿಸಲ್ಪಟ್ಟವೆಂದು ಊಹಿಸಬಹುದಾಗಿದೆ. ಆದರೆ ವೀರಸೇನಾಚಾರ್ಯರು ಧವಲಾಗ್ರಂಥವನ್ನು ಕರಹಾಡದಲ್ಲಿ ರಚಿಸಿ, ಕೊಲ್ಲಾಪುರದಲ್ಲಿ ಬಸದಿ ಕಟ್ಟಿಸಿ ರಕ್ಷಿಸಿದರೆಂದೂ ಇದಕ್ಕೆ "ಸಿದ್ಧಾಂತಬಸದಿ"ಯೆಂದು ಕರೆಯುತ್ತಿದ್ದರೆಂದೂ ಶ್ರೀ ಕುಂದಣಗಾರ ಅವರು ಹೇಳುತ್ತ, ಅಲ್ಲಿಯ ಮಂಗಳವಾರ ಪೇಟೆಯ ಬಸದಿಯೇ ಸಿದ್ಧಾಂತಬಸದಿಯೆಂದು ತಿಳಿಸುತ್ತಾರೆ. ಮುಂದೆ ಮುಸಲ್ಮಾನರ ದಾಳಿ ಸಂದರ್ಭದಲ್ಲಿ ಧವಲಗ್ರಂಥವನ್ನು ಮೂಡಬಿದರೆಗೆ ಸಾಗಿಸಿದರೆಂದು ಅಭಿಪ್ರಾಯ ಪಡುತ್ತಾರೆ. ಸ್ಥಳೀಯ ಜನವದಂತಿಯ ಪ್ರಕಾರ ಈ ಗ್ರಂಥಗಳು ಧಾರವಾಡ ಜಿಲ್ಲೆಯ ಬಂಕಾಪುರದಿಂದ ದೇವತಾ ಪ್ರತಿಮಾ ಸಹಿತ ಮೂಡಬಿದರೆಗೆ ಬಂದವೆಂದು ತಿಳಿದು ಬರುತ್ತವೆ. ಅರ್ಧಮಾಗಧಿ–ಸಂಸ್ಕೃತಭಾಷೆಯ ಈ ಕೃತಿಗಳು ಕನ್ನಡ ಲಿಪಿಯಲ್ಲಿವೆ.

'ಧವಲಾ'ಗ್ರಂಥದ ಮೂರು ತಾಳೆಪ್ರತಿಗಳಿದ್ದು, ಕ್ರಮವಾಗಿ ೧೪೧೭,೬೨೫, ೫೯೨ ಪತ್ರಗಳನ್ನೊಳಗೊಂಡಿವೆ. ಇವುಗಳಲ್ಲಿ ಒಂದು ಪ್ರತಿಯನ್ನು ಗಂಡರಾದಿತ್ಯ ಅರಸನ ಸೇನಾಪತಿ ಮಲ್ಲಿದೇವನು ಬರೆಯಿಸಿ ಸಿದ್ಧಾಂತಮುನಿ ಶ್ರೀ ಕುಲಭೂಷಣರಿಗೆ ಶಾಸ್ತ್ರದಾನವಾಗಿ ಕೊಟ್ಟಿದ್ದಾನೆ. ಇನ್ನೊಂದು ಪ್ರತಿಯ ದಾನಿ ಇತ್ಯಾದಿ ತಿಳಿದು

ಬರುವುದಿಲ್ಲ, ಮತ್ತೊಂದು ಪ್ರತಿಯನ್ನು ಮಂಡಲಿನಾಡ ಭುಜಬಲಿ ಗಂಗ ಪೆರ್ಮಾಡಿಯ ಅತ್ತೆ ದೇವಿಯಕ್ಕನು ಕೊಪಣತೀರ್ಥದ ಪ್ರಸಿದ್ಧ ದಾನಿ ಜಿನ್ನಪ್ಪನ ಮೂಲಕ ಪ್ರತಿ ಮಾಡಿಸಿ, ಬನ್ನಿಕೆರೆಯ ಉತ್ತುಂಗ ಜಿನಚೈತ್ಯಾಲಯದ ಸಿದ್ಧಾಂತಮುನಿ ಶ್ರೀ ಶುಭ ಚಂದ್ರದೇವರಿಗೆ ಶ್ರುತಪಂಚಮಿ ವ್ರತಸಂದರ್ಭದಲ್ಲಿ ಶಾಸ್ತ್ರದಾನವಾಗಿ ನೀಡಿದ್ದಾಳೆ. ಇತ್ತೀಚೆ ಈ ಮೂರು ಪ್ರತಿಗಳ ಕಾಗದ ಪ್ರತಿಗಳನ್ನು ಕ್ರಮವಾಗಿ ಮಿರಜದ ಗಣಪತಿ ಶಾಸ್ತ್ರಿ, ಮೂಡಬಿದರಿಯ ಕಲ್ಲುಬಸದಿ ಶಾಂತಪ್ಪ, ಮೂಡಬಿದರಿಯ ದೇವರಾಜಶೆಟ್ಟಿ ನಕಲುಮಾಡಿದ್ದಾರೆ.

'ಜಯಧವಲಾ' ಗ್ರಂಥದ ಒಂದು ತಾಳೆಪ್ರತಿ ಇದ್ದು, ೫೧೮ ಪತ್ರಗಳಿವೆ. ಚಿಕ್ಕಮಯ್ಯನ ಬಲ್ಲಿಸೆಟ್ಟಿ ಬರೆಯಿಸಿ ಸಿದ್ಧಾಂತಮುನಿ ಪದ್ಮಸೇನನಿಗೆ ಶಾಸ್ತ್ರದಾನ ಮಾಡಿದ್ದಾನೆ, ಲಿಪಿಕಾರ ಭುಜಬಲಿ ಅಣ್ಣ. ಇದರ ಮೂರು ಕಾಗದಪ್ರತಿಗಳನ್ನು ಮಿರಜದ ಗಣಪತಿಶಾಸ್ತ್ರಿ, ಮೂಡಬಿದರಿಯ ಕಲ್ಲು ಬಸದಿ ಶಾಂತಪ್ಪ, ಮೂಡಬಿದರಿಯ ದೇವರಾಜಶೆಟ್ಟಿ ಸಿದ್ಧಪಡಿಸಿದ್ದಾರೆ.

'ಮಹಾಧವಲಾ'(ಮಹಾಬಂಧ)ದ ಒಂದು ತಾಳೆಪ್ರತಿಯಿದ್ದು, ೧೭೬ ಪತ್ರಗಳಿವೆ. ಇದರ ಲಿಪಿಕಾರ ಉದಯಾದಿತ್ಯ. ರಾಜನಾದ ಶಾಂತಿಸೇನನ ಪತ್ನಿ ಮಲ್ಲಿಕಬ್ಬೆದೇವಿ ಬರೆಯಿಸಿ ಪಂಚಮಿವ್ರತ ಸಂದರ್ಭದಲ್ಲಿ ಸಿದ್ಧಾಂತಮುನಿ ಮಾಘನಂದಿಗೆ ಶಾಸ್ತ್ರದಾನ ಮಾಡಿದ್ದಾಳೆ. ಇತ್ತೀಚೆ ಇದರ ಇನ್ನೆರಡು ಕಾಗದ ಪ್ರತಿಗಳನ್ನು ಮೂಡಬಿದರಿಯ ಲೋಕನಾಥಶಾಸ್ತ್ರಿ, ಮೂಡಬಿದರಿಯ ನೇಮಿರಾಜಶೆಟ್ಟಿ ನಕಲು ಮಾಡಿದ್ದಾರೆ. ಸಂರಕ್ಷಣೆಯ ದೃಷ್ಟಿಯಿಂದ ಈ ಮೂರೂ ಕೃತಿಗಳ ಮೂಲಪ್ರತಿಗಳನ್ನು ಲ್ಯಾಮಿ ನೇಶನ್ ಮಾಡಿಸಿ ಇಡಲಾಗಿದೆ.

ಇವಲ್ಲದೆ ಮೂಡಬಿದರೆಯ ನೇಮಿರಾಜಶೆಟ್ಟಿ, ದೇವರಾಜಶೆಟ್ಟಿ, ಪದ್ಮನಾಭ ಶಾಸ್ತ್ರಿ. ಶಾಂತಿರಾಜ ಇಂದ್ರ ಹೊಸಬಸದಿ, ಜಿನರಾಜ ಇಂದ್ರ ಬೈಕಣತಿಕಾರಿ ಬಸದಿ, ಅನಂತರಾಜ ಇಂದ್ರ ಪಡುಬಸದಿ, ಚೌಟರ ಧರ್ಮಸಾಮ್ರಾಜ್ಯಯ್ಯ ಅವರ ವಶದಲ್ಲಿ ಕೆಲವು ಹಸ್ತಪ್ರತಿಗಳಿವೆ. ಮೇಲೆ ಹೇಳಿದ ಸಿದ್ಧಾಂತ ಬಸದಿ ಮತ್ತು ಈ ವ್ಯಕ್ತಿಗಳ ಭಂಡಾರ ಸೇರಿ ಸಿದ್ಧಾಂತ ೨೯, ಅಧ್ಯಾತ್ಮ ೧, ನ್ಯಾಯ ೪, ಧರ್ಮ ೧೯, ಯೋಗ ಶಾಸ್ತ್ರ ೩, ಪ್ರತಿಷ್ಠಾ ೧೦, ಆರಾಧನಾ-ಪೂಜಾಪಾಠ-ವ್ರತವಿಧಾನ ೧೨, ವ್ಯಾಕರಣ ೩. ಕೋಶ ೬, ಕಾವ್ಯ ೨, ಛಂದಸ್ಸು ೧. ನೀತಿ-ಸುಭಾಷಿತ ೫, ಪುರಾಣ ೪, ಚರಿತ್ರೆ ೧೪, ಕಥಾ ೫, ಇತಿಹಾಸ ೨; ಆಯುರ್ವೇದ ೨೬, ಜ್ಯೋತಿಷ ೧೫, ಗಣಿತ ೧, ಮಂತ್ರಶಾಸ್ತ್ರ ೫, ಲೋಕವಿಜ್ಞಾನ ೨, ಶಿಲ್ಪ ೧, ಲಕ್ಷಣ – ಸಮೀಕ್ಷಾ – ಪಾಕಶಾಸ್ತ್ರ ೩, ಕ್ರಿಯಾಕಾಂಡ ೩, ಸ್ತೋತ್ರ ೧೯, ಭಜನೆ–ಗೀತ ೬, ಪ್ರಕೀರ್ಣಕ ೩ –ಹೀಗೆ ಒಟ್ಟು ೨೧೪ ಪ್ರತಿಗಳಿವೆಯೆಂದು 'ಕನ್ನಡ ಪ್ರಾಂತೀಯ ತಾಡಪತ್ರೀಯ ಗ್ರಂಥ ಸೂಚಿ' ಕೃತಿಯ 'ಮೂಡಬಿದ್ರಿಕೇ ಅನ್ಯಗ್ರಂಥಭಾಂಡಾರ' ಪ್ರಕರಣದಲ್ಲಿ ಹೇಳಲಾಗಿದೆ.

ಕಾರ್ಕಳ ಜೈನಮಠದಲ್ಲಿ ಹಸ್ತಪ್ರತಿ ಭಾಂಡಾರವಿದ್ದು, ಪ್ರಕಟಿತ 'ಕನ್ನಡ ಪ್ರಾಂತೀಯ ತಾಡಪತ್ರೀಯ ಗ್ರಂಥಸೂಚಿ' ಪ್ರಕಾರ ಸಿದ್ಧಾಂತ ೧೯, ಆಧ್ಯಾತ್ಮ ೧, ಧರ್ಮ ೨೫, ಪ್ರತಿಷ್ಠಾ ೮, ಆರಾಧನಾ - ಪೂಜಾಪಾಠ - ವ್ರತವಿಧಾನ ೯, ನ್ಯಾಯದರ್ಶನ ೪, ವ್ಯಾಕರಣ ೧೦, ಕೋಶ ೮, ಕಾವ್ಯ ೧೮, ಅಲಂಕಾರ ೧, ನೀತಿ-ಸುಭಾಷಿತ ೩, ಪುರಾಣ ೧೦, ಚರಿತ್ರೆ ೨೦, ಕಥಾ ೧೧, ಇತಿಹಾಸ ೩, ಆಯುರ್ವೇದ ೫, ಜ್ಯೋತಿಷ ೫, ಗಣಿತ ೪, ಮಂತ್ರಶಾಸ್ತ್ರ ೧೦, ಲೋಕವಿಜ್ಞಾನ ೯, ಲಕ್ಷಣ—ಸಮೀಕ್ಷಾ—ಪಾಕಶಾಸ್ತ್ರ ೪, ಕ್ರಿಯಾಕಾಂಡ ೧೦, ಸ್ತೋತ್ರ ೧೦, ಭಜನಾ-ಗೀತ ೧೧, ಪ್ರಕೀರ್ಣಕ ೬-ಹೀಗೆ ಒಟ್ಟು ೨೨೪ ಪ್ರತಿಗಳು ಇಲ್ಲಿವೆ. ಈ ಭಾಂಡಾರದಲ್ಲಿ ಮೈಸೂರಿನ ನೇಮಿಸಾಗರ ವರ್ಣಿಯವರ 'ಲಲಿತನೇಮಿ ಗ್ರಂಥಸಂಗ್ರಹ'ದ ಕೆಲವು ಹಸ್ತಪ್ರತಿಗಳು ಸೇರಿಕೊಂಡಿರಬಹುದು.

ಇದೇ ಪ್ರದೇಶದ ಅಲಿಯೂರು ಗ್ರಾಮದ 'ಆದಿನಾಥ ಗ್ರಂಥಭಾಂಡಾರ' ದಲ್ಲಿಯೂ ಕೆಲವು ಹಸ್ತಪ್ರತಿಗಳಿವೆ. ಧರ್ಮ ೩, ಪ್ರತಿಷ್ಠಾ ೧, ಆರಾಧಾನ-ಪೂಜಾಪಾಠ ೧೧, ಕೋಶ ೧, ಕಾವ್ಯ ೧, ಪುರಾಣ ೧, ಚರಿತ್ರೆ ೩, ಕಥಾ ೨, ಜ್ಯೋತಿಷ್ಯ ೨, ಮಂತ್ರಶಾಸ್ತ್ರ ೧, ಲೋಕವಿಜ್ಞಾನ ೧, ಶಿಲ್ಪಶಾಸ್ತ್ರ ೧, ಸ್ತೋತ್ರ ೩, ಗೀತ-ಭಜನಾ ೩, ಪ್ರಕೀರ್ಣಕಾ ೨-ಹೀಗೆ ಒಟ್ಟು ೩೬ ಪ್ರತಿಗಳು ಈ ಭಂಡಾರದಲ್ಲಿವೆ ಯೆಂದು 'ಕನ್ನಡ ಪ್ರಾಂತೀಯ ತಾಡಪತ್ರೀಯ ಗ್ರಂಥಸೂಚಿ'ಯಿಂದ ತಿಳಿದು ಬರುತ್ತದೆ.

ಈ ವರೆಗೆ ವಿವೇಚಿಸಿದ ಮೂಡಬಿದರೆ ಪ್ರದೇಶದ ಭಾಂಡಾರಗಳಲ್ಲಿ ಅಗ್ಗಳನ ಚಂದ್ರಪ್ರಭ ಪುರಾಣ, ನಾಗಚಂದ್ರನ ಪಂಪರಾಮಾಯಣ, ನಾಗವರ್ಮನ ವರ್ಧಮಾನ ಪುರಾಣ, ಕರ್ಣಪಾರ್ಯನ ನೇಮಿನಾಥಪುರಾಣ, ಗುಣವರ್ಮನ ಪುಷ್ಪದಂತಪುರಾಣ, ಚಾವುಂಡರಾಯನ ಚಾವುಂಡರಾಯ ಪುರಾಣ, ಜನ್ನನ ಅನಂತನಾಥ ಪುರಾಣ, ದುರ್ಗಸಿಂಹನ ಪಂಚತಂತ್ರ, ನಯಸೇನನ ಧರ್ಮಾಮೃತ, ನಾಗರಾಜನ ಪುಣ್ಯಾಸ್ರವ ಕಥಾ, ನಾಗವರ್ಮನ ಅಭಿಧಾನರತ್ನಮಾಲಾ, ಕರ್ಣಾಟ ಭಾಷಾಭೂಷಣ ಮತ್ತು ಕಾವ್ಯಾವಲೋಕನ, ನಾನಾರ್ಥರತ್ನಾಕರ, ನೇಮಿಚಂದ್ರನ ಅರ್ಧನೇಮಿಪುರಾಣ, ಪಂಪನ ಆದಿಪುರಾಣ, ಪಾರ್ಶ್ವಪಂಡಿತನ ಪಾರ್ಶ್ವನಾಥಪುರಾಣ, ಪೊನ್ನನ ಜಿನಾಕ್ಷರ ಮಾಲೆ, ಬಂಧುವರ್ಮನ ಜೀವಸಂಬೋಧನೆ, ಬ್ರಹ್ಮಶಿವನ ಸಮಯಪರೀಕ್ಷೆ, ರತ್ನಾಕರನ ಭರತೇಶ ವೈಭವ ಮತ್ತು ಶತಕತ್ರಯ, ರನ್ನನ ಅಜಿತ ಪುರಾಣ, ರಾಜಾದಿತ್ಯನ ಗಣಿತವಿಲಾಸ - ಗಣಿತ ಸಂಗ್ರಹ, ಶಿವಕೋಟ್ಯಾಚಾರ್ಯನ ವಡ್ಡಾರಾಧನೆ ಇತ್ಯಾದಿ ಕನ್ನಡ ಕೃತಿಗಳಿವೆ.

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನ ಹೊಂಬುಜದ ಜೈನಮಠದಲ್ಲಿ ಧರ್ಮಪರೀಕ್ಷೆ, ಕರ್ಣಪಾರ್ಯನ ನೇಮಿನಾಥಪುರಾಣ, ಪುಣ್ಯಾಶ್ರವ, ಸಾಳ್ವಭಾರತ ಮೊದಲಾದ ಹಸ್ತಪ್ರತಿಗಳಿವೆ. ವರಾಂಗದ ಜೈನಮಠದಲ್ಲಿ ಆದಿಪುರಾಣ,

ಚಾವುಂಡರಾಯಪುರಾಣ, ಕರ್ಣಪಾರ್ಯನ ನೇಮಿನಾಥಪುರಾಣ, ಪಾರ್ಶ್ವನ ಪಾರ್ಶ್ವನಾಥ ಪುರಾಣ, ಮಲ್ಲಿನಾಥ ಪುರಾಣ, ವಡ್ಡಾರಾಧನೆ ಇತ್ಯಾದಿ ಹಸ್ತಪ್ರತಿಗಳಿವೆ.

ಕೊಲ್ಲಾಪುರದ ಲಕ್ಷ್ಮೀಸೇನಭಟ್ಟಾರಕ ಬಸದಿಯಲ್ಲಿ ಕನ್ನಡ-ಸಂಸ್ಕೃತ-ಪ್ರಾಕೃತ ಭಾಷೆಗಳಿಗೆ ಸಂಬಂಧಿಸಿದಂತೆ ಒಟ್ಟು ೬೪೬ ಕಟ್ಟುಗಳಿವೆ (ತಾಳೆಪ್ರತಿ ೩೫೭, ಕಾಗದ ಪ್ರತಿ ೨೮೯). ತಾಳೆಪ್ರತಿ, ಕಾಗದಪ್ರತಿಗಳಲ್ಲಿರುವ ಕನ್ನಡ ಕೃತಿಗಳ ಸಂಖ್ಯೆ-೮೫೧. ಇವುಗಳಲ್ಲಿ ಆದಿಪುರಾಣ, ಚಾವುಂಡರಾಯ ಪುರಾಣ, ಧರ್ಮಾಮೃತ, ವಡ್ಡಾರಾಧನೆ (ಉಪಸರ್ಗಕೇವಲಿಗಳ ಕಥೆ), ಭರತೇಶವೈಭವ, ಪಾರ್ಶ್ವನಾಥಪುರಾಣ, ಜೀವ ಸಂಬೋಧನೆ, ಯಶೋಧರಚರಿತೆ, ಪಂಪರಾಮಾಯಣ, ಲೀಲಾವತಿ, ಸುಕುಮಾರ ಚರಿತೆಯಂಥ ಕೃತಿಗಳಿವೆ. ಈ ವರೆಗೆ ಹೆಸರು ಸಹ ಗೊತ್ತಿರದ ವಜ್ರಭಟ್ಟನ ಪೀಠಾವಳಿ ಇಲ್ಲಿದೆ. ಕಾವ್ಯಶಾಸ್ತ್ರಗಳಲ್ಲಿ ರನ್ನನಿಘಂಟುವಿನ ಪೂರ್ಣಕೃತಿ, ಶಬ್ದಮಣಿದರ್ಪಣ. ಅಭಿನವನಿಘಂಟು, ಶಬ್ದಾನುಶಾಸನಗಳು ಇಲ್ಲಿವೆ. ಜೈನಶಾಸ್ತ್ರ, ವೈದ್ಯಶಾಸ್ತ್ರ, ಜ್ಯೋತಿಷಶಾಸ್ತ್ರಗಳ ಸಂಖ್ಯೆ ಗಮನಾರ್ಹವಾಗಿದೆ. ರಯಣಸಾರ, ಗೊಮ್ಮಟಸಾರ, ಸಮಯಸಾರ, ಪಂಚಾಸ್ತಿಕಾಯ ಮೊದಲಾದವುಗಳಿಗೆ ಬರೆದ ಕನ್ನಡ ಟೀಕಾಕೃತಿಗಳೂ ಸೋಂಪಿಯ ಕಥೆಗಳೂ ಜೈನಹಾಡುಗಳೂ ಸ್ವತಂತ್ರ ಅಧ್ಯಯನದಷ್ಟು ವಿಪುಲವಾಗಿದೆ. ಇಲ್ಲಿಯ ಪ್ರತಿಷ್ಠಾಕಲ್ಪದ ಹಸ್ತಪ್ರತಿಗಳಲ್ಲಿ ಸುಂದರ ವರ್ಣಚಿತ್ರಗಳನ್ನು ಕಾಣಬಹುದು. ಇಲ್ಲಿಯೂ ಶಾಸ್ತ್ರದಾನ, ಕರ್ಮನಿವಾರಣೆ ಮೊದಲಾದ ಉದ್ದೇಶಗಳಿಂದ ಬರೆದು ಒಪ್ಪಿಸಿದ ಪ್ರತಿಗಳಿವೆ. ಮಿಕ್ಕ ಜೈನಕೇಂದ್ರಗಳಿಗಿಂತ ಇಲ್ಲಿ ಅಭ್ಯಾಸಕ್ಕಾಗಿ ಬರೆಯಿಸಿ ಕೊಂಡ, ಬರೆದುಕೊಂಡ ಜೈನಮಹಿಳೆಯರ ಸಂಖ್ಯೆ ಹೆಚ್ಚು ಕಾಣುತ್ತದೆ. ಸ್ಥಳೀಯ ವ್ಯಕ್ತಿಗಳಲ್ಲದೆ ಉದಗಾವಿ, ಕೌಲಗಿ, ಸಮಡೋಳಿ, ಪೆನುಗೊಂಡೆ, ಶ್ರವಣಬೆಳ್ಗೊಳ, ಸದಲಗಿ, ಸಂಗೀತಪುರ, ಬೋಗೋದಿ, ಹಂಗರಿಕೆ, ಗುಮ್ಮಳಾಪುರ, ರತ್ನಗಿರಿ, ಹಂಗುಳ, ಬೇಲೂರುಗಳ ಭಕ್ತರು ಅರ್ಪಿಸಿದ ಹಸ್ತಪ್ರತಿಗಳಿವೆ. ಚಂದ್ರಸಾಗರವರ್ಣಿ, ತೆರಕಣಾಂಬಿ ಬೊಮ್ಮರಸರಂಥ ಕವಿಗಳೂ ಕೆಲವು ಪ್ರತಿಗಳನ್ನು ಬರೆದುಕೊಟ್ಟಿದ್ದಾರೆ. ಇಲ್ಲಿಯ ಹಸ್ತಪ್ರತಿಗಳ ಇನ್ನೊಂದು ವೈಶಿಷ್ಟ್ಯವೆಂದರೆ ಬಹಳಷ್ಟು ಪ್ರತಿಗಳಿಗೆ ನಕಲು ಮಾಡಿದ ಮಿತಿಗಳಿವೆ. ಬಹುಶಃ ಶಕವರ್ಷ ೧೪೫೧ರಲ್ಲಿ ನಕಲು ಮಾಡಿದ ಧರ್ಮಾ ಮೃತವೇ ಇಲ್ಲಿಯ ಪ್ರಾಚೀನತಮ ಹಸ್ತಪ್ರತಿಯಾಗಿದೆ.

ಒಟ್ಟು ಪ್ರತಿಗಳ ಮೇಲೆ ಕಣ್ಣಾಡಿಸಿದರೆ ಸಾಮಾನ್ಯರು ಓದಲು ಅನುಕೂಲವಾದ ಸ್ತೋತ್ರ, ಹಾಡು, ಮಂತ್ರ, ಸಾಂಗತ್ಯ, ಗದ್ಯ, ಜ್ಯೋತಿಷ, ಅಷ್ಟಕ, ಶತಕ, ಯಕ್ಷ ಗಾನ, ವ್ಯಾಖ್ಯಾನಗಳದೇ ಸಿಂಹಪಾಲು. ಈ ಭಾಂಡಾರದ ಸೂಚಿಯೊಂದು ದೇವ ನಾಗರಿಲಿಪಿಯಲ್ಲಿ ಬಹಳ ವರ್ಷಗಳ ಹಿಂದೆಯೇ ಪ್ರಕಟವಾಗಿದ್ದಿತು. 'ಇತ್ತೀಚೆ ಕೊಲ್ಲಾ ಪುರ ಶ್ರೀ ಲಕ್ಷ್ಮೀಸೇನಭಟ್ಟಾರಕ ಜೈನಬಸದಿಯ ಹಸ್ತಪ್ರತಿಸೂಚಿ' ಹೆಸರಿನ ಸೂಚಿ ಯೊಂದು ಕರ್ನಾಟಕ ವಿಶ್ವವಿದ್ಯಾಲಯದ ಮೂಲಕ ಬೆಳಕಿಗೆ ಬಂದಿದೆ.

ಇಂಥದೇ ಇನ್ನೊಂದು ಕೇಂದ್ರ ಮಹಾರಾಷ್ಟ್ರದ ಬಾಹುಬಲಿ ಆಶ್ರಮ. ಇಲ್ಲಿ ಕನ್ನಡ ಹಸ್ತಪ್ರತಿಗಳಲ್ಲದೆ ಸಂಸ್ಕೃತ, ಪ್ರಾಕೃತ ಕೃತಿಗಳಿಗೆ ಕನ್ನಡ ಟೀಕು ಬರೆದ ಕೃತಿ ಸಂಖ್ಯೆ ಅಧಿಕ–ತ್ರಿಪುರದಹನ ಸಾಂಗತ್ಯ, ವಡ್ಡಾರಾಧನೆ, ನಿಂಬಸಾಮಂತಚರಿತೆ ಮೊದಲಾದ ಹಸ್ತಪ್ರತಿಗಳು ಇಲ್ಲಿವೆ.

**ವೀರಶೈವ ಹಸ್ತಪ್ರತಿಭಾಂಡಾರಗಳು:** ವೀರಶೈವ ಹಸ್ತಪ್ರತಿಭಾಂಡಾರಗಳು ಇವುಗಳಿಗಿಂತ ವಿಪುಲಸಂಖ್ಯೆಯಲ್ಲಿವೆ. ಇದಕ್ಕೆ ಕಾರಣ ಕರ್ನಾಟಕದ ಜೈನರ ಧರ್ಮಭಾಷೆ ಪ್ರಾಕೃತ, ಮಾತೃಭಾಷೆ ಕನ್ನಡ. ಬ್ರಾಹ್ಮಣರ ಧರ್ಮಭಾಷೆ ಸಂಸ್ಕೃತ, ಮಾತೃಭಾಷೆ ಕನ್ನಡ. ಆದರೆ ವೀರಶೈವರ ಧರ್ಮಭಾಷೆಯೂ ಕನ್ನಡ, ಮಾತೃಭಾಷೆಯೂ ಕನ್ನಡವಾಗಿರುವುದು. ಹೀಗಾಗಿ ವೀರಶೈವಧರ್ಮ ತನ್ನ ಲೌಕಿಕ, ಧಾರ್ಮಿಕ ಎರಡೂ ಕ್ಷೇತ್ರಗಳ ಅಭಿವ್ಯಕ್ತಿಗಾಗಿ ಕನ್ನಡವನ್ನೇ ಅವಲಂಬಿಸಿತು. ಇದರಿಂದಾಗಿ ಕನ್ನಡ ಕೃತಿಗಳು, ಪ್ರತಿಗಳು ವಿಪುಲ ಪ್ರಮಾಣದಲ್ಲಿ ಹುಟ್ಟಿದವು. ಮೇಲಾಗಿ ಕರ್ನಾಟಕದ ತುಂಬ ವ್ಯಾಪಿಸಿದ ಈ ಜನಾಂಗ ಅಲ್ಲಲ್ಲಿ ಮಠಸಂಸ್ಥೆಯ ವ್ಯವಸ್ಥೆಯನ್ನು ರೂಪಿಸಿಕೊಂಡು ಬಂದಿರುವುದರಿಂದಲೂ ಸಣ್ಣಪುಟ್ಟ ಹಸ್ತಪ್ರತಿಭಾಂಡಾರಗಳು ವೀರಶೈವ ಮಠಗಳಲ್ಲಿ, ಅದರಲ್ಲಿಯೂ ವಿರಕ್ತ ಮಠಗಳಲ್ಲಿ ಬೆಳೆದುಬಂದವು. ಇವುಗಳಲ್ಲಿ ಮುಖ್ಯಭಾಂಡಾರಗಳನ್ನು ಇಲ್ಲಿ ಗಮನಿಸಬಹುದು.

ಚಿತ್ರದುರ್ಗದ ಬೃಹನ್ಮಠಕ್ಕೆ ವೀರಶೈವ ಮಠಪರಂಪರೆಯಲ್ಲಿ ವಿಶಿಷ್ಟಸ್ಥಾನವಿದೆ. ಇದಕ್ಕೆ ತಕ್ಕಂತೆ ವಿಪುಲಸಂಖ್ಯೆಯ ಗ್ರಂಥಗಳನ್ನುಳ್ಳ ಭಾಂಡಾರವನ್ನು ಅದು ಬೆಳೆಸಿಕೊಂಡು ಬಂದಿದೆ. ಇಲ್ಲಿ ಒಟ್ಟು ೭೧೫ ಹಸ್ತಪ್ರತಿ ಕಟ್ಟುಗಳಿವೆ. ಇವುಗಳ ಒಡಲಲ್ಲಿ ಕನ್ನಡ ಭಾಷೆಯ ಪ್ರತಿ ೩೬೦೦, ಸಂಸ್ಕೃತ ಭಾಷೆ ಕನ್ನಡಲಿಪಿಯ ಪ್ರತಿ ೧೧೩೬, ತೆಲುಗುಭಾಷೆ ಕನ್ನಡ ಲಿಪಿಯ ಪ್ರತಿ ೧, ಹಿಂದೀಭಾಷೆ ಕನ್ನಡಲಿಪಿಯ ಪ್ರತಿ ೧, ಸಂಸ್ಕೃತಭಾಷೆ ದೇವನಾಗರಿಲಿಪಿಯ ಪ್ರತಿ ೧೨ –ಹೀಗೆ ಒಟ್ಟು ೪೬೬೧ ಪ್ರತಿಗಳು ಅಡಕವಾಗಿವೆ. ರಾಘವಾಂಕನ ಹರಿಶ್ಚಂದ್ರಕಾವ್ಯ, ಸಿದ್ಧರಾಮಚಾರಿತ್ರ, ಮಗ್ಗೆಯ ಮಾಯಿದೇವರ ಕೃತಿಗಳು ಇಲ್ಲವೆಂಬುದನ್ನು ಬಿಟ್ಟರೆ ವಚನಸಾಹಿತ್ಯ, ಸ್ವರವಚನ ಸಾಹಿತ್ಯದಂಥ ಮೌಲಿಕ ವಾಙ್ಮಯ; ಗಿರಿಜಾಕಲ್ಯಾಣ, ಚನ್ನಬಸವಪುರಾಣ, ಬಸವ ಪುರಾಣ, ಪ್ರಭುಲಿಂಗಲೀಲೆ, ರಾಜಶೇಖರವಿಳಾಸ ಮೊದಲಾದ ವೀರಶೈವ ಮುಖ್ಯ–ಅಮುಖ್ಯಕೃತಿಗಳು ಇಲ್ಲಿ ಕಂಡುಬರುತ್ತವೆ. ಇತ್ತೀಚೆ 'ಶ್ರೀ ಜಗದ್ಗುರು ಮುರುಘ ರಾಜೇಂದ್ರಬೃಹನ್ಮಠದ ಹಸ್ತಪ್ರತಿಸೂಚಿ' ಹೆಸರಿನ ಗ್ರಂಥ ಪ್ರಕಟವಾಗಿದ್ದು, ಸಂಪಾದಕರಾದ ಶ್ರೀ ಎಸ್. ಶಿವಣ್ಣ ಅವರ ಪ್ರಕಾರ ಕವಿಚರಿತೆಯಲ್ಲಿ ಉಕ್ತರಾಗದ ಹೊಸ ಲೇಖಕರು ೬೫ ಜನ, ಕವಿಚರಿತೆಯಲ್ಲಿ ಉಕ್ತರಾಗಿರುವ ಲೇಖಕರ ಹೆಚ್ಚಿನ

ಕೃತಿಗಳು ೨೫, ಕವಿಚರಿತೆಯಲ್ಲಿ ಉಕ್ತವಾಗದ ಕೃತಿಗಳು ೮೨-ಎಂದು ತಿಳಿದು ಬರುತ್ತದೆ. ಇಲ್ಲಿಯ ಹಸ್ತಪ್ರತಿಗಳ ಆದ್ಯಂತ್ಯದಲ್ಲಿರುವ ಲಿಪಿಕಾರ ಪ್ರಶಸ್ತಿಯಿಂದ ಅನೇಕ ಚಾರಿತ್ರಿಕ ವಿಚಾರಗಳು ಬೆಳಕಿಗೆ ಬರುತ್ತಿರುವದು ವಿಶೇಷ ಸಂಗತಿಯಾಗಿದೆ.

ಗದುಗಿನ ಶ್ರೀ ಜಗದ್ಗುರು ತೋಂಟದಾರ್ಯಮಠದ ಹಸ್ತಪ್ರತಿಭಾಂಡಾರದಲ್ಲಿ ೪೩೩ ಓಲೆಯ ಹಾಗೂ ಕಾಗದದ ಕಟ್ಟುಗಳಿವೆ. ಇವುಗಳಲ್ಲಿ ಅಡಕವಾಗಿರುವ ಕನ್ನಡ ಪ್ರತಿಸಂಖ್ಯೆ ೧೧೪೧. ಸಂಸ್ಕೃತ, ತೆಲುಗು, ಮರಾಠಿ ಹಿಂದೀಭಾಷೆಯ ಆದರೆ ಕನ್ನಡ ಲಿಪಿಯ ಪ್ರತಿ ಸಂಖ್ಯೆ ೨೫೬. ಒಟ್ಟು ಪ್ರತಿ ಸಂಖ್ಯೆ ೧೩೯೭. ನಿಜಗುಣ ಶಿವಯೋಗಿಗಳ ಅನುಭವಸಾರ, ಕೈವಲ್ಯಕಲ್ಪವಲ್ಲರಿ, ಪರಮಾರ್ಥಗೀತೆ, ಪರಮಾರ್ಥಪ್ರಕಾಶಿಕೆ, ಪರಮಾನುಭವ ಬೋಧೆ ವಿವೇಕಚಿಂತಾಮಣಿಗಳಲ್ಲದೆ, ಪಾಲ್ಕುರಿಕೆ ಸೋಮನಾಥನ ಗಣಸಹಸ್ರನಾಮಾವಳಿ, ಹರಿಹರನ ಗಿರಿಜಾಕಲ್ಯಾಣ, ಚಾಮರಸನ ಪ್ರಭುಲಿಂಗಲೀಲೆ, ಅದ್ರಿಶಕವಿಯ ಪ್ರೌಢರಾಯನ ಕಾವ್ಯ, ಭೀಮಕವಿಯ ಬಸವಪುರಾಣ, ಮಲ್ಲಣಾರ್ಯನ ಭಾವಚಿಂತಾರತ್ನ, ಷಡಕ್ಷರದೇವನ ಶಬರಶಂಕರ ವಿಳಾಸ ಮೊದಲಾದ ಕಾವ್ಯಗಳು ಬಹು ಪ್ರತಿಯಲ್ಲಿವೆ. ಎಲ್ಲ ಮಠಗಳಂತೆ ಇಲ್ಲಿಯೂ ಕರಣ ಹಸಿಗೆ, ಮಿಶ್ರಾರ್ಪಣ, ಸೃಷ್ಟಿಯ ವಚನ ಪ್ರತಿಗಳೂ ವಚನಸಂಕಲನ ಪ್ರತಿಗಳೂ ಸಹಜವಾಗಿಯೇ ಬಹುಸಂಖ್ಯೆಯಲ್ಲಿವೆ. ತೋಂಟದ ಸಿದ್ಧೇಶ್ವರನ ಭಾವರತ್ನಾಭರಣ (ಸಿದ್ಧನಂಜೇಶ), ಸಿದ್ಧೇಶ್ವರ ಪುರಾಣ (ವಿರಕ್ತತೋಂಟದಾರ್ಯ)ಗಳಂಥ ಅಪರೂಪದ ಹಸ್ತಪ್ರತಿಗಳು ಇಲ್ಲಿವೆ. ಹಾಡುಗಳ ದೊಡ್ಡ ಸಂಗ್ರಹ ಇಲ್ಲಿ ಕಂಡುಬರುತ್ತಿದ್ದು, ಅದು ಪ್ರತ್ಯೇಕ ಅಭ್ಯಾಸದ ವಿಷಯವೆನಿಸಿದೆ. ಇತ್ತೀಚೆ ಈ ಭಾಂಡಾರದ ಸೂಚಿಯೊಂದು "ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದ ಹಸ್ತಪ್ರತಿ ಸೂಚಿ" ಹೆಸರಿನಿಂದ (ಸಂಪಾದಕರು: ಎಸ್ ಶಿವಣ್ಣ) ಪ್ರಕಟವಾಗಿದೆ. ವೀರಶೈವಮಠಗಳು ಪ್ರಕಟಿಸಿದ ಸೂಚಿಗಳಲ್ಲಿ ಇದು ಮೊದಲಿನದಾಗಿದೆ.

ಹುಬ್ಬಳ್ಳಿಯ ಶ್ರೀ ಜಗದ್ಗುರು ಮೂರುಸಾವಿರಮಠದ ಹಸ್ತಪ್ರತಿಭಾಂಡಾರ ದಲ್ಲಿ ತಾಳೆಗರಿ, ಕಾಗದ ಹಸ್ತಪ್ರತಿಗಳಿವೆ. ಭಾಷೆಯ ದೃಷ್ಟಿಯಿಂದ ಕನ್ನಡ ಹೆಚ್ಚು, ಸಂಸ್ಕೃತ ಕಡಿಮೆ. ಒಂದೆರಡು ತೆಲುಗುಹಸ್ತಪ್ರತಿಗಳೂ ಇಲ್ಲಿವೆ. ಪುರಾಣ, ವಚನ, ಗದ್ಯ, ಪದ್ಯ, ಧರ್ಮಶಾಸ್ತ್ರ, ಸಾಹಿತ್ಯಶಾಸ್ತ್ರ, ಲೋಕೋಪಕಾರಶಾಸ್ತ್ರ, ಯಕ್ಷಗಾನ ಇತ್ಯಾದಿ ರೂಪದ ಕೃತಿಗಳ ಭಾಂಡಾರವಿದು. ಕೆಲವು ಉದ್ಧರಣೆಯ ಕೃತಿಗಳೂ ಇಲ್ಲಿವೆ. ಈ ಭಾಂಡಾರದ ಒಟ್ಟು ಕಟ್ಟುಗಳ ಸಂಖ್ಯೆ ಸುಮಾರು ೨೨೪. 'ಶ್ರೀ ಜಗದ್ಗುರು ಮೂರುಸಾವಿರಮಠದ ವರ್ಣನಾತ್ಮಕ ಹಸ್ತಪ್ರತಿ ಸೂಚಿ' ಹೆಸರಿನ ಕೃತಿ ಪ್ರಕಟ ವಾಗಿದ್ದು, (ಸಂ: ಕೆಳದಿ ಗುಂಡಾಜೋಯಿಸ್) ಈ ಭಾಂಡಾರದ ಒಂದು ಸ್ಥೂಲ ಚಿತ್ರ ವನ್ನು ಇದು ಒದಗಿಸುತ್ತದೆ.

ನಮ್ಮ ಅನೇಕಜನ ಅರಸರು ಹಸ್ತಪ್ರತಿ ಭಾಂಡಾರಗಳನ್ನು ಅರಮನೆಯಲ್ಲಿ ಬೆಳೆಸಿಕೊಂಡು ಬಂದಿದ್ದರು. ಇವುಗಳಲ್ಲಿ ಮೈಸೂರು ಅರಮನೆ ಭಾಂಡಾರ ಮಾತ್ರ ಈಗಲೂ ಉಳಿದುಬಂದಿದೆ. ಈ ರಾಜರ ಶ್ರೀರಂಗಪಟ್ಟಣದ ಅರಮನೆಯಲ್ಲಿ ಮೊದಲಿ

ನಿಂದಲೂ ಹಸ್ತಪ್ರತಿಗಳನ್ನು ಬೆಳೆಸಿಕೊಂಡು ಬರಲಾಗಿದ್ದಿತು. ಟಿಪ್ಪು ಇಲ್ಲಿಯ ಅನೇಕ ಹಸ್ತಪ್ರತಿಗಳನ್ನು ನಾಶಮಾಡಿದನೆಂದು ಇತಿಹಾಸಕಾರರು ಹೇಳುತ್ತಾರೆ. ೧೭೯೯ರಲ್ಲಿ ರಾಜಧಾನಿ ಮೈಸೂರಿಗೆ ವರ್ಗಾಯಿಸಲ್ಪಟ್ಟು, ಬಳಿಕ ಬ್ರಿಟಿಷರ ಕೈವಶವಾಯಿತು. ವಿದ್ಯಾವಿನೋದಿಗಳಾಗಿದ್ದ ಮುಮ್ಮಡಿ ಕೃಷ್ಣರಾಜರು ಇಲ್ಲಿಯ ಹಸ್ತಪ್ರತಿಗಳನ್ನು ಬೆಳೆಸಿದರು. ನಾಲ್ಮಡಿ ಕೃಷ್ಣರಾಜ ಒಡೆಯರ ತಂಗಿಯ ಮದುವೆ ಸಂದರ್ಭದಲ್ಲಿ ಅರಮನೆ ಸುಟ್ಟು (೧೮೯೭), ಅಲ್ಲಿದ್ದ ಹಸ್ತಪ್ರತಿಭಾಂಡಾರವೂ ಕೆಲಮಟ್ಟಿಗೆ ಬೆಂಕಿ ಪಾಲಾಯಿತು. ಹೀಗಿದ್ದೂ ಇಲ್ಲಿ ಹಸ್ತಪ್ರತಿ ಸಂಗ್ರಹ ಉಳಿದು ಬೆಳೆದುಬಂದಿದೆ. ೧೯೧೮ರ ವೇಳೆಗೆ ೧೬೭೧, ೧೯೫೫–೬೦ರಲ್ಲಿ ೨೭೨೪ ಹಸ್ತಪ್ರತಿಗಳಿದ್ದವು. ಪಂಪ ಭಾರತದ ಪೂರ್ಣಪ್ರತಿ ಬಿ. ಎಲ್. ರೈಸ್ ಅವರಿಗೆ ಸಿಕ್ಕಿದ್ದು ಇಲ್ಲಿಯೇ. ಬಹುಕಾಲದ ಹಿಂದೆ ಇಲ್ಲಿಯ ಹಸ್ತಪ್ರತಿಗಳನ್ನು ಕುರಿತು "ಎ ಕ್ಲಾಸಿಫಾಯ್ಡ್ ಕೆಟಲಾಗ್ ಆಫ್ ಸಂಸ್ಕೃತ ಆ್ಯಂಡ ಕನ್ನಡ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಸರಸ್ವತೀ ಭಂಡಾರಮ್ (ಪ್ಯಾಲೇಸ್ ಸಂಸ್ಕೃತ ಲೈಬ್ರರಿ) ಆಫ್. ಎಚ್. ಎಚ್. ಮಹಾರಾಜಾ ಆಫ್ ಮೈಸೂರು, ಕಲೆಕ್ಸನ್ ಆಫ್ 1900–1905 " ಎಂಬ ಸೂಚಿ ಪ್ರಕಟವಾಗಿದೆ.

ಅರಮನೆಯ ವೈಯಕ್ತಿಕ ಭಾಂಡಾರವಲ್ಲದೆ ಅನೇಕ ವ್ಯಕ್ತಿಗಳ ವಶದಲ್ಲಿ ಗಣನೀಯ ಪ್ರಮಾಣದಲ್ಲಿ ಹಸ್ತಪ್ರತಿಗಳು ಸಿಗುತ್ತವೆ. ಬೆಳ್ಗೊಳದ ರಾಜೇಂದ್ರಕುಮಾರ, ಮೂಡಬಿದರೆಯ ನೇಮಿರಾಜಶೆಟ್ಟಿ, ದೇವರಾಜಶೆಟ್ಟಿ, ಪದ್ಮನಾಭಶಾಸ್ತ್ರಿ,ಶಾಂತಿರಾಜ ಇಂದ್ರ ಹೊಸಬಸದಿ, ಜಿನರಾಜಇಂದ್ರ ಬೈಕಣತಿ ಬಸದಿ, ಅನಂತರಾಜ ಇಂದ್ರ ಪಡುಬಸದಿ, ಚೌಟರ ಧರ್ಮಸಾಮ್ರಾಜ್ಯಯ್ಯ ಮೊದಲಾದವರ ವಶದಲ್ಲಿ ಹಸ್ತಪ್ರತಿಗಳಿದ್ದುದನ್ನು ಗಮನಿಸಬಹುದು,

## ಕನ್ನಡ ಹಸ್ತಪ್ರತಿಗಳ ವಿಷಯ ಸಂಪತ್ತು :

ಕನ್ನಡ ಸಾಹಿತ್ಯವನ್ನು ಅಜ್ಞಾತಯುಗ, ಜ್ಞಾತಯುಗವೆಂದು ವರ್ಗೀಕರಿಸಬಹುದಾಗಿದೆ. ಇದನ್ನು ಪಂಪಪೂರ್ವಯುಗ, ಪಂಪೋತ್ತರಯುಗವೆಂದೂ ಕರೆಯಬಹುದು. ಅಜ್ಞಾತಯುಗದ ಒಂದೂ ಕೃತಿ ಸಿಕ್ಕಿಲ್ಲ. ಆದರೆ ಆ ಹೊತ್ತಿಗಾಗಲೇ ಟೀಕೆ–ವ್ಯಾಖ್ಯಾನಯುಗ, ಭಾಷಾಂತರಯುಗಗಳೆಂಬ ಎರಡು ಘಟ್ಟಗಳು ಉರುಳಿ, ಗುಣವರ್ಮ ಮೊದಲಾದವರಿಂದ ಸೃಜನಶೀಲಭಾಷಾಂತರ, ರೂಪಾಂತರಯುಗ ತೆರೆದುಕೊಂಡಿದ್ದಿತು. ಟೀಕೆ–ವ್ಯಾಖ್ಯಾನಗಳಿಗೆ ಉದಾಹರಣೆಯಾಗಿ ಶ್ಯಾಮಕುಂದಾಚಾರ್ಯ, ತೊಂಬಳೂರಾಚಾರ್ಯರ ಉಭಯಸಿದ್ಧಾಂತ ವ್ಯಾಖ್ಯಾನ, ಅನಾಮಧೇಯನ ತತ್ವಾರ್ಥಸೂತ್ರವ್ಯಾಖ್ಯಾನಗಳೆಂಬ ಹೆಸರುಗಳು ಕೇಳಿ ಬರುತ್ತವೆಯೇ ಹೊರತು, ಹಸ್ತಪ್ರತಿಗಳು ಸಿಕ್ಕಿಲ್ಲ. ಆ ಮೇಲಿನ ಭಾಷಾಂತರ ಯುಗದಲ್ಲಿ ಕನ್ನಮಾರ್ಯನ ಕರ್ಣಾಟಮಾಲತೀಮಾಧವ, ಅಸಗನ ಕರ್ಣಾಟಕುಮಾರಸಂಭವಗಳು ಸೃಷ್ಟಿಯಾಗಿದ್ದ ಬಗ್ಗೆ ಸೂಚನೆ

ಗಳಿವೆಯೇ ಹೊರತು ಒಂದೂ ಪ್ರತಿ ಲಭ್ಯವಾಗಿಲ್ಲ. ಹೀಗಾಗಿ ಈ ಎರಡೂ ಘಟ್ಟಗಳ ಅನೇಕ ಟೀಕೆ-ವ್ಯಾಖ್ಯಾನಗಳು, ಭಾಷಾಂತರ ಕೃತಿಗಳು ನಾಶವಾಗಿ ಹೋದವೆಂದೇ ಹೇಳಬಹುದು.

ಮೂರನೆಯ ಘಟ್ಟದಲ್ಲಿ ಸೃಜನಶೀಲ ಭಾಷಾಂತರಕ್ಕೆ ಆಗಮಿಕ ಕಾವ್ಯ, ರೂಪಾಂತರಕ್ಕೆ ಲೌಕಿಕ ಕಾವ್ಯಗಳನ್ನು ಬರೆದ ಗುಣವರ್ಮಾದಿಗಳ ಕೃತಿಗಳು ಸಿಕ್ಕಿಲ್ಲವಾದುದರಿಂದ ಈ ಪ್ರಯೋಗದ ಆರಂಭ ದೆಸೆಯ ಹಸ್ತಪ್ರತಿಗಳು ನಾಶವಾದವೆಂದೇ ಹೇಳಬಹುದು. ಆದರೆ ಉತ್ತರಾರ್ಧದ ಪಂಪ-ಪೊನ್ನರ ಕೃತಿಗಳಿಂದಾಗಿ ಹಸ್ತಪ್ರತಿ ಲಭ್ಯತೆಯ ಶ್ರೀಕಾರ ನಮ್ಮಲ್ಲಿ ಪ್ರಾರಂಭವಾಯಿತು. ಇಲ್ಲಿಂದ ಮುಂದೆ ಲಭ್ಯವಾದ ಹಸ್ತಪ್ರತಿ ಕಟ್ಟುಗಳ ಸಂಖ್ಯೆ ಸುಮಾರು ೨೫ಸಾವಿರ. ಹುಡುಕಿದರೆ ಇನ್ನೂ ೧೫ ಸಾವಿರ ಸಿಗಬಹುದಾಗಿದೆ. ಈ ಸಂಪತ್ತು ಸಾಹಿತ್ಯಕೃತಿ, ಸಾಹಿತ್ಯಶಾಸ್ತ್ರಕೃತಿ, ಸಾಹಿತ್ಯೇತರ ಶಾಸ್ತ್ರಕೃತಿಗಳನ್ನು ಪ್ರತಿನಿಧಿಸುತ್ತದೆ.

ಸಾಹಿತ್ಯಕೃತಿಗಳು ಚಂಪೂ, ರಗಳೆ, ಷಟ್ಪದಿ, ಸಾಂಗತ್ಯ ಪ್ರಕಾರಗಳಲ್ಲಿ ಮೈದೋರಿವೆ. ಕರ್ಣಾಟಕ ಕಾದಂಬರಿ ಒಂದು ಪ್ರತಿ, ಗದಾಯುದ್ಧ ಒಂದೂವರೆ ಪ್ರತಿ, ಪಂಪಭಾರತ ಎರಡೂವರೆ ಪ್ರತಿಗಳು ಲಭಿಸಿವೆ. ಇಷ್ಟೂ ಲಭಿಸದಿದ್ದರೆ ೧೧ನೆಯ ಶತಮಾನದ ಸುವರ್ಣಯುಗವೇ ಅಜ್ಞಾತವಾಗುತ್ತಿದ್ದಿತು. ತಮ್ಮ ಶ್ರಮದ ಮೂಲಕ ಇವುಗಳನ್ನು ಉಳಿಸಿಕೊಟ್ಟ ನಮ್ಮ ಲಿಪಿಕಾರರಿಗೆ ಕೃತಜ್ಞತೆ ಹೇಳಲೇಬೇಕು. ಈ ಮಾರ್ಗದಲ್ಲಿ ಹುಟ್ಟಿದ, ನಾಗಚಂದ್ರ, ಹರಿಹರ, ರಾಘವಾಂಕ, ಚಾಮರಸ, ಕುಮಾರವ್ಯಾಸ, ರತ್ನಾಕರ, ನಂಜುಂಡ, ಲಕ್ಷ್ಮೀಶರ ಕೃತಿಯ ಪ್ರತಿಗಳು ಕನ್ನಡಿಗರ ಸೃಜನಶೀಲತೆಗೆ ಉದಾಹರಣೆಯಾಗಿ ನಿಂತಿವೆ. ಮತ್ತು ಸಾಹಿತ್ಯದ ಪ್ರಸರಣ ಕಾರ್ಯವನ್ನು ಪೂರೈಸಿವೆ. ಈ ಸಂಪತ್ತಿನ ಭಾಗವಾಗಿರುವ ಪುರಾಣ, ಚರಿತ್ರೆ, ಕಾವ್ಯ, ಕಥೆ ಇತ್ಯಾದಿಗಳು ಕನ್ನಡಿಗರ ಮನೋಧರ್ಮ ಮತ್ತು ಕಾವ್ಯಧರ್ಮಗಳನ್ನು ಪ್ರತಿನಿಧಿಸುತ್ತವೆ.

ಇವುಗಳನ್ನು ಬಿಟ್ಟರೆ ಸಾಹಿತ್ಯಶಾಸ್ತ್ರಗಳಾದ ಅಲಂಕಾರ, ಛಂದಸ್ಸು, ವ್ಯಾಕರಣ, ನಿಘಂಟುಗಳು ತಕ್ಕ ಪ್ರಮಾಣದಲ್ಲಿ ಹುಟ್ಟಿದ್ದು, ಇವೆಲ್ಲ ಸಾಮಾನ್ಯವಾಗಿ ಸಂಸ್ಕೃತ ಸಾಹಿತ್ಯಶಾಸ್ತ್ರಕೃತಿಗಳ ಅನುವಾದವೋ ಅನುಕರಣವೋ ಎನಿಸಿವೆ. ಹೀಗಿದ್ದೂ ಕವಿರಾಜಮಾರ್ಗ, ಶಬ್ದಮಣಿದರ್ಪಣದಂಥ ಕನ್ನಡದ ವೈಶಿಷ್ಟ್ಯಗಳನ್ನು ಮೈಗೂಡಿಸಿಕೊಂಡ ಕೃತಿಗಳನ್ನು ಇಲ್ಲಿ ಎತ್ತಿ ಹೇಳಬಹುದಾಗಿದೆ. ರನ್ನ ನಿಘಂಟು ಮೊದಲಾದುವು ಅಪರೂಪದ ಕನ್ನಡ ಪದಗಳನ್ನೂ, ಅರ್ಥಗಳನ್ನೂ ಉಳಿಸಿಕೊಡಲು ಪ್ರಯತ್ನ ಮಾಡಿವೆ.

ಸಾಹಿತ್ಯೇತರಶಾಸ್ತ್ರಗಳಲ್ಲಿ ಧಾರ್ಮಿಕ ಕೃತಿಗಳದೇ ಮೇಲುಗೈ. ಈ ದಿಕ್ಕಿನಲ್ಲಿ ಜೈನ, ವೀರಶೈವ, ಬ್ರಾಹ್ಮಣ ಧರ್ಮಗಳಿಗೆ ಸಂಬಂಧಿಸಿದ ನೂರಾರು ಅಲ್ಲ, ಸಾವಿರಾರು

ಕೃತಿಗಳೂ ಅವುಗಳ ಅನೇಕಾನೇಕ ಹಸ್ತಪ್ರತಿಗಳೂ ಹುಟ್ಟಿ, ಹಸ್ತಪ್ರತಿಭಾಂಡಾರ ತುಂಬಿ ತುಳುಕುವಂತೆ ಮಾಡಿವೆ. ವಚನಸಾಹಿತ್ಯವು ಈ ಕ್ಷೇತ್ರದ ಅನರ್ಘ್ಯ ನಿಧಿಯೆನಿಸಿದೆ. ಇವುಗಳ ಹಸ್ತಪ್ರತಿಗಳೂ ವಿಪುಲಪ್ರಮಾಣದಲ್ಲಿ ಸಿಗುತ್ತವೆ. ದಾಸರ ಕೀರ್ತನೆ, ಸರ್ವಜ್ಞನ ವಚನಗಳು ನೀತಿ ಪ್ರತಿಪಾದನ ಕೃತಿಗಳಾಗಿವೆ. ಈ ಕೃತಿಗಳನ್ನು ಬಿಟ್ಟರೆ ವೈದ್ಯಶಾಸ್ತ್ರ, (ಬಾಲವೈದ್ಯ, ನರವೈದ್ಯ, ಸ್ತ್ರೀವೈದ್ಯ, ಅಶ್ವವೈದ್ಯ, ಗೋವೈದ್ಯ) ಖಡ್ಗಶಾಸ್ತ್ರ, ಕೃಷಿಶಾಸ್ತ್ರ, ಪಾಕಶಾಸ್ತ್ರ, ಕಾಮಶಾಸ್ತ್ರ, ಶಿಲ್ಪಶಾಸ್ತ್ರ, ಗಣಿತಶಾಸ್ತ್ರ ಮೊದಲಾದ ಶಾಸ್ತ್ರಕೃತಿಗಳ ಹಲವು ಹಸ್ತಪ್ರತಿಗಳು ಸಿಗುತ್ತವೆ.

ಇಲ್ಲಿ ಗಮನಿಸಬೇಕಾದ ಇನ್ನೊಂದು ಸಂಗತಿಯೆಂದರೆ ಒಟ್ಟು ನಮ್ಮ ಪ್ರಾಚೀನ ಕೃತಿಗಳು ಒಂದಲ್ಲ ಒಂದು ರೀತಿಯಲ್ಲಿ ಸಂಸ್ಕೃತದ ಪ್ರಭಾವದಲ್ಲಿಯೇ ಬೆಳೆದುಬಂದಿವೆ. ಸಂಸ್ಕೃತಮೂಲ ಅಜ್ಞಾತವಾಗಿರುವ ದುರ್ಗಸಿಂಹನ ಪಂಚತಂತ್ರದಂತಹ ಕೃತಿಗಳಿಗೆ ಭಾರತೀಯ ಮಹತ್ವವಿದೆ. ಇದಲ್ಲದೆ ಸಂಸ್ಕೃತ, ಪ್ರಾಕೃತ ಕೃತಿಗಳಿಗೆ ಬರೆದ ಟೀಕೆ-ವ್ಯಾಖ್ಯಾನಗಳು ಸ್ವತಂತ್ರ ಅಭ್ಯಾಸದಷ್ಟು ಗಣ್ಯವಾಗಿವೆ. ಕನ್ನಡ ಹಸ್ತಪ್ರತಿಗಳಲ್ಲದೆ ಸಂಸ್ಕೃತ ಹಸ್ತಪ್ರತಿಗಳೂ ಗಮನ ಸೆಳೆಯುವ ಸಂಖ್ಯೆಯಲ್ಲಿವೆ. ಮೈಸೂರು ಪ್ರಾಚ್ಯ ಸಂಶೋಧನಸಂಸ್ಥೆಯಲ್ಲಿ ೩೦ ಸಾವಿರ ಸಂಸ್ಕೃತ ಕಟ್ಟುಗಳಿರುವುದನ್ನು ಇಲ್ಲಿ ನೆನೆಯಬಹುದು. ಜೈನಮಠಗಳಲ್ಲಿ ಪ್ರಾಕೃತ ಕಟ್ಟುಗಳಿದ್ದು, ಮೂಡಬಿದರಿಯಲ್ಲಿಯ ಧವಲಾ, ಜಯಧವಲಾ, ಮಹಾಧವಲಾಗಳಂತೂ ನಮ್ಮ ರಾಷ್ಟ್ರದ ಹೆಮ್ಮೆಯ ಹಸ್ತ ಪ್ರತಿಗಳಾಗಿವೆ.

ಈ ಹಸ್ತಪ್ರತಿಗಳಲ್ಲಿ ಬಿಡಿಸಲಾದ ಚಿತ್ರಕಲೆಯೂ ಅಪೂರ್ವಸಂಪತ್ತು ಎನಿಸಿದೆ. ಇದಕ್ಕೆ ಮೇಲೆ ಹೇಳಿದ ಧವಲಾಕೃತಿ, ಪ್ರತಿಷ್ಠಾಕಲ್ಪ, ಉದ್ಧರಣೆ, ಶ್ರೀತತ್ವನಿಧಿ ಕೃತಿಗಳನ್ನು ಉದಾಹರಿಸಬಹುದಾಗಿದೆ.



೩

# ಸಂಗ್ರಹಣ

ಸಂಗ್ರಹ ವಿಧಾನ/ಸಂಗ್ರಹದ ಇತಿಹಾಸ/ಆಧುನಿಕ ಹಸ್ತಪ್ರತಿ ಭಾಂಡಾರಗಳು/ಕನ್ನಡ ಹಸ್ತಪ್ರತಿ ಸೂಚಿಗಳು.

ಕರ್ನಾಟಕದಲ್ಲಿ ೧೦೦೦ ವರ್ಷಗಳಿಂದಲೂ ಹುಟ್ಟುತ್ತ, ಪ್ರಸರಣಗೊಳ್ಳುತ್ತ ಬಂದ ಹಸ್ತಪ್ರತಿಗಳು ಬೇರೆಬೇರೆ ಪ್ರದೇಶಗಳಲ್ಲಿ ಹರಡಿಹೋಗಿವೆ. ಇವುಗಳನ್ನು "ಅರಕ್ಷಿತ ಹಸ್ತಪ್ರತಿ"ಗಳು ಮತ್ತು "ಸಂಗ್ರಹಿತ ಹಸ್ತಪ್ರತಿ"ಗಳು ಎಂದು ವರ್ಗೀಕರಿಸಬಹುದು. ಯಾವುದೇ ಮನೆಯಲ್ಲಿ ಇಲ್ಲವೆ ಮಠ-ದೇವಾಲಯಗಳಲ್ಲಿ ಬಹುಕಾಲದಿಂದಲೂ ಬಿಡಿಬಿಡಿ ರೂಪದಲ್ಲಿ ಬಿದ್ದುಕೊಂಡಿರುವವು ಅರಕ್ಷಿತ ಹಸ್ತಪ್ರತಿಗಳು. ವಾಚನ-ಪ್ರವಚನ-ಅಧ್ಯಯನ ಪ್ರಯೋಜನಾರ್ಥ ಮಠ-ದೇವಾಲಯ, ಅರಮನೆಗಳೆಂಬ ಪ್ರಾಚೀನ ಸಂಸ್ಥೆಗಳಲ್ಲಿ ಬಹಳ ಕಾಲದ ಹಿಂದೆಯೇ ಶೇಖರಿಸಲ್ಪಟ್ಟುವು ಸಂಗ್ರಹಿತ ಹಸ್ತಪ್ರತಿಗಳು. ಇವುಗಳಲ್ಲಿ ಅರಕ್ಷಿತ ಹಸ್ತಪ್ರತಿಗಳು ಉಪೇಕ್ಷೆಗೆ ಗುರಿಯಾಗಿದ್ದರೆ, ಸಂಗ್ರಹಿತ ಹಸ್ತಪ್ರತಿಗಳು ಸ್ವಲ್ಪಮಟ್ಟಿಗೆ ಉತ್ತಮಸ್ಥಿತಿಯಲ್ಲಿರುತ್ತವೆ. ಈ ಹಿಂದೆ ನೋಡಿದಂತೆ ರಾಜ್ಯದ ಒಳಹೊರಗೆ ಇರುವ ಈ ಎರಡೂ ಬಗೆಯ ಹಸ್ತಪ್ರತಿಗಳನ್ನು ಸಂಗ್ರಹಿಸುವುದು ಇಂದಿನ ಬಹುಮುಖ್ಯ ಅಗತ್ಯವಾಗಿದೆ. ಏಕೆಂದರೆ ಹಿಂದಿನ ಕಾಲದಲ್ಲಿ ಅಧ್ಯಯನದ ಹಸಿವನ್ನು ಹಿಂಗಿಸಿಕೊಳ್ಳಲು ಹಸ್ತಪ್ರತಿಗಳೇ ಏಕೈಕ ಸಾಧನಗಳಾಗಿದ್ದವು. ಹೀಗಾಗಿ ಅಮುಖ್ಯವೆನಿಸಿದವುಗಳನ್ನು, ತಮತಮಗೆ ಮುಖ್ಯವೆನಿಸಿದವುಗಳನ್ನು ಅಭ್ಯಾಸಿಗಳು ರಕ್ಷಿಸಿಕೊಳ್ಳುತ್ತಿದ್ದರು. ಇಂದು ಕಾಲಪರಿಸ್ಥಿತಿ ಬದಲಾಗಿದೆ. ಹಸ್ತಪ್ರತಿಗಳು ಎರಡು ದೃಷ್ಟಿಯಿಂದ ಅಲಕ್ಷ್ಯಕ್ಕೆ ವೇಗವಾಗಿ ಗುರಿಯಾಗುತ್ತ ನಡೆದಿವೆ. ೧. ಧಾರ್ಮಿಕ ಮತ್ತು ಲೌಕಿಕ ಕ್ಷೇತ್ರಗಳಲ್ಲಿ ವಿಶೇಷ ಬದಲಾವಣೆ

ಇಂದು ಸಂಭವಿಸಿದೆ. ಈ ಹಿಂದೆ ಧರ್ಮ ಬಹು ದೊಡ್ಡ ವ್ಯವಸ್ಥೆಯಾಗಿದ್ದಿತು. ಆಗ ಧಾರ್ಮಿಕ ಕಾವ್ಯಗಳ ರಚನೆ, ರಕ್ಷಣೆಯ ಕಡೆಗೆ ವಿಶೇಷ ಗಮನ ಕೊಡುತ್ತಿದ್ದರು. ಪಂಪಭಾರತದ ಎರಡೂವರೆ ಹಸ್ತಪ್ರತಿ ಸಿಕ್ಕರೆ ಆದಿಪುರಾಣದ ಹತ್ತರಷ್ಟು ಹಸ್ತಪ್ರತಿ ಸಿಗುವುದು, ಅತ್ತಿಮಬ್ಬೆ ಪೊನ್ನನ ಶಾಂತಿಪುರಾಣದ ಸಾವಿರ ಪ್ರತಿ ಬರೆಯಿಸಿದುದು ಅಂದಿನ ಧಾರ್ಮಿಕ ಶ್ರದ್ಧೆಗೆ ನಿದರ್ಶನಗಳೆನಿಸಿವೆ. ಆದರೆ ಇಂದು ಧಾರ್ಮಿಕ ಶ್ರದ್ಧೆ ಅಷ್ಟಾಗಿ ಉಳಿದಿಲ್ಲ. ಇದರಿಂದಾಗಿ ಈ ಕ್ಷೇತ್ರದ ಕೃತಿಗಳು ಇಂದು ವಿಪುಲಸಂಖ್ಯೆಯಲ್ಲಿ ಉಪೇಕ್ಷೆಗೆ ಗುರಿಯಾಗುತ್ತಲಿವೆ. ಲೌಕಿಕ ಕೃತಿಗಳಾದ ಸಾಹಿತ್ಯಶಾಸ್ತ್ರ, ಸಾಹಿತ್ಯೇತರ ಶಾಸ್ತ್ರಗಳು ಹೊಸಹೊಸ ಶೋಧ ಕಾರಣವಾಗಿ ವಿಶಿಷ್ಟ ಬೆಳವಣಿಗೆ ಸಾಧಿಸಿವೆ. ವ್ಯಾಕರಣ ಭಾಷಾಶಾಸ್ತ್ರವಾಗಿ, ಕಾವ್ಯಮೀಮಾಂಸೆ ವಿಮರ್ಶೆಯಾಗಿ ಬೆಳೆದುಕೊಂಡಿವೆ. ಆಧುನಿಕ ವೈದ್ಯಶಾಸ್ತ್ರ ಮೊದಲಾದುವೆಲ್ಲ ಈ ಬಗೆಯ ಪ್ರಾಚೀನ ಶಾಸ್ತ್ರಕೃತಿಗಳನ್ನು ಮೂಲೆಗೆ ತಳ್ಳಿವೆ. ಇದರಿಂದಾಗಿ ಈ ಎರಡೂ ಬಗೆಯ ಹಸ್ತಪ್ರತಿಗಳು ಇಂದಿನವರ ದೃಷ್ಟಿಯಲ್ಲಿ ಅಪ್ರಯೋಜಕವೆನಿಸಹತ್ತಿವೆ. ೨. ಮುದ್ರಿತಗ್ರಂಥ, ಟೇಪರೆಕಾರ್ಡರ್, ವ್ಹಿಡಿಯೋ ಮೊದಲಾದ ಪ್ರಸಾರಮಾಧ್ಯಮಗಳು ಇಂದು ಅಸ್ತಿತ್ವಕ್ಕೆ ಬಂದು, ಹಸ್ತ ಪ್ರತಿಗಳು ಬಿಚ್ಚಿ ಓದುವ ಗ್ರಂಥಗಳಾಗಿ ಉಳಿದಿಲ್ಲ. ಈ ಪರ್ಯಾಯ ವಾಚನ-ಶ್ರವಣ ಸಾಮಗ್ರಿಯಿಂದಾಗಿ ಹಸ್ತಪ್ರತಿಗಳು ಅಭ್ಯಾಸಿಗಳ ವಶದಲ್ಲಿಯೇ ಉಪೇಕ್ಷೆಗೆ ಗುರಿ ಯಾಗಿವೆ. ಹೀಗೆ ಬದಲಾದ ಜೀವನವ್ಯಾಪಾರ ಮತ್ತು ಸಂವಹನಮಾಧ್ಯಮ ಕಾರಣ ವಾಗಿ ಮೂಲೆ ಹಿಡಿದು ಕುಳಿತಿರುವ ಇವು ಖಿಲವಾಗುತ್ತ ನಡೆದಿವೆ. ಈ ಹಿಂದೆ ಸರಸ್ವತೀಪೂಜೆಯ ನೆಪದಲ್ಲಿಯಾದರೂ ಪಂಚಮಿ ಹಬ್ಬದಂದು ಬಿಚ್ಚಿ ಪೂಜೆಗೊಳ್ಳು ತ್ತಿದ್ದ ಅವು, ಇಂದು ಅಷ್ಟೂ ಆರೈಕೆ-ಗೌರವ ಪಡೆಯುತ್ತಿಲ್ಲ. ಈ ಕಾರಣದಿಂದಾಗಿ ಉಪೇಕ್ಷೆ-ನಾಶಗಳಿಗೆ ಗುರಿಯಾಗುತ್ತ ನಡೆದಿರುವ ಹಸ್ತಪ್ರತಿಗಳನ್ನು ಬಹು ಬೇಗ ಸಂಗ್ರಹಿಸುವ ಹೊಣೆ ನಮ್ಮ ಮೇಲಿದೆ. ಇಲ್ಲಿ ಈ ಹಸ್ತಪ್ರತಿಗಳನ್ನು ಸಂಗ್ರಹಿಸುವ ವಿಧಾನ, ಸಂಗ್ರಹಿಸುತ್ತ ಬಂದ ಇತಿಹಾಸ, ಸಂಗ್ರಹಿಸಿದ ಸಂಸ್ಥೆಗಳು ಮತ್ತು ಅವು ಪ್ರಕಟಿಸಿದ ಸೂಚಿಗಳನ್ನು ಕುರಿತು ವಿವೇಚಿಸಬಹುದಾಗಿದೆ.

## ಸಂಗ್ರಹವಿಧಾನ :

ಕ್ಷೇತ್ರಕಾರ್ಯವೆಂಬ ಶೈಕ್ಷಣಿಕ ಶಿಸ್ತು ಇಂದು ಅಧ್ಯಯನದ ಬಹುಮುಖ್ಯ ಅಂಗ ವಾಗಿ ಬೆಳೆಯುತ್ತಲಿದೆ. ಗ್ರಂಥದಲ್ಲಿ ದಾಖಲಿಸಿದುದನ್ನು, ಪ್ರದರ್ಶನಾಲಯದಲ್ಲಿ ಸಂಗ್ರಹಿಸಿದುದನ್ನು ಬಿಟ್ಟು, ಮೂಲ ನೆಲೆಗೇ ಹೋಗಿ ವಸ್ತು-ಭಾಷೆ-ಕ್ರಿಯೆ-ಜ್ಞಾನ ಗಳಿಗೆ ಸಂಬಂಧಿಸಿದ ವಿಷಯರಾಶಿಯನ್ನು ನೇರವಾಗಿ ಅಭ್ಯಸಿಸುವುದು ಇದರ ಉದ್ದೇಶ ವಾಗಿದೆ. ಈ ನೆಲೆಯೆನ್ನುವುದು ವಿಷಯದ ಪ್ರಾಮಾಣಿಕ ಕ್ಷೇತ್ರವಾಗಿದ್ದು, ಅಲ್ಲಿ ಅಧ್ಯಯನಕ್ಕೆ ಮೂಲ (original) ಸಾಮಗ್ರಿ ಸಿಗುತ್ತದೆ. ಹೀಗಾಗಿ ಈ ನೆಲೆಯನ್ನು

'ಗೋಡೆ ಕಂಬಗಳಿಲ್ಲದ ಪ್ರಯೋಗಶಾಲೆ'ಯೆಂದು ವಿದ್ವಾಂಸರು ವರ್ಣಿಸಿದ್ದಾರೆ. ಮತ್ತು ಕ್ಷೇತ್ರಕಾರ್ಯವನ್ನು ಕ್ಷೇತ್ರಾಧ್ಯಯನವೆಂದು ಸರಿಯಾಗಿಯೇ ಕರೆದಿದ್ದಾರೆ.

ಕ್ಷೇತ್ರಕಾರ್ಯಗಳೇ ಆಗಿದ್ದರೂ ಪ್ರಾಣಿಶಾಸ್ತ್ರಜ್ಞ ಜೀವಪ್ರಕಾರಗಳನ್ನು ಸಂಗ್ರಹಿಸುವುದಕ್ಕೂ ಭಾಷಾವಿಜ್ಞಾನಿ ಮಾತಿನ ಘಟಕಗಳನ್ನು ಸಂಗ್ರಹಿಸುವುದಕ್ಕೂ ಮನೋವಿಜ್ಞಾನಿ ಮಾನವನ ಆಲೋಚನೆಗಳನ್ನು ಸಂಗ್ರಹಿಸುವುದಕ್ಕೂ ಅಂತರವಿದ್ದು, ಇವರ ಕ್ಷೇತ್ರಕಾರ್ಯಗಳನ್ನು ಕ್ರಮವಾಗಿ ಕಾಯಿಕ-ವಾಚಿಕ-ಮಾನಸಿಕ ಎಂಬ ಮೂರು ಹೆಸರುಗಳಿಂದ ಗುರುತಿಸಬಹುದಾಗಿದೆ. ಈ ಮೂರು ಬಗೆಯ ಕ್ಷೇತ್ರಕಾರ್ಯಗಳ ವಿಧಾನಗಳು ಕ್ರಮವಾಗಿ Collection (ಸಂಗ್ರಹ), Interview (ಸಂದರ್ಶನ), Observation (ನಿರೀಕ್ಷಣೆ) ರೂಪದ್ದಾಗಿರುತ್ತವೆ. ಇವುಗಳಲ್ಲಿ ಹಸ್ತಪ್ರತಿ ಕ್ಷೇತ್ರ ಕಾರ್ಯವು ಪ್ರಧಾನವಾಗಿ Collection ವರ್ಗಕ್ಕೆ ಸೇರುತ್ತಿದ್ದು, ಗೌಣವಾಗಿ Observation ಮತ್ತು Interviewಗಳನ್ನೂ ಒಳಗೊಳ್ಳುತ್ತದೆ.

ಸಂಶೋಧನಕ್ಕೆ ಸಂಬಂಧಿಸಿದಂತೆ ಇಂಗ್ಲೀಷ್‌ಭಾಷೆ Research, Invention, Discovery ಎಂಬ ಪದಗಳನ್ನು ಬಳಸುತ್ತದೆ. ಮರೆಯಲ್ಲಿ ಉಳಿದುಕೊಂಡಿರುವ ಒಂದು ವಸ್ತುವಿನ ಪ್ರಜ್ಞಾಪೂರ್ವಕ ಅಥವಾ ಆಕಸ್ಮಿಕ ಅನ್ವೇಷಣೆ ಮತ್ತು ಅಧ್ಯಯನ Discovery. ಹಸ್ತಪ್ರತಿ ವಿಷಯವಾಗಿ ನಡೆಸುವಕ್ಷೇತ್ರಕಾರ್ಯ Discovery ವರ್ಗಕ್ಕೆ ಸೇರುತ್ತದೆಯಾದರೂ ಅಧ್ಯಯನವನ್ನು ಹೊರತುಪಡಿಸುವುದರಿಂದ ಇದನ್ನು ಸಂಶೋಧನೆಯೆನ್ನುವುದಕ್ಕಿಂತ "ಶೋಧ" ಎನ್ನುವುದೇ ಸರಿ. ಹೀಗಿದ್ದೂ ಈ ಮೊದಲು ಸಿಗದಿದ್ದ ಕೃತಿಯ ಹಸ್ತಪ್ರತಿ ಹುಡುಕುವಿಕೆಗೆ 'ಶೋಧ' (Discovery) ಪದವನ್ನು, ಈ ಮೊದಲು ಸಿಕ್ಕ ಕೃತಿಯ ಹಸ್ತಪ್ರತಿಯ ಹುಡುಕುವಿಕೆಗೆ 'ಸಂಗ್ರಹ' (Collection) ಪದವನ್ನು ಬಳಸುವುದು ಲೇಸು. ಆದುದರಿಂದ ಹಸ್ತಪ್ರತಿ ಕ್ಷೇತ್ರ ಕಾರ್ಯವು ಶೋಧ ಮತ್ತು ಸಂಗ್ರಹಗಳ ಸಂಯುಕ್ತಕ್ರಿಯೆಯಾಗಿದೆ.

'ವಸ್ತು'ವಿನ ಶೋಧ ಮತ್ತು ಸಂಗ್ರಹರೂಪದ ಕಾರ್ಯಕ್ಕೆ ಸರ್ವಸಾಮಾನ್ಯ ಸೂತ್ರಗಳಿರುವುದಾದರೂ ಇವು ಆಯಾ ಜ್ಞಾನಶಾಖೆಗಳಿಗೆ ಅನುಗುಣವಾಗಿ ಕೆಲವೊಮ್ಮೆ ಬೇರೆ ಬೇರೆಯಾಗುವುದರಿಂದ 'ಹಸ್ತಪ್ರತಿ ಕ್ಷೇತ್ರಕಾರ್ಯ'ಕ್ಕೆ ಸಂಬಂಧಿಸಿದ ವಿಶಿಷ್ಟ ವಿಧಾನ-ವಿಚಾರಗಳನ್ನು ಇಲ್ಲಿ ಮಂಡಿಸಬಹುದು.

ಕ್ಷೇತ್ರಕಾರ್ಯಕರ್ತ, ಹಸ್ತಪ್ರತಿ ಮತ್ತು ಹಸ್ತಪ್ರತಿಗಳ ಒಡೆಯ – ಈ ಮೂರು ಘಟಕಗಳನ್ನೊಳಗೊಂಡಿದೆ, ಹಸ್ತಪ್ರತಿ ಕ್ಷೇತ್ರಕಾರ್ಯ. ಅದು 'ಒಡೆಯ'ನಿಂದ 'ಹಸ್ತಪ್ರತಿ'ಯನ್ನು 'ಕ್ಷೇತ್ರಕಾರ್ಯಕರ್ತ' ದೊರಕಿಸಿಕೊಳ್ಳುವ ಕ್ರಿಯೆಯಾಗಿದೆ. ಈ ತ್ರಿಕೋನದಲ್ಲಿ 'ಹಸ್ತಪ್ರತಿ' ಶಿರೋಕೇಂದ್ರವಾಗಿದ್ದು, ಅದನ್ನು ಒಂದು ಕೇಂದ್ರದಲ್ಲಿ ನಿಂತು 'ಒಡೆಯ' ಉಳಿಸಿಕೊಳ್ಳಲು, ಇನ್ನೊಂದು ಕೇಂದ್ರದಲ್ಲಿ ನಿಂತು 'ಕ್ಷೇತ್ರಕಾರ್ಯ ಕರ್ತ' ದೊರಕಿಸಿಕೊಳ್ಳಲು ಪ್ರಯತ್ನ ನಡೆಸುತ್ತಾರೆ.




ಒಡೆಯನನ್ನು ಕ್ಷೇತ್ರಕಾರ್ಯಕರ್ತ ಜಯಿಸುವುದೇ ಈ ಸಂದರ್ಭದ ಕ್ರಿಯೆಯಾಗಿರುವುದರಿಂದ, ಇಲ್ಲಿಯ ಪ್ರಧಾನಘಟಕ ಕ್ಷೇತ್ರಕಾರ್ಯಕರ್ತನಾಗಿದ್ದಾನೆ. ಈತನಿಗೆ ಹಸ್ತಪ್ರತಿ ಸಂಗ್ರಹದ ೧. ಸೈದ್ಧಾಂತಿಕ ಜ್ಞಾನ, ೨. ಪ್ರಾಯೋಗಿಕ ಜ್ಞಾನ, ೩. ತಾಂತ್ರಿಕ ಜ್ಞಾನಗಳ ಅರ್ಹತೆ ಅವಶ್ಯಬೇಕು,

ಹಸ್ತಪ್ರತಿಕ್ಷೇತ್ರಕಾರ್ಯದ 'ಸೈದ್ಧಾಂತಿಕ ಜ್ಞಾನ' ಎಂಬ ಮಾತು ತುಂಬ ವ್ಯಾಪಕವಾದುದು. ಹಸ್ತಪ್ರತಿಶಾಸ್ತ್ರ, ಗ್ರಂಥಸಂಪಾದನಶಾಸ್ತ್ರಗಳ ಸಂಲಗ್ನ ಪರಿಜ್ಞಾನವಿದು. ಈ ಉಭಯಶಾಸ್ತ್ರಗಳಿಗೆ ಸಂಬಂಧಿಸಿದ ಹಸ್ತಪ್ರತಿಯ ಸ್ವರೂಪ, ಪ್ರಕಾರ, ಭಾಷೆ, ಅಕ್ಷರ, ಬರವಣಿಗೆಯ ರೀತಿ, ವಿಷಯ ಸಂಪತ್ತು, ಮಹತ್ವ ಇತ್ಯಾದಿಗಳ ತಿಳಿವಳಿಕೆಯಾದ ಇದು, ಕ್ಷೇತ್ರಕಾರ್ಯಕರ್ತನ ಮೂಲಧನ. ಆದುದರಿಂದ ಕ್ಷೇತ್ರಕಾರ್ಯಕರ್ತ ಗ್ರಂಥಸಂಪಾದನಶಾಸ್ತ್ರ, ಹಸ್ತಪ್ರತಿಶಾಸ್ತ್ರ ಪರಿಜ್ಞಾನಗಳೆಂಬ ಉಭಯ ಅರ್ಹತೆಗಳನ್ನು ಮೈಗೂಡಿಸಿಕೊಂಡಿರಬೇಕಾಗುತ್ತದೆ.

ಈ ಸೈದ್ಧಾಂತಿಕ ಜ್ಞಾನದಷ್ಟೇ ಪ್ರಾಯೋಗಿಕ ಪರಿಜ್ಞಾನವೂ ಕ್ಷೇತ್ರಕಾರ್ಯಕರ್ತನಿಗೆ ಬೇಕು. ದೈಹಿಕ ಶ್ರಮ-ಆರ್ಥಿಕ ತೊಂದರೆಗಳನ್ನೂ ಮೀರಿದ ಆನ್ವಯಿಕ ಪರಿಣತಿಯಿದು. ಇಲ್ಲಿ ಸೈದ್ಧಾಂತಿಕ ಮತ್ತು ಪ್ರಾಯೋಗಿಕಗಳದು ಜ್ಞಾನ-ಕ್ರಿಯೆಗಳ ಸಂಬಂಧದಂತಿದೆ. ಸೈದ್ಧಾಂತಿಕವಲ್ಲದ ಪ್ರಾಯೋಗಿಕ ಕುರುಡ, ಪ್ರಾಯೋಗಿಕವಲ್ಲದ ಸೈದ್ಧಾಂತಿಕ ಹೆಳವ. ಆದುದರಿಂದ ಕುರುಡನೂ ಅಲ್ಲದ ಹೆಳವನೂ ಅಲ್ಲದ ವ್ಯಕ್ತಿತ್ವ ಕ್ಷೇತ್ರಕಾರ್ಯಕರ್ತನದಾಗಿದೆ.

ಇತ್ತೀಚಿನ ದಿನಗಳಲ್ಲಿ ಯಾವುದೇ ಕ್ಷೇತ್ರಕಾರ್ಯಕ್ಕೆ ಯಂತ್ರೋಪಕರಣದ ಬಳಕೆ ಅನಿವಾರ್ಯವೆನಿಸಿದೆ. ಹಸ್ತಪ್ರತಿ ಕ್ಷೇತ್ರಕಾರ್ಯಕರ್ತನಿಗೆ ಕ್ಯಾಮರಾ, ಟೇಪರೆಕಾರ್ಡರ್ ಇವುಗಳಿಗಿಂತ ಮೈಕ್ರೊಫಿಲ್ಮ್, ಫೋಟೋಸ್ಟ್ಯಾಟ್, ಝೆರಾಕ್ಸ್, ವೀಡಿಯೋ ಯಂತ್ರಗಳನ್ನು ನಿಯಂತ್ರಿಸುವ, ಪ್ರಸಂಗಬಂದರೆ ಸಣ್ಣಪುಟ್ಟ ರಿಪೇರಿ ಮಾಡುವ ತಾಂತ್ರಿಕ ಜ್ಞಾನ ಇಂದು ಅವಶ್ಯವೆಂದು ಹೇಳಬೇಕು.

ಈ ತ್ರಿವಿಧ ಅರ್ಹತೆಗಳ ಬಲದಿಂದ ಈತನು ನಡೆಸುವ ಕ್ಷೇತ್ರಕಾರ್ಯವು ಪರೋಕ್ಷ ಕ್ಷೇತ್ರಕಾರ್ಯ (Non directive field work) ಮತ್ತು ಪ್ರತ್ಯಕ್ಷ ಕ್ಷೇತ್ರಕಾರ್ಯ (Directive field work) ಎಂದು ಎರಡು ತೆರನಾಗಿದೆ. ಸ್ಥಳವನ್ನು ಪ್ರತ್ಯಕ್ಷ ಸಂದರ್ಶಿಸಿ, ಹಸ್ತಪ್ರತಿಗಳನ್ನು ಸಂಗ್ರಹಿಸುವುದು ಪ್ರತ್ಯಕ್ಷ ಕ್ಷೇತ್ರ ಕಾರ್ಯವಾದರೆ, ಹೀಗೆ ಮಾಡುವ ಬದಲು ಅಂಚೆ ಮೂಲಕ, ಅನ್ಯವ್ಯಕ್ತಿ ಮೂಲಕ ಈ ಕಾರ್ಯವನ್ನು ಕೈಗೂಡಿಸಿಕೊಳ್ಳುವುದು ಪರೋಕ್ಷ ಕ್ಷೇತ್ರಕಾರ್ಯ. ಹಸ್ತಪ್ರತಿ ಒಡೆಯರು ತಿಳಿವಳಿಕೆಯವರಿದ್ದರೆ, ಹಸ್ತಪ್ರತಿಗಳು ಸಾರ್ವಜನಿಕ ಸಂಪತ್ತು ಎಂಬ ಪ್ರಜ್ಞೆಯವರಾಗಿದ್ದರೆ ಅವುಗಳ "ಪರೋಕ್ಷಕ್ಷೇತ್ರಕಾರ್ಯ" ಸಾಧ್ಯವಾಗುತ್ತದೆ. ಆದರೆ ಮೇಲೆ ಹೇಳಿದ ಪ್ರಜ್ಞೆಯ ಅಭಾವದ ಭಾರತೀಯ ಪರಿಸರದಲ್ಲಿ ಇದು ಅಸಾಧ್ಯವೇ ಸರಿ. ಅಲ್ಲದೆ "ಪ್ರತ್ಯಕ್ಷ ಕ್ಷೇತ್ರಕಾರ್ಯ"ದಿಂದ 'ಪಠ್ಯಶೋಧ'ದೊಂದಿಗೆ 'ಪರಿಸರಶೋಧ'ವೂ ಸಾಧ್ಯವಾಗುವುದರಿಂದ ಪರೋಕ್ಷ ಕ್ಷೇತ್ರಕಾರ್ಯಕ್ಕಿಂತ ಪ್ರತ್ಯಕ್ಷ ಕ್ಷೇತ್ರಕಾರ್ಯವೇ ಲೇಸು. ಇದರಿಂದ ಹಸ್ತಪ್ರತಿಶಾಸ್ತ್ರ ಕೇವಲ "ಪ್ರಯೋಗಶಾಲೆ" ಅಥವಾ "ಗ್ರಂಥಾಲಯ"ಗಳಂಥ ಜ್ಞಾನಶಾಖೆಯಾಗಿರದೆ ಅದು ಪ್ರದೇಶ ಪರ್ಯಟನೆ ವನ್ನೂ ಬಯಸುತ್ತದೆಯೆಂದು ಸ್ಪಷ್ಟವಾಗುತ್ತದೆ.

ಪ್ರತ್ಯಕ್ಷ ಕ್ಷೇತ್ರಕಾರ್ಯವು ೧. ಪೂರ್ವಸಿದ್ಧತೆ ೨. ಕ್ಷೇತ್ರಕಾರ್ಯ –ಎಂದು ಎರಡು ಹಂತಗಳನ್ನೊಳಗೊಂಡಿದೆ.

ಪೂರ್ವಸಿದ್ಧತೆಗೆ ಮಾನಸಿಕ ಪೂರ್ವಸಿದ್ಧತೆಯೇ ಮುಖ್ಯ. ಇಲ್ಲದಿದ್ದರೆ ಒಲ್ಲದ ಕುದುರೆಗೆ ನೀರು ಕುಡಿಸುವ ವ್ಯರ್ಥಪ್ರಯತ್ನವಾಗಿಬಿಡುತ್ತದೆ. ಮಾನಸಿಕ ಸಿದ್ಧತೆಯ ತರುವಾಯ ತನ್ನ ಕ್ಷೇತ್ರಕಾರ್ಯದ ವಿಷಯ, ಪ್ರದೇಶ ಇವುಗಳಗೆ ಸಂಬಂಧಪಟ್ಟ ಪೂರ್ವಸಿದ್ಧತೆ ಮಾಡಿಕೊಳ್ಳಬೇಕು. ತಾನು ಕೈಗೆತ್ತಿಕೊಂಡ ಭಾಷೆ, ವಿಷಯಗಳಲ್ಲಿ ಹುಟ್ಟಿದ ಕೃತಿಗಳ ವಸ್ತು (Subject), ಅವುಗಳ ಪ್ರಕಟಿತ ಅಪ್ರಕಟಿತ ಸ್ಥಿತಿ, ಹಸ್ತ ಪ್ರತಿ-ಕ್ಯಾಟಲಾಗಗಳ ಸವಿವರ ಅಭ್ಯಾಸ, ಕ್ಷೇತ್ರಕಾರ್ಯಕ್ಕೆ ಆಯ್ದುಕೊಂಡ ಪ್ರದೇಶದ ಭೌಗೋಲಿಕ ತಿಳಿವಳಿಕೆ, ಮಾರ್ಗವ್ಯವಸ್ಥೆ, ವಾಹನ ಸೌಕರ್ಯ, ಅಲ್ಲಿಯ ಸ್ನೇಹಿತರ, ಅಧಿಕಾರಿಗಳ, ಪ್ರತಿಷ್ಠಿತರ, ಹಸ್ತಪ್ರತಿ ಒಡೆಯರ ವಿವರ –ಇತ್ಯಾದಿಗಳ ತಿಳಿವಳಿಕೆ ಯೊಂದಿಗೆ ಪ್ರಯಾಣ ಪ್ರವೃತ್ತನಾಗಬೇಕು. ಇದಲ್ಲದೆ ಹಸ್ತಪ್ರತಿಗಳು ಪ್ರತಿಷ್ಠಿತರ–ಪಂಡಿತರ ವಂಶಜರಲ್ಲಿ, ದೇವಾಲಯ–ಮಠಗಳಲ್ಲಿ ಸಿಗುವುವೆಂಬುದನ್ನೂ ಆಯಾ ಮತೀಯರಲ್ಲಿ ಸ್ವಮತೀಯ ಗ್ರಂಥಗಳೇ ಸಾಮಾನ್ಯವಾಗಿ ಲಭಿಸುವವೆಂಬುದನ್ನೂ ಅರಿತಿರಬೇಕು. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಜೈನ - ವೀರಶೈವ ವ್ಯಕ್ತಿ ಗಳಲ್ಲಿ ಕನ್ನಡ ಹಸ್ತಪ್ರತಿ, ಬ್ರಾಹ್ಮಣ ವ್ಯಕ್ತಿಗಳಲ್ಲಿ ಸಂಸ್ಕೃತ ಹಸ್ತಪ್ರತಿ ಸಿಗುತ್ತವೆ. ಉತ್ತರಕರ್ನಾಟಕದಲ್ಲಿ ವಿರಶೈವಸಾಹಿತ್ಯ, ರಾಯಚೂರು ಜಿಲ್ಲೆಯಲ್ಲಿ ದಾಸಸಾಹಿತ್ಯ, ಕರಾವಳಿ ಪ್ರದೇಶದಲ್ಲಿ ಭಾಗವತ, ಯಕ್ಷಗಾನ ಹಸ್ತಪ್ರತಿಗಳೇ ವಿಪುಲವಾಗಿ ಸಿಗುತ್ತವೆ.

ಇಂಥ ವೈಷಯಿಕ ಮತ್ತು ವ್ಯಾವಹಾರಿಕ ತಿಳಿವಳಿಕೆ ಕ್ಷೇತ್ರಕಾರ್ಯಕರ್ತನಿಗೆ ಇರಬೇಕು.

ಗೊತ್ತಾದ ಸ್ಥಳವನ್ನು ತಲುಪಿ, ಕಾರ್ಯನಿರತನಾಗುವಲ್ಲಿಯೇ ಈತನ ಅಗ್ನಿ ಪರೀಕ್ಷೆ ಆರಂಭವಾಗುವುದು. ಕ್ಷೇತ್ರಕಾರ್ಯವೆಂದರೆ ಒಡೆಯನ ವಶದಲ್ಲಿರುವ ಹಸ್ತ ಪ್ರತಿಯನ್ನು ಪಡೆಯುವುದೇ ಆಗಿದೆ. ಸಾಮಾನ್ಯವಾಗಿ ಒಡೆಯ ಮತ್ತು ಕ್ಷೇತ್ರ ಕಾರ್ಯಕರ್ತರು ಪರಸ್ಪರ ಅಪರಿಚಿತರು. ಆದುದರಿಂದ ಕಾರ್ಯಕರ್ತ ತನ್ನ ಸಮಯೋಚಿತ ಮಾತು—ರೀತಿಗಳಿಂದ ಅವನ ಮನಸ್ಸನ್ನು ಗೆಲ್ಲಬೇಕು. ಅವನಿಗೆ ತನ್ನ ಬಗೆಗೆ, ತನ್ನ ಕಾರ್ಯದ ಬಗೆಗೆ, ಹಸ್ತಪ್ರತಿಗಳನ್ನು ಭಾಂಡಾರದಲ್ಲಿ ರಕ್ಷಿಸುವ ಬಗೆಗೆ ವಿಶ್ವಾಸ ಹುಟ್ಟುವಂತೆ ವರ್ತಿಸಬೇಕು. ವೈಯಕ್ತಿಕ ಪ್ರಭಾವ, ಸಾರ್ವಜನಿಕ ಪ್ರಚಾರದಿಂದ ತಕ್ಕ ವಾತಾವರಣವನ್ನು ನಿರ್ಮಿಸಬೇಕು. ಈ ವಾತಾವರಣ ನಿರ್ಮಾಣ ಕ್ಕಾಗಿ ಹಸ್ತಪ್ರತಿಯ ಮಹತ್ವವನ್ನು ಪ್ರತಿಪಾದಿಸುವ ಉಪನ್ಯಾಸಗಳನ್ನು, ಹಸ್ತ ಪ್ರತಿಯ ಮಹತ್ವ- ಅವುಗಳ ಸಂರಕ್ಷಣೆಯ ಮಹತ್ವಗಳನ್ನು ಬಿಂಬಿಸುವ ವೀಡಿಯೋ ಪ್ರದರ್ಶನ ಇತ್ಯಾದಿಗಳನ್ನು ಏರ್ಪಾಡು ಮಾಡಬಹುದು.

ಯಾವುದೇ ವಸ್ತುವಿಗೂ ಅದರ ಒಡೆಯನಿಗೂ ಇರುವ ಭೌತಿಕ ಸಂಬಂಧವು ನಿತ್ಯಸಂಪರ್ಕ ಕಾರಣವಾಗಿ ಭಾವನಾತ್ಮಕ ಸಂಬಂಧವಾಗಿ ಬೆಳೆದಿರುತ್ತದೆ; ದೇವರ ಜೊತೆ ಜಗುಲಿಯ ಮೇಲೆ ಪೂಜಿಸುವ ಹಸ್ತಪ್ರತಿಗಳ ವಿಷಯವಾಗಿಯಂತೂ ದೈವೀ ಸಂಬಂಧ ಬೆಳೆದುಕೊಂಡಿರುತ್ತದೆ. ಈಗ ಕ್ಷೇತ್ರಕಾರ್ಯಕರ್ತ ಕ್ರಮೇಣವಾಗಿ ಒಡೆಯನ ದೈವಿಕ, ಭಾವನಾತ್ಮಕ, ಭೌತಿಕ ಸಂಬಂಧಗಳೆಂಬ ಸಂಕೋಲೆಗಳಿಂದ ಹಸ್ತಪ್ರತಿಯನ್ನು ಬಿಡಿಸಿಕೊಳ್ಳಬೇಕಾಗುತ್ತದೆ. ಕೆಲವು ಸಲ ಅವರು ತಮ್ಮ ವಶದಲ್ಲಿರುವುದು ಅಸಾಮಾನ್ಯಕೃತಿಯೆಂಬ, ಹಸ್ತಪ್ರತಿಯನ್ನು ಹಸ್ತಾಂತರಿಸುವುದರಿಂದ ತಮಗೆ ಕೇಡೆಂಬ ಭ್ರಮೆಯಲ್ಲಿರುತ್ತಾರೆ. ಕೆಲವರಂತೂ ಹಸ್ತಪ್ರತಿ ಇಟ್ಟುಕೊಳ್ಳುವುದು ಪ್ರತಿಷ್ಠೆಯೆಂದು ಭಾವಿಸಿರುತ್ತಾರೆ. ಕ್ಷೇತ್ರಕಾರ್ಯಕರ್ತ ಮೊದಲು ಒಡೆಯನನ್ನು ಈ ಭ್ರಮೆಗಳಿಂದ ಮುಕ್ತಮಾಡಿ, ಅವನನ್ನು ವಾಸ್ತವ ನೆಲೆಗೆ ತಂದು ನಿಲ್ಲಿಸಬೇಕು. ಆಮೇಲೆ ಹಸ್ತ ಪ್ರತಿಯನ್ನು ದಾನವಾಗಿಯೋ ಹಣ ಕೊಟ್ಟೋ ಪಡೆಯಬಹುದು. ಹಣಕ್ಕೆ ದೇವರನ್ನೂ ಮಾರುವ ದ್ರವ್ಯಭಕ್ತರ ಇಂದಿನ ಸಮಾಜದಲ್ಲಿ, ಹಸ್ತಪ್ರತಿಗಳ ಖರೀದಿ ೨೦ನೆಯ ಶತಮಾನದ ಪೂರ್ವಾರ್ಧಕ್ಕಿಂತ ಉತ್ತರಾರ್ಧದಲ್ಲಿ ಸರಳ ಕಾರ್ಯವಾಗಿದೆ. ಆದುದರಿಂದ ಹಣದ ಆಸೆ ಆಮಿಷಗಳನ್ನು ಒಡ್ಡಿ ಹಸ್ತಪ್ರತಿಗಳನ್ನು ಖರೀದಿ ಮಾಡುವುದೇ ಇಂದು ಯೋಗ್ಯವಾಗಿ ತೋರುತ್ತದೆ. ಆದರೆ ಈ ವಿಧಾನದಿಂದಾಗಿ ಹಸ್ತಪ್ರತಿ ಒಡೆಯರು ಬಾಯಿಗೆ ಬಂದಷ್ಟು ಹಣಕೇಳುವ ಚಟಕ್ಕೆ ಬೀಳದಂತೆ ಎಚ್ಚರವಹಿಸಬೇಕು.

ಯಾವುದೇ ಕೃತಿ ಅಚ್ಚಾಗಿದ್ದರೆ ಅದರ ಹಸ್ತಪ್ರತಿಗೆ ಬದಲು ಅಚ್ಚಿನ ಪ್ರತಿಕಳಿಸಿ ಕೊಡುವ, ಹಸ್ತಾಂತರಿಸಲು ಒಪ್ಪದ ಪಕ್ಷದಲ್ಲಿ ಬೆಲೆಯುಳ್ಳ ಹಸ್ತಪ್ರತಿಯಿದ್ದರೆ ಅದನ್ನು ಪ್ರತಿಮಾಡಿಕೊಂಡು ಹಿಂದಿರುಗಿಸುವ ಭರವಸೆ ನೀಡಬೇಕು. ಇಷ್ಟಾಗಿಯೂ ಒಪ್ಪದಿದ್ದರೆ ಸ್ನೇಹಿತರಿಂದ, ಪ್ರತಿಷ್ಠಿತರಿಂದ, ಅಧಿಕಾರಿಗಳಿಂದ ಅವನ ಮೇಲೆ ಒತ್ತಾಯ ತರಬೇಕು. ಒಂದು ರೀತಿ ಸಾಮ, ದಾನ, ಭೇದ, ದಂಡ ಕ್ರಮ ಇಲ್ಲಿ ನಡೆಯಬೇಕು. ಮೂಡಬಿದರೆ ಜೈನಮಠದ ಶ್ರುತಭಾಂಡಾರದಿಂದ ಧವಲಾ, ಜಯಧವಲಾ, ಮಹಾಧವಲಾ ಹಸ್ತಪ್ರತಿಗಳನ್ನು ಪಡೆಯಲು ಜೈನವಿದ್ವಾಂಸರು ವಹಿಸಿದ ಶ್ರಮ, ವ್ಯಯಿಸಿದ ಹಣ-ಸಮಯಗಳು ಕ್ಷೇತ್ರಕಾರ್ಯಕರ್ತನಿಗೆ ಆದರ್ಶ ವಾಗಬೇಕು. ಒಂದು ವೇಳೆ ಹಸ್ತಪ್ರತಿ ಕೈವಶವಾಗುವುದೇ ಅಸಾಧ್ಯವೆನಿಸಿದಾಗ ಅದರ ಟಿಪ್ಪಣಿ ಬರೆದುಕೊಳ್ಳುವ, ಇದಕ್ಕಿಂತ ಮೈಕ್ರೋಫಿಲ್ಮ ಪ್ರತಿ ಮಾಡಿಕೊಳ್ಳುವುದ ರೊಂದಿಗೆ ಅದರ ಆದ್ಯಂತ್ಯ ಗರಿಗಳ ಫೋಟೋ ತೆಗೆದುಕೊಳ್ಳುವ ಕೆಲಸ ಮಾಡಬೇಕು.

ಹಸ್ತಪ್ರತಿ ಕ್ಷೇತ್ರಕಾರ್ಯವೆಂದರೆ ಪಠ್ಯವನ್ನು ಸಂಗ್ರಹಿಸುವುದಾಗಿರುವಂತೆ, ಅದರ ಪರಿಸರವನ್ನು ಸಂಗ್ರಹಿಸುವುದೂ ಆಗಿದೆ. ಇವುಗಳನ್ನು 'ಪಠ್ಯಶೋಧ' 'ಪರಿಸರ ಶೋಧ' ಎಂದು ಕರೆಯಬಹುದು. ಈವರೆಗೆ ಕೇವಲ ಪಠ್ಯಶೋಧ ಮತ್ತು ಒಡೆಯನ ವಿಳಾಸದ ದಾಖಲೆಗಳಿಗೆ ಮಾತ್ರ ಮೀಸಲಾಗಿರುವ ಕ್ಷೇತ್ರಕಾರ್ಯ ಇನ್ನು ಮೇಲೆ 'ಪರಿಸರಶೋಧ'ವನ್ನೂ ಮೈಗೂಡಿಸಿಕೊಂಡು ಮುನ್ನಡೆಯಬೇಕಾಗಿದೆ. ಏಕೆಂದರೆ ಯಾವುದೇ ಹಸ್ತಪ್ರತಿ ತನ್ನ ಪರಿಸರದ ಉಪೇಕ್ಷೆಗೆ ಗುರಿಯಾಗಿರಬಹುದು. ಇಲ್ಲವೆ ತನ್ನ ಪರಿಸರದಲ್ಲಿ ತುಂಬ ಪ್ರಭಾವಶಾಲಿಯಾಗಿ ವ್ಯವಹರಿಸುತ್ತಿರಬಹುದು. ಈ ಆವರಣವನ್ನು ಅಂದರೆ ಅದರ ಉಗಮ, ಆಗಮ, ಅದು ಆ ಮನೆತನ-ಆ ಪರಿಸರ ದೊಂದಿಗೆ ಹೊಂದಿದ ಸಂಬಂಧ, ಗಳಿಸಿದ ಪ್ರತಿಷ್ಠೆ ಇತ್ಯಾದಿಗಳನ್ನು ಸಂಗ್ರಹಿಸಬೇಕಾ ಗುತ್ತದೆ. ಜೈನ ಹಸ್ತಪ್ರತಿಗಳು ಬೆಳ್ಗೊಳದಿಂದ ಬಿಹಾರದ ಆರಾಪಟ್ಟಣಕ್ಕೆ ಮತ್ತು ಜರ್ಮನಿಯ ಸ್ಟ್ರಾಟ್ಸ್‌ಬರ್ಗಕ್ಕೆ ವಲಸೆಹೋದ ಸಂಗತಿಗಳು ನಿಜಕ್ಕೂ ದಾಖಲಾರ್ಹ ವಾಗಿವೆ. ಹಸ್ತಪ್ರತಿಯನ್ನು ಸ್ನಾನಮಾಡಿಯೇ ಮುಟ್ಟುವ, ವರ್ಷಕ್ಕೊಮ್ಮೆ ಜಾತ್ರೆ ಯಂಥ ವಿಶೇಷ ಸಂದರ್ಭಗಳಲ್ಲಿ ಮಾತ್ರ ಬಿಚ್ಚಿ ಓದುವ, ಮಳೆ ಬರಲೆಂದು ಐರಾವತ ನೋಂಪಿ, ವಿರಾಟಪರ್ವ, ರೇವಣಸಾಂಗತ್ಯ ಓದಿಸುವ, ಗ್ರಂಥದಿಂದ ರೋಗನಿವಾರಣೆ ಮಾಡುವ, ಜ್ಞಾನಸಿಂಧುವನ್ನು ವೃದ್ಧರಿಗೆ ಮಾತ್ರ ಓದಲು ಹೇಳುವ, ಹಸ್ತಪ್ರತಿ ಯನ್ನು ಜೋತಿಷ್ಯ ಶಕುನಗ್ರಂಥಗಳಂತೆ ಬಳಸುವ ರೋಮಾಂಚಕ, ಭಾವನಾತ್ಮಕ ಸಂಬಂಧಗಳು ಕೆಲವು ಹಸ್ತಪ್ರತಿಗಳ ಸುತ್ತ ಬೆಳೆದಿರುತ್ತವೆ. ಹಳ್ಳಿಯಿಂದ ದಿಲ್ಲಿಯ ವರೆಗೆ ಪ್ರಚಾರಪಡೆದ ಹಾರನಹಳ್ಳಿ ಕೋಡಿಮಠದ ಗ್ರಂಥ, ಬೀಗ ಬಂಧನದಲ್ಲಿರುವ ಪೊಕ್ಕರಾಣೆ ಗ್ರಾಮದ ವಚನಗ್ರಂಥ 'ಪರಿಸರಶೋಧ'ಕ್ಕೆ ಒಳ್ಳೆಯ ಉದಾಹರಣೆ ಯಾಗಿವೆ. ಹೀಗೆ ಕೆಲವು ಹಸ್ತಪ್ರತಿ ಇಲ್ಲವೆ ಹಸ್ತಪ್ರತಿ ಭಾಂಡಾರಗಳ ಸುತ್ತ ಇಂಥ

ಭಾವಪರಿವೇಷ ಬೆಳೆದಿರುತ್ತದೆ. ಕಾರಣ ಯಾವುದೇ ಹಸ್ತಪ್ರತಿಯನ್ನು ಅದರ ಸುತ್ತ ಹೆಣೆದಿರುವ ಭಾವಕೋಶದೊಂದಿಗೆ ಸಂಗ್ರಹಿಸಬೇಕು.

ಕವಿಯ ಮತ್ತು ಕಥಾನಾಯಕರ ವಂಶಸ್ಥರಲ್ಲಿ ಸಿಗುವ ಹಸ್ತಪ್ರತಿಗೆ ಮಿಕ್ಕೆಡೆಗಳಲ್ಲಿ ಸಿಗುವ ಹಸ್ತಪ್ರತಿಗಿಂತ ವಿಶೇಷ ಮಹತ್ವವಿರುತ್ತದೆ. ಕವಿಯ ಸ್ವಹಸ್ತಾಕ್ಷರ ಪ್ರತಿ ಇದಕ್ಕಿಂತ ಬೆಲೆಯುಳ್ಳುದು. ಮುದ್ದಣ, ಪಂಚಬಾಣರು ಕೈಮುಟ್ಟಿ ಬರೆದ ರಾಮಾಶ್ವಮೇಧ, ಭುಜಬಲಿ ಚರಿತೆಯ ಪ್ರತಿಗಳು ಈ ಸಾಲಿನಲ್ಲಿ ನಿಲ್ಲುತ್ತವೆ. "ಎಲ್ಲಾ ಗ್ರಂಥ ಬಗಲಾಗ ಪ್ರಭುಲಿಂಗ ಲೀಲೆ ತಲೆಮ್ಯಾಗ" ಎನ್ನುತ್ತಿದ್ದ ಮುಸಲ್ಮಾನ ಶಿಶುನಾಳ ಶರೀಫಸಾಹೇಬರು ಸ್ವಹಸ್ತದಿಂದ ಬರೆದ ಪ್ರಭುಲಿಂಗಲೀಲೆ ಹಸ್ತಪ್ರತಿಗೆ ಇರುವ ಸಾಂಸ್ಕೃತಿಕ ಮಹತ್ವವನ್ನು ಬೇರೆ ಹೇಳಬೇಕಿಲ್ಲ. ಆದುದರಿಂದ ಹಸ್ತಪ್ರತಿಯ ಆತ್ಮ ಚರಿತ್ರೆ ರೂಪದ ಇಂಥ ಸಂಗತಿಗಳ ಸಂಗ್ರಹದ ಕಡೆಗೂ ಕಾರ್ಯಕರ್ತ ಅವಶ್ಯ ಗಮನ ಕೊಡಬೇಕು. ಕೆಲವೊಮ್ಮೆ ಆ ಹಸ್ತಪ್ರತಿಗಳನ್ನು ಇಟ್ಟ ಸ್ಥಳ, ಕಟ್ಟಲು ಉಪಯೋಗಿಸಿದ ವಸ್ತ್ರ, ಬಳಸಲಾದ ಕ್ರಿಮಿನಿರೋಧಕವಸ್ತು ಇತ್ಯಾದಿಗಳೂ ವಿಶೇಷ ಮಾಹಿತಿ ಒದಗಿಸುವ ಸಂಭವವಿರುತ್ತದೆ. ಸಾಮಾನ್ಯವಾಗಿ ಹಸ್ತಪ್ರತಿಗಳನ್ನು ಕಟ್ಟಲು ಕೆಂಪು ವಸ್ತ್ರವನ್ನು, ಒಳಗೆ ಹಾವಿನ ಪೊರೆಯನ್ನು ಬಳಸುವುದರ ಔಚಿತ್ಯ ಇತ್ಯಾದಿಗಳನ್ನೂ ಲಕ್ಷಿಸಬೇಕು.

ಕೃತಿಯೊಂದನ್ನು 'ಹಸ್ತಪ್ರತಿರೂಪ'ದ ಜೊತೆ, ಪಾರಂಪರಿಕವಾಗಿ 'ಮೌಖಿಕ ರೂಪ'ದಲ್ಲಿಯೂ ಕೆಲವೆಡೆ ಉಳಿಸಿಕೊಂಡು ಬಂದಿರುತ್ತಾರೆ. ಸಾಲೊಟಗಿಯಲ್ಲಿ ಡಂಗುರ ಪದಗಳನ್ನು, ಕೊಡೇಕಲ್ಲದಲ್ಲಿ ಕಾಲಜ್ಞಾನ ವಚನಗಳನ್ನು ವಿಶಿಷ್ಟ ಬಗೆಯಲ್ಲಿ, ವಿಶಿಷ್ಟವಾದ್ಯಗಳೊಂದಿಗೆ ಹಾಡುತ್ತಿದ್ದು, ಇಂಥಲ್ಲಿ ಹಸ್ತಪ್ರತಿ ಸಂಗ್ರಹದೊಂದಿಗೆ ಧ್ವನಿಮುದ್ರಣಕಾರ್ಯವನ್ನೂ ಪೂರೈಸಿಕೊಳ್ಳಬೇಕು. ಕೆಲವೆಡೆ ಹಸ್ತಪ್ರತಿ ಎಂದೋ ಹಾಳಾಗಿ ಕೇವಲ ಅದರ ಪದ್ಯಗಳನ್ನು ಪರಂಪರಾಗತವಾಗಿ ಹಾಡುತ್ತಿರಬಹುದು. ರಾಘವಾಂಕನ ಅನುಪಲಬ್ಧ ಶರಭಚಾರಿತ್ರದ ಬಿಡಿಪದ್ಯಗಳನ್ನು ಬಳ್ಳಾರಿ ಜಿಲ್ಲೆಯಲ್ಲಿ ಹಾಡುವುದಾಗಿ ತಿಳಿದುಬಂದಿದೆ. ಉಳಿದುನಿಂತ ಈ ಮತ್ತು ಇಂಥ ಸಂಪತ್ತನ್ನು ಕಷ್ಟಪಟ್ಟು ರಕ್ಷಿಸಿಕೊಳ್ಳಬೇಕು.

ಅನುಪಲಬ್ಧ ಕೃತಿಗಳ ಹಸ್ತಪ್ರತಿ ಇಲ್ಲವೆ ಅಪರೂಪ ಹಸ್ತಪ್ರತಿಗಳ ಶೋಧಕ್ಕೆ ಕ್ಷೇತ್ರಕಾರ್ಯದಲ್ಲಿ ಬಹುದೊಡ್ಡ ಮಹತ್ವವಿದೆ. ಆದುದರಿಂದ ಕ್ಷೇತ್ರ ಕಾರ್ಯಕರ್ತ ಅಂಥವುಗಳನ್ನು ನಿರಂತರ ಬೆನ್ನಟ್ಟಿ ನಡೆಯಬೇಕು. ಕವಿರಾಜಮಾರ್ಗ ಹಸ್ತಪ್ರತಿಯ ಸುಳುಹು ಹಿಡಿದು, ಬೀದರ ಜಿಲ್ಲೆಯಲ್ಲಿ ಅದನ್ನು ಪತ್ತೆಹಚ್ಚಲು ನಾನು ೧೦ ವರ್ಷ ನಿರಂತರ ಪ್ರಯತ್ನಮಾಡಬೇಕಾಯಿತು. ಧಾರವಾಡ ಪ್ರದೇಶದಲ್ಲಿ 'ಗಂಧಹಸ್ತಿ ಮಹಾಭಾಷ್ಯ' ಹಸ್ತಪ್ರತಿಯಿದೆಯೆಂಬ ವದಂತಿಯನ್ನು ಹಿಂಬಾಲಿಸುವ ಪ್ರಯತ್ನ ಇಂದು ನಡೆಯಬೇಕಾಗಿದೆ.

ಹಸ್ತಪ್ರತಿ ಸಣ್ಣದಿರಲಿ ದೊಡ್ಡದಿರಲಿ,ಉಪಯುಕ್ತವಿರಲಿ ನಿರುಪಯುಕ್ತವಿರಲಿ, ಅಲಕ್ಷಿಸದೆ ಅವೆಲ್ಲವನ್ನೂ ಸಂಗ್ರಹಿಸಬೇಕು. ಏಕೆಂದರೆ ಒಂದು ದೃಷ್ಟಿಯಿಂದ ನಿರುಪಯುಕ್ತವೆನಿಸಿದರೂ ಇನ್ನೊಂದು ದೃಷ್ಟಿಯಿಂದ ಅದು ತುಂಬ ಉಪಯುಕ್ತವಾಗಿರುತ್ತದೆ. ಆರಾ ಹಸ್ತಪ್ರತಿಭಾಂಡಾರದಲ್ಲಿಯ ಆಚಣ್ಣನ ವರ್ಧಮಾನ ಪುರಾಣದ ಗರಿಯ ಮೇಲಿನ ಒಂದು ಕಂದಪದ್ಯ ನಾಗವರ್ಮನ ವರ್ಧಮಾನಪುರಾಣ ಶೋಧನೆಗೆ ಎಂಥ ಬೆಲೆಯುಳ್ಳ ಸೂಚನೆ ನೀಡಿತೆಂಬುದನ್ನು ಇಲ್ಲಿ ನೆನೆಯಬಹುದು.

ಹಸ್ತಪ್ರತಿಯನ್ನು ಅವಲೋಕಿಸುವಲ್ಲಿ ಅವಸರ ಎಷ್ಟೂ ಸಲ್ಲದು. ಇದರಿಂದಾಗಿ ಕೃತಿಗಳು ಕಣ್ತಪ್ಪಿ ಮರೆಯಲ್ಲುಳಿಯಬಹುದು. ಶ್ರೀ ಭುಜಬಲಿಶಾಸ್ತ್ರಿಗಳ ಕಣ್ತಪ್ಪಿಸಿ ಮೂಡಬಿದರೆಯಲ್ಲಿ ಉಳಿದಿದ್ದ ನಾಗವರ್ಮನ ವರ್ಧಮಾನಪುರಾಣ ಶ್ರೀ ಸಣ್ಣಯ್ಯನವರಿಂದ ಬೆಳಕಿಗೆ ಬಂದುದನ್ನು ಇಲ್ಲಿ ನೆನೆಯಬೇಕು. ಹಳಕಟ್ಟಿಯವರು "ವಿಜಾಪೂರ ಜಿಲ್ಲೆಯಲ್ಲಿದ್ದಾಗ ನಾನು ಹೋದ ಗ್ರಾಮಗಳಲ್ಲಿ ಅವುಗಳ (ವಚನಗಳ) ವಿಷಯವಾಗಿ ನಾನು ಶೋಧ ಮಾಡುತ್ತಿದ್ದು, ನನಗೆ ದೊರೆತ ವಚನಗಳಲ್ಲಿ ನನಗೆ ಮಹತ್ವವೆಂದು ಕಂಡ ವಚನಗಳನ್ನಷ್ಟೇ ನಾನು ಬರೆದುಕೊಳ್ಳುತ್ತ ಬಂದೆನು" ಎಂದೂ, ಆರ್. ನರಸಿಂಹಾಚಾರ್ ಅವರು "ಹಿಂದೆ ಮದರಾಸ್ ಪ್ರಾಚ್ಯಕೋಶಾಲಯ ಮುಂತಾದ ಸ್ಥಳಗಳಲ್ಲಿ ಪುಸ್ತಕಗಳನ್ನು ಪರಿಶೀಲಿಸಿದಾಗ ಪ್ರಥಮ ಸಂಪುಟಕ್ಕೆ ಬೇಕಾದ ವಿಷಯಗಳನ್ನು ಮಾತ್ರ ವಿಸ್ತಾರವಾಗಿ ಗುರುತು ಹಾಕಿಕೊಂಡು, ಅವಶ್ಯಕತೆ ಬಿದ್ದಾಗ ಪುನಃ ಹೋಗಿ ನೋಡಬಹುದೆಂಬ ಭಾವನೆಯಿಂದ ಮಿಕ್ಕ ವಿಷಯಗಳನ್ನು ಬಹಳ ಸಂಗ್ರಹವಾಗಿ ಗುರುತು ಹಾಕಿದ್ದೆನು. ಮತ್ತೊಂದಾವೃತ್ತಿ ಹೋಗಿ ನೋಡಿದಾಗ ಹಿಂದೆ ನೋಡಿದ್ದ ಪುಸ್ತಕಗಳಲ್ಲಿ ಹಲವು ನನ್ನ ದುರಾದೃಷ್ಟದಿಂದ ಹುಳುಗಳ ಬಾಯಿಗೆ ತುತ್ತಾಗಿ ನಾಶವಾಗಿ ಹೋಗಿದ್ದವು. ಹೀಗೆ ನಷ್ಟವಾದ ಪುಸ್ತಕಗಳ ಪ್ರತ್ಯಂತರಗಳು ಬೇರೆಕಡೆ ಎಷ್ಟು ಹುಡುಕಿದರೂ ದೊರೆಯದೆ ಹೋದುವೆಂದೂ" ಹೇಳಿದ ಮಾತುಗಳಿಂದ ಕ್ಷೇತ್ರಕಾರ್ಯದಲ್ಲಿ ಇವರು ತೋರಿದ ಉದಾಸೀನತೆ ಕಾರಣವಾಗಿ ನಮಗಾದ ನಷ್ಟವನ್ನು ಊಹಿಸಿಕೊಳ್ಳಬಹುದು.

ಸಂಗ್ರಹಿತ ಅಥವಾ ಸಂದರ್ಶಿತ ಹಸ್ತಪ್ರತಿಗಳ ಸರಿಯಾದ ಸವಿವರ ಮಾಹಿತಿ ಬರೆದುಕೊಳ್ಳಲು ಕಾರ್ಯಕರ್ತ ತಪ್ಪಬಾರದು. ಇಲ್ಲದಿದ್ದರೆ ಮುಂದಿನ ಕಾಲಾವಧಿಯಲ್ಲಿ ಸಂಶೋಧಕ ತುಂಬ ತೊಂದರೆಪಡಬೇಕಾಗುತ್ತದೆ. ಶ್ರೀ ಕೆ. ಬಿ. ಪಾಠಕ ಅವರು ನೋಡಿದ್ದ, ಫ್ಲೀಟರೂ ಬಳಸಿದ್ದ "ಉಪಸರ್ಗಕೇವಲಿಗಳ ಕಥೆ" ಶೀರ್ಷಿಕೆಯ ವಡ್ಡಾರಾಧನೆಯ ಹಸ್ತಪ್ರತಿ ಕೊಲ್ಲಾಪೂರ ಲಕ್ಷ್ಮೀಸೇನಭಟ್ಟಾರಕ ಬಸದಿಗೆ ಸೇರಿದುದೆಂಬುದನ್ನು ಪತ್ತೆಹಚ್ಚಲು ಡಾ. ಎ. ಎನ್ ಉಪಾಧ್ಯೆ ಅವರಿಗೆ ಹಲವು ದಶಕಗಳೇ ಬೇಕಾದವು. ಹುಲ್ಲೂರು ಶ್ರೀನಿವಾಸ ಜೋಯಿಸರು ನೋಡಿದ್ದ ಹಂಪೆಯ ಮಹಾಲಿಂಗನ ಬಾಲರಾಮನ ಸಾಂಗತ್ಯ, ಕೆಂಚಶೆಟ್ಟಿಸುತ ರಾಮಕೃತ ಸಿರುಮನ ಸಾಂಗತ್ಯದ

ಏಕೈಕ ಹಸ್ತಪ್ರತಿಗಳು ಸಂಶೋಧಕರು ಜಾಲವೊಡ್ಡಿ ಹುಡುಕಿದರೂ ಅನೇಕವರ್ಷ ಸಿಗಲೇ ಇಲ್ಲ. ಇತ್ತೀಚೆ ಮಾತ್ರ ಲಭ್ಯವಾದವು. ಹಳಕಟ್ಟಿಯವರ "ವಚನಶಾಸ್ತ್ರಸಾರ" ದಲ್ಲಿಯ ಎಷ್ಟೋ ವಚನಗಳಿಗೆ ಇದ್ದ ಮೂಲ ಆಕರಗ್ರಂಥಗಳು ಇಂದು ನಮಗೆ ಸಿಗುತ್ತಿಲ್ಲ. "ಮೂವರ್ರಾಯರನೆ ಮಾರುವಂತೆಸೆದಿರ್ಕುಂ" ಎಂಬ ಪದ್ಯವನ್ನೊಳ ಗೊಂಡ ಗಿರಿಜಾಕಲ್ಯಾಣ ಹಸ್ತಪ್ರತಿಯನ್ನು ಕವಿಚರಿತೆಕಾರರು ಎಲ್ಲಿ ನೋಡಿದ್ದರೆಂಬುದು, ಇದಲ್ಲದೆ ಕವಿಚರಿತೆಯನ್ನು ಬರೆಯುವಲ್ಲಿ ಅವರು ಬಳಸಿದ್ದ ಕೆಲವು ಹಸ್ತಪ್ರತಿಗಳು ಎಲ್ಲಿಯವು ? ಎಂಬುದು, ಇನ್ನೂ ಸಮಸ್ಯೆಯಾಗಿ ಉಳಿದಿವೆ. ಕ್ಷೇತ್ರಕಾರ್ಯಕರ್ತನು ಈ ಎಲ್ಲ ತಿಳಿವಳಿಕೆಯ ಹಿನ್ನೆಲೆಯಲ್ಲಿ,ತಾನು ಸಂಗ್ರಹಿಸಿದ ಹಸ್ತಪ್ರತಿಗಳ ಗಂಟು ಕಟ್ಟುವ, ಗ್ರಂಥಾಲಯಕ್ಕೆ ರವಾನಿಸುವ ಇತ್ಯಾದಿ ಸಾಮಾನ್ಯವೆನಿಸಬಹುದಾದ ಕೆಲಸಗಳನ್ನೂ ತುಂಬ ಜಾಗರೂಕತೆಯಿಂದ ಮಾಡಬೇಕೆಂದು ಬೇರೆ ಹೇಳಬೇಕಿಲ್ಲ. ಒಡೆಯನ ವಶದಿಂದ ಕ್ಷೇತ್ರಕಾರ್ಯಕರ್ತನಿಗೆ ಹಸ್ತಾಂತರವಾಗಿಯೂ "ಮೂರ್ಖಹಸ್ತೇ ನದಾತವ್ಯಂ" ಎಂದು ಹಸ್ತಪ್ರತಿ ಹಲುಬುವಂತಾಗಬಾರದು.

ಕರ್ನಾಟಕದಲ್ಲಿ ಹಸ್ತಪ್ರತಿಗಳು ಹಾಳಾಗಿ ಹೋದುದೂ ಹೇರಳ, ಉಳಿದು ಬಂದುದೂ ಹೇರಳ. ನಮ್ಮ ನಾಡಿನಲ್ಲಿ ಇವುಗಳ ಪರಿವೀಕ್ಷಣೆ ನೂರು ವರ್ಷಗಳಿಂದ ನಡೆದರೂ ಸರಕಾರವಾಗಲೀ, ವಿಶ್ವವಿದ್ಯಾಲಯದಂಥ ಸಂಸ್ಥೆಗಳಾಗಲೀ ವ್ಯವಸ್ಥಿತ ವಾಗಿ, ಕ್ರಮವತ್ತಾಗಿ ಈ ಕಾರ್ಯಮಾಡುವ ಗೋಜಿಗೆ ಹೋಗದೆ, ಮನಸ್ಸು ಬಂದಾಗ ಆಗಿಷ್ಟು ಈಗಿಷ್ಟು ಮಾಡಿ ಮುಗಿಸುತ್ತಲಿವೆ. ಹೀಗಾಗಿ ಹಸ್ತಪ್ರತಿಗಳನ್ನು ಮನೆಯಲ್ಲಿ ಮಡಗಿಕೊಳ್ಳುವ ಸಾಮಾನ್ಯರು, ಭಾಂಡಾರದಲ್ಲಿ ರಕ್ಷಿಸಬೇಕಾದ ಅಧಿಕಾರಿಗಳು–ಈ ಇಬ್ಬರಿಂದಲೂ ಹಸ್ತಪ್ರತಿಗಳಿಗೆ ಅನ್ಯಾಯವಾಗುತ್ತಲಿದೆಯೆನ್ನಬೇಕು.

## ಸಂಗ್ರಹದ ಇತಿಹಾಸ :

ಕರ್ನಾಟಕದಲ್ಲಿ ಕನ್ನಡ ಹಸ್ತಪ್ರತಿಗಳು, ಇವುಗಳಿಗೆ ಎರಡನೆಯದಾಗಿ ಸಂಸ್ಕೃತ ಹಸ್ತಪ್ರತಿಗಳು ಹೇರಳವಾಗಿವೆ. ಪ್ರಾಕೃತ, ಮರಾಠಿ, ತೆಲುಗು, ತಮಿಳು, ಮಲಯಾಳಿ ಹಸ್ತಪ್ರತಿಗಳು ವಿರಳವಾಗಿವೆ. ಧಾರ್ಮಿಕ ಕೇಂದ್ರಗಳಲ್ಲಿ ಪ್ರತಿಷ್ಠಿತ–ಸಾಹಿತ್ಯಾಭ್ಯಾಸಿಗಳ ಮನೆತನಗಳಲ್ಲಿ ಚದರಿಹೋದ ಇವುಗಳ ಕ್ಷೇತ್ರಕಾರ್ಯ ಕೈಕೊಂಡ ಪ್ರಥಮವ್ಯಕ್ತಿ ಕರ್ನಲ್ ಮೆಕೆಂಝಿ. ಇವನ ಕೆಲಸವನ್ನು ಸಿ. ಪಿ. ಬ್ರೌನ್ ಮೊದಲಾದವರು ಮುಂದು ವರಿಸಿದರು. ಮದ್ರಾಸ ಪ್ರಾಚ್ಯಸಂಶೋಧನಾಲಯ(೧೮೫೮)ದಲ್ಲಿ ಸಂಗ್ರಹಿಸಲಾದ ಈ ಸಂಪತ್ತಿನ ಕೆಲಭಾಗವನ್ನು ೧೯೬೭ರಲ್ಲಿ ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆ, ಧಾರವಾಡದ ಕನ್ನಡ ಸಂಶೋಧನ ಸಂಸ್ಥೆ, ಮೈಸೂರಿನ ರಾಜ್ಯಪುರಾತತ್ವ ಇಲಾಖೆ ಗಳಿಗೆ ಹಂಚಿಕೊಡಲಾಯಿತು. ಒಟ್ಟಿನಲ್ಲಿ ನಮ್ಮ ಹಸ್ತಪ್ರತಿಗಳ ಸಂಗ್ರಹಕಾರ್ಯ ಮೊಟ್ಟ ಮೊದಲು ಮದ್ರಾಸ ನೆಲೆಯಿಂದಲೇ ಆರಂಭವಾಯಿತೆಂದು ತಿಳಿದುಬರುತ್ತದೆ.

ಆಮೇಲೆ ಅಸ್ತಿತ್ವಕ್ಕೆ ಬಂದ ಮೈಸೂರಿನ ಪುರಾತತ್ವ ಇಲಾಖೆ (೧೮೮೪), ಮುಖ್ಯಸ್ಥರಾದ ಬಿ. ಎಲ್. ರೈಸ್ ಅವರ ಮೂಲಕ ಹಸ್ತಪ್ರತಿ ಸಂಗ್ರಹಕಾರ್ಯವನ್ನೂ ಪ್ರಾರಂಭಿಸಿತು. ೧೮೯೧ರಲ್ಲಿ ಇದರಿಂದ ಹಸ್ತಪ್ರತಿ ಭಾಂಡಾರವೇ ಬೇರೆಯಾಗಿ "ಗೌರ್ನಮೆಂಟ್ ಓರಿಯಂಟಲ್ ಲೈಬ್ರರಿ" ಹೆಸರು ಹೊತ್ತು, ಅನೇಕ ಸಂಸ್ಕೃತ, ಕನ್ನಡ ಹಸ್ತಪ್ರತಿಗಳನ್ನು ಸಂಗ್ರಹಿಸಿತು. ೧೯೬೬ರಲ್ಲಿ ಇಲ್ಲಿಯ ಎಲ್ಲ ಕನ್ನಡ ಹಸ್ತಪ್ರತಿಗಳನ್ನು ಕನ್ನಡ ಅಧ್ಯಯನ ಸಂಸ್ಥೆಗೆ ವರ್ಗಾಯಿಸಲಾಯಿತು.

ಮೂರನೆಯ ಘಟ್ಟದಲ್ಲಿ ಹಸ್ತಪ್ರತಿ ಸಂಗ್ರಹಕಾರ್ಯ ಆರಂಭವಾದುದು ಉತ್ತರ ಕರ್ನಾಟಕದಲ್ಲಿ. ಈ ಕಾರ್ಯವನ್ನು ನೇರವಾಗಿ ಕೈಗೆತ್ತಿಕೊಂಡ ಪ್ರಥಮ ಶ್ರೇಯಸ್ಸು ೧೯೩೯ರಲ್ಲಿ ಅಸ್ತಿತ್ವಕ್ಕೆ ಬಂದ ಕನ್ನಡ ಸಂಶೋಧನಸಂಸ್ಥೆಗೆ ಸಲ್ಲುತ್ತದೆ. ಇದೇ ಸಮಯದಲ್ಲಿ ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿಸಂಸ್ಥೆ ಅನೇಕ ಹಸ್ತಪ್ರತಿಗಳನ್ನು ಸಂಗ್ರಹಿಸಿತಾದರೂ ಈಗ ಅಲ್ಲಿ ಒಂದೂ ಪ್ರತಿ ಉಳಿದಿಲ್ಲ. ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿಯೂ ಈ ಕಾಲದಲ್ಲಿ ಕೆಲವು ಹಸ್ತಪತ್ರಿಗಳು ಸಂಗ್ರಹಿಸಲ್ಪಟ್ಟವು. ೧೯೬೨ರಲ್ಲಿ ಡಾ. ಆರ್. ಸಿ. ಹಿರೇಮಠ ಅವರ ನೇತೃತ್ವದಲ್ಲಿ ಕನ್ನಡ ಅಧ್ಯಯನಪೀಠ ಕೈಗೆತ್ತಿಕೊಂಡ "ಸಮಗ್ರ ವಚನವಾಙ್ಮಯ ಸಂಗ್ರಹ, ಸಂಸ್ಕರಣ ಮತ್ತು ಪ್ರಕಟಣ ಯೋಜನೆ"ಯ ಅಂಗವಾಗಿ ಅಲ್ಲಿ ಹಸ್ತಪ್ರತಿ ಸಂಗ್ರಹಶಾಖೆ ಅಸ್ತಿತ್ವಕ್ಕೆ ಬಂದಿತು. ಇದರಲ್ಲಿ ಡಾ. ಹಳಕಟ್ಟಿಯವರು ಸಂಗ್ರಹಿಸಿದ್ದ ೧೦೦೦ ಹಸ್ತಪ್ರತಿಗಳೂ ಸೇರಿವೆಯೆಂಬುದನ್ನು ಗಮನಿಸಬೇಕು. ಈ ಘಟ್ಟದಲ್ಲಿ ಬಾದಾಮಿ ತಾಲೂಕಿನ ಶಿವಯೋಗ ಮಂದಿರ, ಬಾಗಿಲುಕೋಟೆಯ ಉಮಾಪತಿಶಾಸ್ತ್ರಿಗಳಿಂದ ಅನೇಕ ಹಸ್ತಪ್ರತಿಗಳು ಸಂಗ್ರಹಿಸಲ್ಪಟ್ಟವು.

ನಾಲ್ಕನೆಯ ಹಂತದಲ್ಲಿ ಬೆಂಗಳೂರು ಪ್ರದೇಶದಲ್ಲಿ ಈ ಚಟುವಟಿಕೆ ಕಾಣಿಸಿಕೊಂಡಿತು. ಬೆಂಗಳೂರು ವಿಶ್ವವಿದ್ಯಾಲಯ, ಕನ್ನಡ ಸಾಹಿತ್ಯ ಪರಿಷತ್ತು, ಬಿ.ಎಂ.ಶ್ರೀ. ಪ್ರತಿಷ್ಠಾನಗಳ ಪ್ರಯತ್ನವನ್ನು ಇಲ್ಲಿ ಎತ್ತಿಹೇಳಬಹುದಾಗಿದೆ.

ಗುಲ್ಬರ್ಗಾ ವಿಶ್ವವಿದ್ಯಾಲಯದಲ್ಲಿ ನಡೆದ ಈ ಕಾರ್ಯವನ್ನು ಐದನೆಯ ಹಂತವೆಂದು ಗುರುತಿಸಬಹುದು. ಇದೇ ಸುಮಾರಿಗೆ ಮಂಗಳೂರು ವಿಶ್ವವಿದ್ಯಾಲಯ, ಧರ್ಮಸ್ಥಳದ ಮಂಜುನಾಥೇಶ್ವರ ಸಂಸ್ಕೃತಿ ಪ್ರತಿಷ್ಠಾನಗಳು ಹಸ್ತಪ್ರತಿ ಸಂಗ್ರಹದತ್ತ ಆಸಕ್ತಿವಹಿಸಿವೆ. ಹೀಗೆ ಒಳನಾಡಿನಲ್ಲಿ ಹಸ್ತಪ್ರತಿ ಸಂಗ್ರಹಕಾರ್ಯದಲ್ಲಿ ೫ ಹಂತಗಳು ಕಂಡುಬರುತ್ತಿದ್ದು, ಬೆಂಗಳೂರಿನ ಸಿ. ಮಹಾದೇವಪ್ಪ, ತಿಪಟೂರಿನ ಎಂ.ಎಸ್. ಬಸವರಾಜಯ್ಯ, ಮೈಸೂರಿನ ಪಿ.ಎಂ. ಗಿರಿರಾಜು ಮೊದಲಾದವರೂ ತಕ್ಕಮಟ್ಟಿಗೆ ಹಸ್ತಪ್ರತಿಗಳನ್ನು ಸಂಗ್ರಹಿಸಿ ಇಟ್ಟುಕೊಂಡಿದ್ದಾರೆ. ಇದು ನಮ್ಮ ಹಸ್ತಪ್ರತಿಶೋಧದ ಆಧುನಿಕ ಇತಿಹಾಸ.

ಇವುಗಳಲ್ಲದೆ ಈ ಹಿಂದೆ ವಿವರಿಸಿದ ಒಳನಾಡಿನ ಧಾರ್ಮಿಕ ಕೇಂದ್ರಗಳಾದ ಶ್ರವಣಬೆಳ್ಗೊಳ, ಮೂಡಬಿದರೆ, ಹುಮ್ಮಚ, ವರಾಂಗ, ಕಾರ್ಕಳ, ಹೊಸಪೇಟೆಯ

ಕೊಟ್ಟೂರುಸ್ವಾಮಿಮಠ, ಗದುಗಿನ ತೋಂಟದಾರ್ಯಮಠ, ಹುಬ್ಬಳ್ಳಿಯ ಮೂರು ಸಾವಿರಮಠ, ಚಿತ್ರದುರ್ಗದ ಬೃಹನ್ಮಠ, ಸಿರಿಗೆರೆಯ ಮಠ ಇತ್ಯಾದಿ ಧಾರ್ಮಿಕ ಸಂಸ್ಥೆಗಳಲ್ಲಿ ಪ್ರಾಚೀನ ಕಾಲದಿಂದಲೂ ಬೆಳೆದುಬಂದ ಹಸ್ತಪ್ರತಿ ಭಾಂಡಾರಗಳಿವೆ. ಹೊರನಾಡಿನಲ್ಲಿ ಕೊಲ್ಲಾಪುರದ ಲಕ್ಷ್ಮೀಸೇನ ಭಟ್ಟಾರಕ ಜೈನಮಠ, ಕಾರಾಂಜಾ, ಬಾಹುಬಲಿ ಕ್ಷೇತ್ರ, ಹೈದ್ರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾಲಯ, ಬಿಹಾರದ ಆರಾಪಟ್ಟಣ ಮೊದಲಾದವುಗಳಲ್ಲಿ ಬೆಳೆದುಬಂದ ಭಾಂಡಾರಗಳಿವೆ. ಇವೆಲ್ಲ ಕೂಡಿಸಿದರೆ ಒಟ್ಟು ಕಟ್ಟುಗಳ ಸಂಖ್ಯೆ ೨೫ ಸಾವಿರವನ್ನು ಸಮೀಪಿಸುತ್ತದೆ. ಹುಡುಕಿದರೆ ಇನ್ನೂ ೧೫ ಸಾವಿರ ಕಟ್ಟುಗಳು ಸಿಗಬಹುದು. ಇಷ್ಟು ಹಿನ್ನೆಲೆಯಲ್ಲಿ ಆಧುನಿಕ ಹಸ್ತಪ್ರತಿಭಾಂಡಾರಗಳನ್ನು ಕುರಿತು ಹೀಗೆ ವಿವರಿಸಬಹುದು.

## ಆಧುನಿಕ ಹಸ್ತಪ್ರತಿಭಾಂಡಾರಗಳು:

ಕರ್ನಾಟಕದ ಹಸ್ತಪ್ರತಿಗಳ ಪರಿವೀಕ್ಷಣ ಮತ್ತು ಸಂಗ್ರಹಕಾರ್ಯಕ್ಕೆ ಶ್ರೀಕಾರ ಹಾಕಿದವ ಕರ್ನಲ್ ಮೆಕೆಂಝಿ. ಲೆವಿಸ್ ದ್ವೀಪದಲ್ಲಿ ೧೭೫೩ರಲ್ಲಿ ಜನಿಸಿದ ಈತ ೧೭೮೨ರಲ್ಲಿ ಭಾರತಕ್ಕೆ ಬಂದು, ಈಸ್ಟ ಇಂಡಿಯಾ ಕಂಪನಿಯಲ್ಲಿ (ಮದ್ರಾಸ) ಮಿಲಿಟರಿ ಎಂಜನೀಯರ್ ಹುದ್ದೆ ಸ್ವೀಕರಿಸಿದ. ೧೭೯೬ರಿಂದ ಹವ್ಯಾಸವೆಂಬಂತೆ ಪ್ರಾಚ್ಯವಸ್ತುಗಳ ಸಂಗ್ರಹಕಾರ್ಯವನ್ನು ಕೈಕೊಂಡ ಇವನು, ಹಸ್ತಪ್ರತಿಗಳ ಸಂಗ್ರಹ ಕಾರ್ಯಕ್ಕೂ ಗಮನಕೊಟ್ಟನು. ಅಂದಿನಿಂದ ಇಂದಿನ ವರೆಗೆ ೨೦೦ ವರ್ಷಗಳ ಅವಧಿಯಲ್ಲಿ ಈ ಕಾರ್ಯವನ್ನು ಪೂರೈಸಿದ ಆಧುನಿಕ ಹಸ್ತಪ್ರತಿಭಾಂಡಾರಗಳನ್ನು ಕುರಿತು ಇಲ್ಲಿ ವಿವೇಚಿಸಬಹುದು.

**೧. ಗವರ್ನಮೆಂಟ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ ಲೈಬ್ರರಿ, ಮದ್ರಾಸ:** ಮೇಲೆ ಹೇಳಿದ ಕರ್ನಲ್ ಮೆಕೆಂಝಿ ೧೭೯೬ರಿಂದಲೂ ಸಂಗ್ರಹಿಸಿದ್ದ ಪ್ರಾಚ್ಯವಸ್ತುಗಳ ಬಹು ದೊಡ್ಡ ಸಂಗ್ರಹವನ್ನು ಈಸ್ಟ ಇಂಡಿಯಾ ಕಂಪನಿ ಖರೀದಿಸಿ ೧೮೨೩, ೧೮೨೫, ಮತ್ತೊಮ್ಮೆ ಹೀಗೆ ಮೂರು ಸಲ ಲಂಡನ್ನಿಗೆ ರವಾನಿಸಿತು. ಇವುಗಳಲ್ಲಿ ಬಹಳಷ್ಟು ಲಂಡನ್ನಿನ ವಿಕ್ಟೋರಿಯಾ ಆಲ್ಬರ್ಟ್ ವಸ್ತುಸಂಗ್ರಹಾಲಯ, ಮತ್ತು ಇಂಡಿಯಾ ಆಫೀಸ್ ಲೈಬ್ರರಿಗಳಲ್ಲಿ ರಕ್ಷಿಸಲ್ಪಟ್ಟವು. ಹೀಗೆ ವಲಸೆಹೋಗಿ ಮದ್ರಾಸದಲ್ಲಿ ಉಳಿದಿದ್ದ ಸಂಗ್ರಹ ಅಲ್ಲಿಯ ಕಾಲೇಜು ಲೈಬ್ರರಿಗೆ, ಆಮೇಲೆ ಲಿಟರರಿ ಸೊಸೈಟಿಗೆ, ಕೊನೆಗೆ ೧೮೬೮ರಲ್ಲಿ ಸ್ಥಾಪಿತವಾದ ಗವರ್ನಮೆಂಟ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ ಲೈಬ್ರರಿಗೆ ವರ್ಗಾಯಿಸಲ್ಪಟ್ಟಿತು.[೧]

---

೧. ಕಲಕತ್ತೆಯಲ್ಲಿ ಇನ್ನೆರಡು ಕಡೆಗೆ ಇವನ ಸಂಗ್ರಹವನ್ನು ರಕ್ಷಿಸಲಾಗಿದೆ ಎಂದು An alphabetical index of kannada manuscripts in the government Oriental Manuscripts Library Madras (T. chandrashekhar 1952) ಕೃತಿಯಿಂದ ತಿಳಿದುಬರುತ್ತದೆ.

೧೮೦೩ರಿಂದ ೧೮೧೧ರ ವರೆಗೆ ಭಾರತದಲ್ಲಿದ್ದ ಡಾ. ಲೇಡನ್ ಸಂಗ್ರಹಿಸಿದ್ದ ಕನ್ನಡ, ತೆಲುಗು ಮತ್ತು ತಮಿಳು ಭಾಷೆಯ ಹಸ್ತಪ್ರತಿಗಳನ್ನು ಮದ್ರಾಸ್ ಇಂಡಿಯಾ ಹೌಸ್ ಲೈಬ್ರರಿಯಲ್ಲಿ ರಕ್ಷಿಸಲಾಗಿತ್ತು. ಈ ಸಂಗ್ರಹ ೧೮೪೪ರಲ್ಲಿ ಮದ್ರಾಸ ಲಿಟರರಿ ಸೊಸೈಟಿಗೆ ವರ್ಗಾಯಿಸಲ್ಪಟ್ಟಿತು. ಸಿ. ಪಿ. ಬ್ರೌನ್ ಇದರ ಸೂಚಿಯನ್ನು ಜರ್ನಲ್ ಆಫ್ ದಿ ಲಿಟರರಿ ಸೊಸೈಟಿಯ ೩೩ನೆಯ ನಂಬರಿನ ಜರ್ನಲ್‌ದಲ್ಲಿ ಪ್ರಕಟಿಸಿದ್ದಾನೆ. ಈ ಸಂಗ್ರಹ ೧೮೪೭ರಲ್ಲಿ ಮದ್ರಾಸಿನ ಕಾಲೇಜು ಲೈಬ್ರರಿಗೆ, ಕೊನೆಗೆ ಮೇಲೆ ಹೇಳಿದ ಮದ್ರಾಸ ಗವರ್ನಮೆಂಟ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ ಲೈಬ್ರರಿಗೆ ವರ್ಗಾಯಿಸಲ್ಪಟ್ಟಿತು.

ಸಿ. ಪಿ. ಬ್ರೌನ್ ವೈಯಕ್ತಿಕವಾಗಿ ಅನೇಕ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದು ಅವುಗಳೆಲ್ಲ ಪ್ರಧಾನವಾಗಿ ತೆಲುಗು, ಸಂಸ್ಕೃತ ಭಾಷೆಗಳಿಗೆ ಸಂಬಂಧಿಸಿದುವು. ಈ ಸಂಗ್ರಹವೂ ಕೊನೆಗೆ ಮದ್ರಾಸ ಗವರ್ನಮೆಂಟ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ ಲೈಬ್ರರಿಗೆ ವರ್ಗಾಯಿಸಲ್ಪಟ್ಟವು.[೨]

ಹೀಗೆ ಮೂರು ಬಗೆಯ (ಮೆಕೆಂಝಿ. ಲೇಡನ್, ಬ್ರೌನ್) ಸಂಗ್ರಹಗಳನ್ನೊಳಗೊಂಡು ಬೆಳೆದ ಈ ಸಂಸ್ಥೆಯಲ್ಲಿ ಕವಿರಾಜಮಾರ್ಗ, ಲಿಂಗಣಾರಾಧ್ಯನ ವೃತ್ತಿಯುಳ್ಳ ಶಬ್ದಮಣಿದರ್ಪಣ, ಸಾಹಸಭೀಮವಿಜಯ ಮೊದಲಾದವುಗಳಿಗೆ ಸಂಬಂಧಿಸಿದ ಉತ್ತಮೋತ್ತಮ ಹಸ್ತಪ್ರತಿಗಳೂ ಬಹುಸಂಖ್ಯೆ ಕೈಫಿಯತ್ತುಗಳೂ ಹಾಡುಗಳೂ ಕಂಡುಬರುತ್ತವೆ. ೧೯೬೭ರಲ್ಲಿ ಮೆಕೆಂಝಿ ಸಂಗ್ರಹವನ್ನು ಹೊರತುಪಡಿಸಿ ಎಲ್ಲ ಕನ್ನಡ ಹಸ್ತಪ್ರತಿಗಳನ್ನು ಮೈಸೂರು ಕನ್ನಡ ಅಧ್ಯಯನ ಸಂಸ್ಥೆ, ಪುರಾತತ್ವ ಇಲಾಖೆ ಮತ್ತು ಧಾರವಾಡ ಕನ್ನಡ ಸಂಶೋಧನ ಸಂಸ್ಥೆಗಳಿಗೆ ಹಂಚಿಕೊಡಲಾಯಿತು.

ಹಸ್ತಪ್ರತಿ ಸಂಗ್ರಹದಂತೆ ಹಸ್ತಪ್ರತಿ ಸೂಚಿಯ ರಚನೆಯಲ್ಲಿಯೂ ಇದೇ ಸಂಸ್ಥೆ ಹೊಸ ಹೆಜ್ಜೆ ಇಟ್ಟಿತು. ಇದು ಪ್ರಕಟಿಸಿದ 'ಮೆಕೆಂಝಿ ಕಲೆಕ್ಷನ್: ಎ ಡಿಸ್ಕ್ರಿಪ್ಟಿವ್ ಕೆಟಲಾಗ್ ಆಫ್ ದಿ ಮ್ಯಾನ್ಯುಸ್ಕ್ರಿಪ್ಟ್ಸ' ಹೆಸರಿನ ಸೂಚಿ (೧೮೨೮), ಹೆಸರೇ ಸೂಚಿಸುವಂತೆ ವಿವರಣಾತ್ಮಕವಾಗಿದ್ದು, ಕನ್ನಡ ಹಸ್ತಪ್ರತಿ ಸೂಚಿ ಪರಂಪರೆಯ ಪ್ರಥಮ ಕೃತಿಯಾಗಿದೆ. ಈ ಬಳಿಕ 'ಅಲ್ಫಾಬೆಟಿಕಲ್ ಇಂಡೆಕ್ಸ ಆಫ್ ಮ್ಯಾನ್ಯುಸ್ಕ್ರಿಪ್ಟ್ಸ ಇನ್ ದಿ ಗವರ್ನಮೆಂಟ ಓರಿಯಂಟಲ್ ಮ್ಯಾನು ಸ್ಕ್ರಿಪ್ಟ್ಸ ಲೈಬ್ರರಿ ಮದ್ರಾಸ' (೧೮೮೩) ಮತ್ತು 'ಆ್ಯನ್ ಅಲ್ಫಾಬೆಟಿಕಲ್ ಇಂಡೆಕ್ಸ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ ಇನ್ ದಿ ಗವರ್ನಮೆಂಟ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ ಲೈಬ್ರರಿ, ಮದ್ರಾಸ' (೧೯೨೯) ಮತ್ತು 'ಆ್ಯನ್ ಅಲ್ಫಾಬೆಟಿಕಲ್ ಇಂಡೆಕ್ಸ ಆಫ್ ಕನ್ನಡ ಮ್ಯಾನ್ಯುಸ್ಕ್ರಿಪ್ಟ್ಸ ಇನ್ ದಿ ಗವರ್ನಮೆಂಟ ಓರಿಯಂಟಲ್ ಮ್ಯಾನ್ಯು

2. An albhabetical index of kannada manuscripts in the Government oriental manuscripts Library, Madras (T. Chandrashekharan 1952) ಈ ಕೃತಿಯ ಪ್ರಸ್ತಾವನೆಯಿಂದ ಸಂಗ್ರಹಿಸಲಾಗಿದೆ.

ಸ್ಕ್ರಿಪ್ಟ್ಸ್ ಲೈಬ್ರರಿ ಮದ್ರಾಸ್' (೧೯೫೨) ಹೆಸರಿನ ಸೂಚಿಗಳನ್ನು ಈ ಸಂಸ್ಥೆ ಪ್ರಕಟಿಸಿತು. ಇವೆಲ್ಲವುಗಳಿಗಿಂತ ಮಿಗಿಲಾದ ಕೆಲಸವೆಂದರೆ 'ಎ ಡಿಸ್ಕ್ರಿಪ್ಟಿವ್ ಕೆಟಲಾಗ್ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನಮೆಂಟ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ' ಈ ಹೆಸರಿನಲ್ಲಿ ಏಳು ಸಂಪುಟಗಳನ್ನು ಪ್ರಕಟಿಸಿದುದು. ಮೊದಲನೆಯ ಸಂಪುಟ: ವ್ಯಾಕರಣ ೧-೧೨, ನಿಘಂಟು ೧೩-೨೧, ಛಂದಸ್ಸು ೨೩-೨೭, ಇತಿಹಾಸ ಮತ್ತು ಪುರಾಣ ೨೮-೧೩೮, ಎರಡನೆಯ ಸಂಪುಟ: ಪುರಾಣ ೧೩೯-೨೭೮, ಅರ್ಥಶಾಸ್ತ್ರ ೨೭೯-೨೯೦, ಕಾಮಶಾಸ್ತ್ರ ೨೯೧-೨೯೭, ಯೋಗ ೨೯೮-೩೦೧, ವೇದಾಂತ ೩೦೨-೩೧೭, ಮೂರನೆಯ ಸಂಪುಟ: ಜೈನ ಆಗಮ ೩೧೮-೪೩೪, ವೀರಶೈವ ಆಗಮ ೪೩೫-೪೭೬, ನಾಲ್ಕನೆಯ ಸಂಪುಟ: ವೀರಶೈವ ಆಗಮ ೪೭೭-೬೧೦, ಕ್ರೈಸ್ತ ಕೃತಿ ೬೧೧-೬೧೪, ಸ್ತೋತ್ರ ಮತ್ತು ವೀರಶೈವ ಕೃತಿ ೬೧೫-೮೨೫, ಐದನೆಯ ಸಂಪುಟ: ಶ್ರೀವೈಷ್ಣವಮತ ೮೨೬-೮೩೧, ಸ್ತೋತ್ರಗಳು ೮೩೨-೮೬೭, ಕಾವ್ಯ (ಪದ್ಯಕಾವ್ಯ) ೮೬೮-೧೦೩೮,ಆರನೆಯ ಸಂಪುಟ: ಪದ್ಯಕಾವ್ಯ ೧೦೩೯-೧೧೨೧, ಚಂಪೂ ೧೧೨೨-೧೧೬೭, ಯಕ್ಷಗಾನ ೧೧೬೮-೧೨೨೦, ಗದ್ಯಕಾವ್ಯ ೧೨೨೧-೧೨೩೮, ಕಥೆಗಳು ೧೨೩೯-೧೨೪೮, ಅಲಂಕಾರ ೧೨೪೯-೧೨೬೧, ಏಳನೆಯ ಸಂಪುಟ: ಸಂಗೀತ ೧೨೬೨-೧೩೩೪, ಶಿಲ್ಪಶಾಸ್ತ್ರ ೧೩೪೫, ಪಾಕಶಾಸ್ತ್ರ ೧೩೩೬-೧೩೪೨, ವೈದ್ಯ ೧೩೪೩-೧೪೦೫ ಹೀಗೆ ಇಷ್ಟು ಪ್ರತಿಗಳ ವಿವರವಾದ ಪರಿಚಯ ಮಾಡಿಕೊಡುತ್ತವೆ.

ಈ ಏಳೂ ಸಂಪುಟಗಳಲ್ಲಿ ಅಡಕವಾದ ಪ್ರತಿಗಳಿಗೆ ಉದ್ದಕ್ಕೂ ನಂಬರ ಕೊಡಲಾಗಿದ್ದು, ಒಟ್ಟು ೧೪೦೫ ಪ್ರತಿಗಳ ಪರಿಚಯವಿಲ್ಲಿದೆ. ಕನ್ನಡ ಹಸ್ತಪ್ರತಿಸೂಚಿ ಗ್ರಂಥಗಳಲ್ಲಿಯೇ ವಿವರಣೆ ದೃಷ್ಟಿಯಿಂದ ತುಂಬ ಉಪಯುಕ್ತ ಸಂಪುಟಗಳಿವು.

ಹಸ್ತಪ್ರತಿಗಳ ಸಂಗ್ರಹ ಮತ್ತು ಸೂಚಿರಚನೆಯೊಂದಿಗೆ ಸಂಪಾದನ ಕೆಲಸವನ್ನೂ ಪೂರೈಸಿದುದು, ಈ ಸಂಸ್ಥೆಯ ವೈಶಿಷ್ಟ್ಯವಾಗಿದೆ. ಲೋಕೋಪಕಾರಂ, ರಟ್ಟಮತಂ, ಅಶ್ವಶಾಸ್ತ್ರ, ವಿವಿಧ ವೈದ್ಯ ವಿಷಯಗಳು, ಸೂಪಶಾಸ್ತ್ರ, ವ್ಯವಹಾರ ಗಣಿತಂ ಮೊದಲಾದ ಲೋಕಕಲ್ಯಾಣಶಾಸ್ತ್ರಗಳನ್ನೂ, ಜೀವಸಂಬೋಧನ, ಸದ್ಗುರು ರಹಸ್ಯ ಮೊದಲಾದ ಕಾವ್ಯಗಳನ್ನೂ, ಅಭಿಧಾನರತ್ನಮಾಲಾ, ಸಂಗೀತ ರತ್ನಾಕರ ಮೊದಲಾದ ಶಾಸ್ತ್ರಕೃತಿಗಳನ್ನೂ ಇದು ಪರಿಷ್ಕರಿಸಿ, ಪ್ರಕಟಿಸಿದೆ.

ಈ ಭಂಡಾರದ ಹಸ್ತಪ್ರತಿಗಳನ್ನು ಬಳಸಿಕೊಂಡು ಮದ್ರಾಸ ವಿಶ್ವವಿದ್ಯಾಲಯದ ಕನ್ನಡ ವಿಭಾಗವು ಲಿಂಗಣಾರಾಧ್ಯವೃತ್ತಿಯ ಶಬ್ದಮಣಿದರ್ಪಣಂ, ಕರ್ನಾಟಕ ಕವಿರಾಜಮಾರ್ಗಂ, ಮಂಗರಾಜನ ಅಭಿನವಾಭಿಧಾನಂ, ಓಷಧಿಕೋಶಂ, ಕರ್ಣಪಾರ್ಯನ ನೇಮಿನಾಥಪುರಾಣಂ, ಪಾರ್ಶ್ವಪಂಡಿತನ ಪಾರ್ಶ್ವನಾಥಪುರಾಣಂ, ಆಚಣ್ಣನ ವರ್ಧಮಾನಪುರಾಣಂ, ಇತ್ಯಾದಿ ಕೃತಿಗಳನ್ನು ಪರಿಷ್ಕರಿಸಿ, ಬೆಳಕಿಗೆ ತಂದಿದೆ.

**೨. ಗವರ್ನಮೆಂಟ ಓರಿಯೆಂಟೆಲ್ ರೀಸರ್ಚ್ ಇನ್‌ಸ್ಟಿಟ್ಯೂಟ, ಮೈಸೂರು:** ಈ ಸಂಸ್ಥೆ ನಾಮಾಂತರ ಮತ್ತು ಹಸ್ತಾಂತರಗೊಳ್ಳುತ್ತ ಸಾಗಿಬಂದಿದೆ. ೧೮೮೪ರಲ್ಲಿ ಮೈಸೂರಿನಲ್ಲಿ ಪುರಾತತ್ವ ಇಲಾಖೆ ಅಸ್ತಿತ್ವಕ್ಕೆ ಬಂದಿತು. ಶಾಸನ ಸಂಗ್ರಹ, ಭೂಶೋಧ, ವಾಸ್ತುಪರಿಶೀಲನೆ, ಹಸ್ತಪ್ರತಿ ಸಂಗ್ರಹ ಇದರ ಉದ್ದೇಶವಾಗಿದ್ದಿತು. ೧೮೯೧ರಲ್ಲಿ 'ಪುರಾತತ್ವ ಇಲಾಖೆ'ಮತ್ತು 'ಓರಿಯಂಟಲ್ ಲೈಬ್ರರಿ' ಪ್ರತ್ಯೇಕಗೊಂಡು ಸ್ವತಂತ್ರ ಶಾಖೆಗಳಾದವು. ಹಸ್ತಪ್ರತಿಗಳ ಸಂಗ್ರಹ, ಸಂಸ್ಕರಣ, ಪ್ರಕಟನ ಉದ್ದೇಶ ವುಳ್ಳ ಈ 'ಓರಿಯಂಟಲ್ ಲೈಬ್ರರಿ'ಯು ಪ್ರಥಮ ಕ್ಯೂರೇಟರ್ ಎ. ಮಹಾದೇವ ಶಾಸ್ತ್ರಿಗಳು. ಆಮೇಲೆ ಆರ್. ರಾಘವೇಂದ್ರಾಚಾರ್, ಆರ್. ಶಾಮಶಾಸ್ತ್ರಿ, ಡಿ. ಶ್ರೀನಿವಾಸಾಚಾರ್, ಎಂ. ಎಸ್. ಬಸಲಿಂಗಯ್ಯ, ಎಚ್. ಆರ್. ರಂಗಸ್ವಾಮಿ ಅಯ್ಯಂಗಾರ, ಎಚ್.ದೇವೀರಪ್ಪ (೧೯೫೪-೬೦) ನಿರ್ದೇಶಕರಾದರು. ದೇವೀರಪ್ಪ ಅವರ ಅವಧಿಯಲ್ಲಿ ಈ ಸಂಸ್ಥೆಯು ಕನ್ನಡ ಹಸ್ತಪ್ರತಿಗಳನ್ನು ಕನ್ನಡ ಅಧ್ಯಯನ ಸಂಸ್ಥೆಗೆ ಸ್ಥಳಾಂತರಿಸಲಾಯಿತು.

೧೯೧೬ರಲ್ಲಿ ಸ್ಥಾಪಿತವಾದ ಮೈಸೂರು ವಿಶ್ವವಿದ್ಯಾಲಯದ ಆಡಳಿತಕ್ಕೆ ಅದೇ ವರ್ಷ ಈ ಸಂಸ್ಥೆಯನ್ನು ಒಪ್ಪಿಸಲಾಯಿತು. ೧೯೪೩ರಲ್ಲಿ ಇದರ ಹೆಸರನ್ನು 'ಪ್ರಾಚ್ಯ ವಿದ್ಯಾ ಸಂಶೋಧನಾಲಯ'ವೆಂದು ಬದಲಿಸಲಾಯಿತು. ಈಗ ಇಲ್ಲಿ ಒಂದು ಸಾವಿರ ದಷ್ಟು ಉರ್ದು-ಪರ್ಶಿಯನ್ ಕಟ್ಟುಗಳೂ ಮಿಕ್ಕ ಸಂಸ್ಕೃತ ಕಟ್ಟುಗಳೂ ಸೇರಿ ಒಟ್ಟು ೨೦೭೦೮ ಕಟ್ಟುಗಳಿವೆ.

ಈ ಸಂಸ್ಥೆ 'ಮೈಸೂರು ಗವರ್ನಮೆಂಟ ಓರಿಯಂಟಲ್ ಲೈಬ್ರರಿ'ಯಲ್ಲಿರುವ 'ಅಚ್ಚಿನ ಮತ್ತು ಕೈಬರಹದ ಪುಸ್ತಕಗಳ ಪಟ್ಟಿ' (೧೯೨೧), 'ಮೈಸೂರು ಗವರ್ನ್‌ಮೆಂಟ್ ಓರಿಯಂಟಲ್ ಲೈಬ್ರರಿ ೧೯೨೨ ರಿಂದ ೧೯೨೯ರ ವರೆಗಿನ ಅವಧಿಯಲ್ಲಿ ಸಂಗ್ರಹಿಸಿದ 'ಅಚ್ಚಿನ ಮತ್ತು ಕೈಬರಹದ ಕನ್ನಡ ಪುಸ್ತಕಗಳ ಪಟ್ಟಿ' (೧೯೩೦), 'ಮೈಸೂರು ಯುನಿವರ್ಸಿಟಿ ಓರಿಯಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟದಲ್ಲಿ ೧೯೪೧ ರಿಂದ ೧೯೫೪ರ ವರೆಗೆ ಸಂಗ್ರಹಿಸಿರುವ ಕೈಬರಹದ ಪುಸ್ತಕಗಳ ಪಟ್ಟಿ' (೧೯೫೫) ಮತ್ತು 'ಮೈಸೂರು ಪ್ರಾಚ್ಯವಿದ್ಯಾ ಸಂಸ್ಥೆಯಲ್ಲಿರುವ ಕೈಬರಹದ ಕನ್ನಡ ಗ್ರಂಥಗಳ ಅಕಾರಾದಿ ಸೂಚನೀ-೧೮೯೧ ರಿಂದ ೧೯೫೧ರ ವರೆಗೆ' (೧೯೫೫) ಎಂಬ ನಾಲ್ಕು ಸೂಚಿಗಳನ್ನು ಹೊರತಂದಿದೆ. ಬಳಿಕ ನೇರವಾಗಿ ಕನ್ನಡ ಹಸ್ತಪ್ರತಿಗಳಿಗೆ ಸಂಬಂಧಪಟ್ಟಂತೆ 'ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತ ಪ್ರತಿಗಳ ವರ್ಣನಾತ್ಮಕ ಸೂಚಿ' ಹೆಸರಿನಲ್ಲಿ ನಾಲ್ಕು ಸಂಪುಟಗಳನ್ನು ಪ್ರಕಟಿಸಿದೆ. ಈ ಸಂಪುಟಗಳು ೧೯೫೪ರ ವರೆಗೆ ಸಂಗ್ರಹಿಸಿರುವ ಕನ್ನಡ ಹಸ್ತಪ್ರತಿಗಳ ಪರಿಚಯು ವನ್ನೊಳಗೊಂಡ ವಿವರಣಾತ್ಮಕ ಸೂಚಿಗಳಾಗಿವೆ. ಇವುಗಳ ಸಂಪಾದಕರು ಶ್ರೀ ಬಿ. ಎಸ್. ಸಣ್ಣಯ್ಯ ಅವರು. ಇಲ್ಲಿ ಜೈನ, ವೀರಶೈವ, ಬ್ರಾಹ್ಮಣ ಧರ್ಮಗಳಿಗೆ

ಮತ್ತು ಕಾವ್ಯಶಾಸ್ತ್ರಗಳಿಗೆ, ಲೋಕಕಲ್ಯಾಣಶಾಸ್ತ್ರಗಳಿಗೆ ಸಂಬಂಧಪಟ್ಟ ಅಪರೂಪದ ಕೃತಿಗಳ ಪರಿಚಯುವನ್ನು ಕಾಣಬಹುದು.

ಬಿ. ಎಲ್. ರೈಸ ಅವರು ಶಿಕ್ಷಣ ಇಲಾಖೆಯುಲ್ಲಿರುವಾಗಲೇ ಪ್ರಾರಂಭಿಸಿದ್ದ 'ಬಿಬ್ಲಿಯಾಥಿಕಾ ಕರ್ನಾಟಿಕ' ಗ್ರಂಥಮಾಲೆಯನ್ನು ಪುರಾತತ್ವ ಇಲಾಖೆಯ ನಿರ್ದೇಶಕರಾದ ಬಳಿಕವೂ ಮುಂದುವರಿಸಿ, ಪಂಪರಾಮಾಯಣ (೧೮೭೪), ಕರ್ಣಾಟ ಭಾಷಾಭೂಷಣಂ (೧೮೮೪), ಕರ್ಣಾಟಕ ಶಬ್ದಾನುಶಾಸನಂ (೧೮೯೦) ಗ್ರಂಥಗಳನ್ನು ಪರಿಷ್ಕರಿಸಿ ಪ್ರಕಟಿಸಿದ್ದರು. ೧೮೯೧ರಲ್ಲಿ ಈ ಓರಿಯಂಟಲ್ ಲೈಬ್ರರಿ ಅಸ್ತಿತ್ವಕ್ಕೆ ಬಂದ ಬಳಿಕವೂ ಅವರು ಬಿಬ್ಲಿಯಾಥಿಕಾ ಕರ್ನಾಟಿಕ' ಮಾಲಿಯು ಹೆಸರಿನಲ್ಲಿ ಪಂಪಭಾರತ (೧೮೯೧), ಕವಿರಾಜಮಾರ್ಗಂ (ಸಂ. ಕೆ. ಬಿ. ಪಾಠಕ ೧೮೯೧) ಕೃತಿಗಳನ್ನು ತಂದಿದ್ದರು. ಬಳಿಕ ಈ ಮಾಲೆಯನ್ನು ಓರಿಯಂಟಲ್ ಲೈಬ್ರರಿ ಬಳಸಿಕೊಂಡು ಆದಿಪುರಾಣ (೧೯೦೦)ವನ್ನು ಪ್ರಥಮ ಕೃತಿಯಾಗಿ ಪ್ರಕಟಿಸಿತು. ಆಮೇಲೆ 'ಕನ್ನಡ ಗ್ರಂಥಮಾಲೆ' ಹೆಸರಿನಲ್ಲಿ ದಶಪರ್ವಭಾರತ, ಜಗನ್ನಾಥ ವಿಜಯ, ಧರ್ಮಾಮೃತ, ಅನಂತನಾಥಪುರಾಣ, ಸೂಕ್ತಿಸುಧಾರ್ಣವ, ಸಿಂಗಿರಾಜಪುರಾಣ, ರಾಮನಾಥಚರಿತೆ, ಶಿವತತ್ವಚಿಂತಾಮಣಿ, ತೊರವೆರಾಮಾಯಣ ಮೊದಲಾದ ಕೃತಿಗಳನ್ನು ಈ ಸಂಸ್ಥೆ ಪ್ರಕಟಿಸಿದೆ. ಇದಲ್ಲದೆ 'ಬಿಬ್ಲಿಯಾಥಿಕಾ ಸಂಸ್ಕೃತ' ಹೆಸರಿನ ಮಾಲೆಯಲ್ಲಿ ಆಪಸ್ತಂಭ ಗೃಹ್ಯಸೂತ್ರವನ್ನು ಮೊದಲ ಕೃತಿಯಾಗಿ ಪ್ರಕಟಿಸಿ, ಆಮೇಲೆ ಕೌಟಿಲ್ಯನ ಅರ್ಥಶಾಸ್ತ್ರದಂತಹ ಜಗದ್ವಿಖ್ಯಾತ ಕೃತಿಗಳನ್ನು ಬೆಳಕಿಗೆ ತಂದಿದೆ.

**೩. ಕನ್ನಡ ಅಧ್ಯಯನಸಂಸ್ಥೆ, ಮೈಸೂರು** : ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸದಲ್ಲಿ ಕನ್ನಡ ವಿಭಾಗವು ಕನ್ನಡ ಅಧ್ಯಯನ ಸಂಸ್ಥೆಯಾಗಿ ಮಾರ್ಪಟ್ಟುದು (೧೯೬೬) ಚರಿತ್ರಾರ್ಹ ಘಟನೆ. ಕನ್ನಡದ ಚಟುವಟಿಕೆಗಳನ್ನೆಲ್ಲ ಕೇಂದ್ರೀಕರಿಸಲು ಕೈಕೊಂಡ ಈ ಪ್ರಯತ್ನದ ಫಲವಾಗಿ ಹೊಸಹೊಸ ಶಾಖೆಗಳು ಹುಟ್ಟಿಕೊಂಡುವಲ್ಲದೆ ಅಲ್ಲಲ್ಲಿ ಅಸ್ತಿತ್ವದಲ್ಲಿದ್ದ ಕನ್ನಡಪರ ಶಾಖೆಗಳು ಒಂದುಗೂಡಿದವು. ಇದರ ಅಂಗವಾಗಿ ೧೯೬೬ರಲ್ಲಿ ಗವರ್ನ್‌ಮೆಂಟ್ ಓರಿಯಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟದಿಂದ ಕನ್ನಡ ಹಸ್ತಪ್ರತಿಗಳನ್ನು ಈ ಸಂಸ್ಥೆಗೆ ವರ್ಗಾಯಿಸಲಾಯಿತು.ಆಮೇಲೆ ಪ್ರತಿವರ್ಷ ಕೈಕೊಂಡ ಕ್ಷೇತ್ರಕಾರ್ಯದ ಫಲವಾಗಿ ಈಗ ಸುಮಾರು ೫೦೦೦ ಕಟ್ಟುಗಳು ಇಲ್ಲಿ ಶೇಖರಿಸಲ್ಪಟ್ಟಿವೆ. ಈ ಅವಧಿಯಲ್ಲಿ ಅನೇಕ ಪ್ರಸಿದ್ಧ ಹಸ್ತಪ್ರತಿಗಳನ್ನು ಶೋಧಿಸಿ ಸಂಗ್ರಹಿಸಲಾಗಿದ್ದು, ಎರಡನೆಯ ನಾಗವರ್ಮನ ವರ್ಧಮಾನಪುರಾಣದ ಶೋಧ, ಈ ಸಂಸ್ಥೆಯ ಒಂದು ಅಪೂರ್ವ ಕಾಣಿಕೆಯೆಂದೇ ಹೇಳಬೇಕು.

ಗವ್ಹರ್ನಮೆಂಟ್ ಓರಿಯಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟ ಈ ಮೊದಲು ನಾಲ್ಕು ಸೂಚಿಸಂಪುಟಗಳನ್ನು ಪ್ರಕಟಿಸಿದ್ದಿತು. ಅವುಗಳ ಮುಂದುವರಿದ ಸಂಪುಟಗಳನ್ನು ಕನ್ನಡ ಅಧ್ಯಯನಸಂಸ್ಥೆ ಸಿದ್ಧಪಡಿಸಿ ಪ್ರಕಟಿಸಿತು. ಇಲ್ಲಿಯೂ ಶ್ರೀ ಬಿ.ಎಸ್. ಸಣ್ಣಯ್ಯ ಅವರು ಸಂಪಾದಕರಾಗಿ ಕೆಲಸ ನಿರ್ವಹಿಸಿ ೧೯೫೪ ರಿಂದ ೧೯೭೮ರ ವರೆಗಿನ

ಅವಧಿಯಲ್ಲಿ ಸಂಗ್ರಹಿಸಲ್ಪಟ್ಟ ಹಸ್ತಪ್ರತಿಗಳ ೫ ಸೂಚಿ ಸಂಪುಟಗಳನ್ನು (೫, ೬, ೭, ೮, ೯) ಸಂಪಾದಿಸಿ ಬೆಳಕಿಗೆ ತಂದರು. ಇವರೇ 'ಕನ್ನಡ ಹಸ್ತಪ್ರತಿಗಳ ಮೈಕ್ರೊಫಿಲ್ಮ ಸೂಚಿ' ಹೆಸರಿನ ಕೃತಿಯನ್ನು ಹೊರತಂದಿದ್ದು, ಆರಾ, ಹೈದ್ರಾಬಾದ, ಬಾಹುಬಲಿ, ಮದ್ರಾಸ, ಕೊಲ್ಲಾಪೂರ ಮೊದಲಾದ ಅನ್ಯಪ್ರಾಂತಗಳಲ್ಲಿರುವ ಮತ್ತು ಮೂಡಬಿದಿರೆ, ಬೆಳ್ಗೊಳ, ವರಾಂಗ, ಸಾಲಿಗ್ರಾಮ, ಮಂಡ್ಯ. ಹೊಂಬುಜ, ಧಾರವಾಡ, ಮೈಸೂರುಗಳಲ್ಲಿರುವ ಅಪೂರ್ವ ಕನ್ನಡ ಹಸ್ತಪ್ರತಿಗಳ ವಿವರ ಇಲ್ಲಿದೆ, ಹಸ್ತಪ್ರತಿಗಳ ಪ್ರಶಸ್ತಿಗಳನ್ನು ಇಡಿಯಾಗಿ ಕೊಟ್ಟುದು ಇಲ್ಲಿಯ ಒಂದು ವೈಶಿಷ್ಟ್ಯ. ೧೩೨೪ ಕೃತಿಗಳ ಪರಿಚಯವನ್ನೊಳಗೊಂಡ ಇದು, ಕನ್ನಡದಲ್ಲಿ ಒಂದು ಹೊಸ ಉಪಕ್ರಮವೆನಿಸಿದೆ.

ಈ ಸಂಸ್ಥೆ ೧೯೬೬ರಿಂದ ಈವರೆಗೆ ೧೨೦ ಪ್ರಾಚೀನ ಗ್ರಂಥಗಳನ್ನು ಪರಿಷ್ಕರಿಸಿ ಪ್ರಕಟಿಸಿದೆ. ಇವುಗಳಲ್ಲಿ ದೀಕ್ಷಾಬೋಧೆ, ವರ್ಧಮಾನಪುರಾಣ, ಹರಿವಂಶಾಭ್ಯುದಯ, ಶಬ್ದಮಣಿದರ್ಪಣ, ಪುಣ್ಯಾಸ್ರವ, ನೇಮಿನಾಥ ಪುರಾಣ, ಚತುರಾಚಾರ್ಯಚಾರಿತ್ರ, ಆರಾಧ್ಯಚಾರಿತ್ರ್ಯ, ರಾಜಾವಳಿ ಕಥಾಸಾರ, ಬತ್ತೀಸಪುತ್ಥಳಿ ಕಥೆ ಮುಖ್ಯವಾದುವು. ಎಚ್. ದೇವೀರಪ್ಪ. ಎಸ್. ಬಸವಾರಾಧ್ಯ, ಬಿ. ಎಸ್. ಸಣ್ಣಯ್ಯ, ಜಿ. ಜಿ. ಮಂಜುನಾಥ, ವೈ. ಸಿ. ಭಾನುಮತಿ, ಮಂಜಪ್ಪಶೆಟ್ಟಿ ಮೊದಲಾದವರ ಪ್ರಕಟನೆಗಳು ಗಮನಾರ್ಹವೆನಿಸಿವೆ.

**೪. ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ :** ಮುಂಬೈ ಸರಕಾರ ತನ್ನ ವ್ಯಾಪ್ತಿಯಲ್ಲಿ ಬರುವ ಕರ್ನಾಟಕ ಪ್ರದೇಶದ ಸಂಶೋಧನೆಗಾಗಿ ೧೯೩೮ರಲ್ಲಿ ಕನ್ನಡ ಸಂಶೋಧನ ಸಂಸ್ಥೆಯ ಸ್ಥಾಪನೆಗೆ ಸಂಬಂಧಪಟ್ಟ ನಿರ್ಣಯವನ್ನು ಸ್ವೀಕರಿಸಿತು. ೧೯೩೯ರಲ್ಲಿ ಶ್ರೀ ಆರ್. ಎಸ್. ಪಂಚಮುಖಿಯವರು ಪ್ರಥಮ ನಿರ್ದೇಶಕರಾಗಿ ಅಧಿಕಾರವಹಿಸಿಕೊಂಡರು. ಅಂದಿನಿಂದಲೇ ಹಸ್ತಪ್ರತಿಗಳನ್ನು ಸಂಗ್ರಹಿಸುವ, ಅನ್ಯ ಭಾಂಡಾರಗಳಲ್ಲಿರುವ ಪ್ರಸಿದ್ಧ ಹಸ್ತಪ್ರತಿಗಳನ್ನು ನಕಲುಮಾಡಿಸಿ ಸಂರಕ್ಷಿಸುವ ಕೆಲಸವನ್ನು ಪ್ರಾರಂಭಿಸಲಾಯಿತು. ಈ ವರೆಗೆ ಇಲ್ಲಿ ಸಂಗ್ರಹಿಸಲ್ಪಟ್ಟ ಹಸ್ತಪ್ರತಿಗಳ ಸಂಖ್ಯೆ ಸುಮಾರು ೩೦೦೦.

ಈ ಸಂಸ್ಥೆ 'ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ' ಹೆಸರಿನಲ್ಲಿ ೧೪ ಸಂಪುಟಗಳನ್ನು ಪ್ರಕಟಿಸಿದ್ದು, ಇವೆಲ್ಲ ಸೇರಿ ೮೮೮ ಪ್ರತಿಗಳ ವಿವರ ಒದಗಿಸುತ್ತವೆ. ೫೦ ವರ್ಷಗಳ ಅವಧಿಯಲ್ಲಿ ಇಷ್ಟು ಕೃತಿಗಳ ಸೂಚಿಯನ್ನು ರಚಿಸಿದುದು ಕಡಿಮೆಯೆಂದೇ ಹೇಳಬೇಕು.

ಇದು ಕವಿಜಿಹ್ವಾಬಂಧನ, ಮದನತಿಲಕ, ಸಮಯಪರೀಕ್ಷೆ, ಚಾವುಂಡರಾಯ ಪುರಾಣ ಮೊದಲಾದ ಗ್ರಂಥಗಳನ್ನು ಪ್ರಕಟಿಸಿದ್ದರೂ ಕಾಲಮಾನ ದೃಷ್ಟಿಯಿಂದ ಈ ಸಂಖ್ಯಾಪ್ರಮಾಣ ಕಡಿಮೆಯೆನಿಸುತ್ತದೆ. ಇವುಗಳ ಸಂಪಾದನೆಯಲ್ಲಿಯೂ ಶಾಸ್ತ್ರೀ

ಯತೆಯ ಕೊರತೆ ಕಂಡು ಬರುತ್ತದೆ. ೧೯೭೨ರಲ್ಲಿ ಈ ಸಂಸ್ಥೆಯ ಹಸ್ತಪ್ರತಿಗಳನ್ನು ಡಾ. ಎಂ. ಎಂ. ಕಲಬುರ್ಗಿಯವರ ಪ್ರಯತ್ನದಿಂದಾಗಿ ಕನ್ನಡ ಅಧ್ಯಯನ ಪೀಠಕ್ಕೆ ವರ್ಗಾಯಿಸಲಾಗಿದೆ.

**೫. ಕನ್ನಡ ಅಧ್ಯಯನಪೀಠ, ಧಾರವಾಡ :** ಕರ್ನಾಟಕ ವಿಶ್ವವಿದ್ಯಾಲಯದ ಪ್ರಥಮವಿಭಾಗವಾಗಿ ಅಸ್ತಿತ್ವಕ್ಕೆ ಬಂದ ಈ ಇಲಾಖೆ, ೧೯೬೨ರಲ್ಲಿ "ಸಮಗ್ರ ವಚನ ವಾಙ್ಮಯದ ಪರಿವೀಕ್ಷಣೆ,ಪರಿಷ್ಕರಣ, ಪ್ರಕಟನ ಯೋಜನೆ"ಯನ್ನು ವಿಶ್ವವಿದ್ಯಾಲಯ ಧನಸಹಾಯ ಆಯೋಗದ ನೆರವಿನಿಂದ ಕೈಗೆತ್ತಿಕೊಂಡಿತು. ಡಾ. ಆರ್.ಸಿ. ಹಿರೇಮಠ ಅವರ ನಿರ್ದೇಶನದಲ್ಲಿ ಮುನ್ನಡೆದ ಈ ಯೋಜನೆಯ ಅಂಗವಾಗಿ ಹಸ್ತಪ್ರತಿ ಸಂಗ್ರಹ, ಸಂಸ್ಕರಣ, ಪ್ರಕಟನ ಕೆಲಸಗಳು ಇಲ್ಲಿ ಮುನ್ನಡೆದವು. ಮುಂದೆ ಕೆಲಕಾಲದಲ್ಲಿ ವೀರಶೈವ, ಜೈನ, ಬ್ರಾಹ್ಮಣಶಾಖೆಗಳೂ, ಬಸವೇಶ್ವರಪೀಠವೂ ಅಸ್ತಿತ್ವಕ್ಕೆ ಬಂದು, ಈ ಕಾರ್ಯಗಳ ವ್ಯಾಪ್ತಿ ವರ್ಧಿಸಿತು.

೧೯೬೨ರಿಂದ ೧೦ ವರ್ಷಗಳ ಕಾಲ ಹಸ್ತಪ್ರತಿಸಂಗ್ರಹದ ಕೆಲಸ ರಭಸದಿಂದ ನಡೆದು, ಮುಂದೆ ನಿಧಾನವಾಯಿತು. ಈ ಅವಧಿಯಲ್ಲಿ ಅಧ್ಯಾಪಕವರ್ಗದವರೂ, ಸಹಾಯಕ ಸಂಶೋಧಕರೂ ಶ್ರಮವಹಿಸಿ ಹಸ್ತಪ್ರತಿಗಳನ್ನು ಸಂಗ್ರಹಿಸಿದರು. ವಿಭಾಗದ ಮುಖ್ಯಸ್ಥರಾಗಿ ಡಾ. ಆರ್.ಸಿ. ಹಿರೇಮಠ, ಡಾ ಎಂ.ಎಸ್. ಸುಂಕಾಪೂರ, ಡಾ. ಎಂ. ಎಂ. ಕಲಬುರ್ಗಿ ಇವರು ಇಲ್ಲಿ ಸಲ್ಲಿಸಿದ ಸೇವೆ ಗಣ್ಯವಾದುದು. ಇವರಿಗೆ ಗ್ರಂಥಸಂಪಾದನೆಯ ಬಗೆಗೆ ಇದ್ದ ಆಸಕ್ತಿ ಇದಕ್ಕೆ ಕಾರಣವಾಯಿತು. ಈವರೆಗೆ ಇಲ್ಲಿ ಸಂಗ್ರಹಿತವಾದ ಹಸ್ತಪ್ರತಿ ಕಟ್ಟುಗಳ ವಿವರ ಹೀಗಿದೆ: ಕನ್ನಡ ೪೩೬೦, ಸಂಸ್ಕೃತ ೫೬೫, ಮರಾಠಿ ೩೫, ತೆಲುಗು ೩೮, ತಮಿಳು ೬. ಇವುಗಳಲ್ಲಿ ವೀರಶೈವ ಸಾಹಿತ್ಯಕ್ಕೆ ಅದರಲ್ಲೂ ವಚನಸಾಹಿತ್ಯಕ್ಕೆ ಸಂಬಂಧಪಟ್ಟ ಕೃತಿಗಳ ಸಂಖ್ಯೆ ದೊಡ್ಡದು. ಜೈನ, ಬ್ರಾಹ್ಮಣ ಶಾಖೆಗಳ ಸಿಬ್ಬಂದಿಯವರ ಪ್ರಯತ್ನದಿಂದಾಗಿ ಆ ಮತದ ಕೃತಿಗಳೂ ತಕ್ಕ ಸಂಖ್ಯೆಯಲ್ಲಿ ಸಂಗ್ರಹಿಸಲ್ಪಟ್ಟಿವೆ. ಹಸ್ತಪ್ರತಿಗಳಲ್ಲದೆ, ಕಡತ, ಲೇಖನಸಾಮಗ್ರಿಗಳೂ ಇಲ್ಲಿವೆ. ಡಾ. ಫ. ಗು. ಹಳಕಟ್ಟಿ ಅವರ ಮಕ್ಕಳಿಂದ ಖರೀದಿಸಿದ ೧೦೦೦ ಕಟ್ಟುಗಳೂ ಈ ಸಂಗ್ರಹದಲ್ಲಿ ಸೇರಿಕೊಂಡಿವೆ. ೧೯೭೨ರಲ್ಲಿ ಕನ್ನಡ ಸಂಶೋಧನ ಸಂಸ್ಥೆಯ ಎಲ್ಲ ಕಟ್ಟುಗಳು (ಸುಮಾರು ೩೦೦೦) ಇಲ್ಲಿಗೆ ಬಂದವು. ಹೀಗಾಗಿ ಈಗ ಇಲ್ಲಿರುವ ಒಟ್ಟು ಕಟ್ಟುಗಳ ಸಂಖ್ಯೆ ಸುಮಾರು ೮೦೦೦ ಎಂದು ಹೇಳಬಹುದು.

ಹಸ್ತಪ್ರತಿಗಳ ವಿವರಣಾತ್ಮಕ ಸೂಚಿಯನ್ನು ರಚಿಸಬೇಕೆಂಬ ಕನಸು ತುಂಬ ಹಳೆಯದಾದರೂ ಈ ಸಂಸ್ಥೆಯಲ್ಲಿ ಅದು ನನಸಾದುದು, ಡಾ. ಎಂ. ಎಂ. ಕಲಬುರ್ಗಿ ಅವರು ಮುಖ್ಯಸ್ಥರಾಗಿದ್ದ ಕಾಲದಲ್ಲಿ. ೧-೧೦೦ ಕಟ್ಟು, ೧೦೧-೨೦೦ ಕಟ್ಟು ಹೀಗೆ ಒಂದು ಸಾವಿರ ಕಟ್ಟುಗಳ ಹತ್ತು ವಿವರಣಾತ್ಮಕ ಹಸ್ತಪ್ರತಿಸೂಚಿಗಳು ಈ ಕಾಲದಲ್ಲಿ ಸಿದ್ಧವಾದುವು. ಇವುಗಳಲ್ಲಿ ೨, ೩, ೪, ೫ನೆಯ ಸಂಪುಟಗಳನ್ನು ಹೊರತು ಪಡಿಸಿ ಮಿಕ್ಕವು ೧೯೭೨ರಲ್ಲಿ ಪ್ರಕಟವಾಗಿವೆ. ಇವುಗಳಲ್ಲಿ ೧ನೆಯ ಸಂಪುಟದ ಸಂಪಾ

ದಕರು ಡಾ. ಬಿ. ಆರ್. ಹಿರೇಮಠ, ೬–೧೦ ಸಂಪುಟಗಳ ಸಂಪಾದಕರು ಡಾ. ಪಿ. ಬಿ. ರಾಜೂರ. ಮುಂದಿನ ೧೦೦೧ರಿಂದ ೪೦೦೦ ವರೆಗಿನ ಕಟ್ಟುಗಳ ಸೂಚೀಕಾರ್ಯ ಮುಗಿದಿದ್ದು, ಇನ್ನೊಮ್ಮೆ ಪರಿಶೀಲಿಸಿ ಮುದ್ರಣಕ್ಕೆ ಕಳಿಸಬೇಕಾಗಿದೆ.

ಈ ಹಸ್ತಪ್ರತಿಗಳಭಾಂಡಾರ ಹುಟ್ಟಿದುದು 'ವಚನಸಾಹಿತ್ಯ ಪ್ರಕಟನ ಯೋಜನೆ'ಯ ಆಶ್ರಯದಲ್ಲಿ. ಹೀಗಾಗಿ ಈ ಸಾಹಿತ್ಯಪ್ರಕಟನೆ ಒಂದು ಚಾರಿತ್ರಿಕ ಘಟನೆಯೆಂಬಂತೆ ಇಲ್ಲಿ ಜರುಗಿತು. ಬಸವಣ್ಣ, ಚನ್ನಬಸವಣ್ಣ, ಪ್ರಭುದೇವ, ಸಿದ್ಧರಾಮ ಇವರ ವಚನಗಳ ಸಮಗ್ರ ಸಂಪುಟಗಳು, ಶಿವಶರಣೆಯರ ವಚನಗಳ ಸಮಗ್ರ ಸಂಪುಟ, ಸಕಲಪುರಾತನರ ವಚನಗಳು ಸಂಪುಟ ೧–೨–೩, ಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆ, ಗುಮ್ಮಳಾಪುರ ಸಿದ್ಧಲಿಂಗದೇವನ ಶೂನ್ಯಸಂಪಾದನೆ ಮೊದಲಾದ ೨೦ ರಷ್ಟು ಪ್ರಾಚೀನ ವಚನಸಂಕಲನಗಳು ಇಲ್ಲಿ ಪ್ರಕಟವಾದವು.

ಇವುಗಳ ಜೊತೆಗೆ ಹರಿಹರನ ರಗಳೆಗಳ ಸಮಗ್ರ ಸಂಪುಟ, ತ್ರಿಷಷ್ಠಿ ಪುರಾತನ ಪುರಾಣ, ಬಸವರಾಜವಿಜಯ, ರಾಜಶೇಖರವಿಳಾಸ, ಅನಂತನಾಥಪುರಾಣ, ಮಲ್ಲಿನಾಥಪುರಾಣ, ಧರ್ಮಾಮೃತ, ಮೋಹನತರಂಗಿಣಿ ಮೊದಲಾದ ಪ್ರಾಚೀನಕೃತಿಗಳು ಬೆಳಕು ಕಂಡವು, ಬಸವೇಶ್ವರ ಪೀಠದ ವತಿಯಿಂದ ಬಸವಣ್ಣನವರ ಟೀಕಿನ ವಚನಗಳ ಎರಡು ಸಂಪುಟಗಳು ಪ್ರಕಟವಾದುದು ಎತ್ತಿ ಹೇಳಬೇಕಾದ ಸಂಗತಿಯಾಗಿದೆ.

**೬. ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು :** ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಕೊಡಮಾಡಿದ ಕೆಲವು ಹಸ್ತಪ್ರತಿಗಳ ಮೂಲಕ ೧೯೬೧ರಲ್ಲಿ ಅಸ್ತಿತ್ವಕ್ಕೆ ಬಂದ ಈ ಭಾಂಡಾರದ ಬೆಳವಣಿಗೆಗೆ ಮುಖ್ಯ ಕಾರಣರು, ಅದರ ಕ್ಯೂರೇಟರ್ ಶ್ರೀ ಎಸ್. ಶಿವಣ್ಣ ಅವರು. ಡಾ. ಜಿ. ಎಸ್. ಶಿವರುದ್ರಪ್ಪ, ಡಾ. ಎಂ. ಚಿದಾನಂದಮೂರ್ತಿಯವರ ಬೆಂಬಲದಿಂದ ಮುನ್ನಡೆದ ಈ ಸಂಸ್ಥೆಯಲ್ಲಿ ಈ ವರೆಗೆ ೧೭೫೩ ಓಲೆಕಟ್ಟು ಮತ್ತು ಕಾಗದಕಟ್ಟುಗಳನ್ನು ಸಂಗ್ರಹಿಸಲಾಗಿದೆ. ಇವುಗಳಲ್ಲಿಯ ಪ್ರತಿ ಸಂಖ್ಯೆ ೫೭೪೫. ಕನ್ನಡ, ತೆಲುಗು, ತಮಿಳು, ಸಂಸ್ಕೃತ, ಪ್ರಾಕೃತ, ಹಿಂದಿ, ಉರ್ದು ಭಾಷೆಗಳಿಗೆ ಸಂಬಂಧಿಸಿದ ಈ ಹಸ್ತಪ್ರತಿಗಳಲ್ಲಿ ಮುದ್ದಣನ ರಾಮಾಶ್ವಮೇಧ, ಬಸವಪ್ಪಶಾಸ್ತ್ರಿಗಳ ಶಂಕರಶತಕಗಳು ಕವಿಯ ಸ್ವಹಸ್ತಪ್ರತಿಗಳಾಗಿರುವುದು ಒಂದು ವಿಶೇಷ,

ಈ ಸಂಸ್ಥೆ ೧೯೮೨ ರಲ್ಲಿ ಒಂದು ವಿವರಣಾತ್ಮಕ ಸೂಚಿಯನ್ನು (ಸಂ. ಎಸ್. ಶಿವಣ್ಣ) ಪ್ರಕಟಿಸಿದೆ. ಇಷ್ಟು ವರ್ಷ ಗತಿಸಿದರೂ ಸಂಪಾದನಕಾರ್ಯ ಇಲ್ಲಿ ಜರುಗದಿರುವುದು ವಿಷಾದದ ಸಂಗತಿಯಾಗಿದೆ.

**೭. ಕನ್ನಡ ವಿಭಾಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ :** ೧೯೭೦ ರಷ್ಟು ಪೂರ್ವದಲ್ಲಿ ಕನ್ನಡ ವಿಭಾಗ ಅಸ್ತಿತ್ವಕ್ಕೆ ಬಂದರೂ, ಹಸ್ತಪ್ರತಿಗಳ ಸಂಗ್ರಹ ಕಾರ್ಯ ಇಲ್ಲಿ ಪ್ರಾರಂಭವಾದುದು ೧೯೮೫ ರಲ್ಲಿ. ಅಲ್ಲಿಂದ ಈಚೆ ಕೆಲವೇ ವರ್ಷಗಳಲ್ಲಿ

೧೭೩೫ ಹಸ್ತಪ್ರತಿ ಕಟ್ಟುಗಳನ್ನು ಸಂಗ್ರಹಿಸಿದುದು ಒಂದು ಸಾಧನೆಯೆಂದೇ ಹೇಳ ಬೇಕು. ೨೦೦೦ ಪ್ರತಿಗಳ ವಿವರಣಾತ್ಮಕ ಸೂಚಿ ಸಿದ್ಧವಾಗಿದ್ದು, ಪ್ರಕಟಣೆಯ ದಾರಿ ಕಾಯುತ್ತಲಿದೆ. 'ಕುಮಾರವಿಜಯ ವಿಳಾಸ' ಹೆಸರಿನ ಕಾವ್ಯ ಸಂಪಾದಿತವಾಗಿ ಪ್ರಕಟಗೊಂಡಿದ್ದು, ಸಂಪಾದನವಿಭಾಗ ಸಬಲಗೊಳ್ಳುವುದು ಆವಶ್ಯವಿದೆ.

**೮. ಕನ್ನಡ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು : ಈ** ಸಂಸ್ಥೆ ೧೯೮೨ರಲ್ಲಿ ಹಸ್ತಪ್ರತಿ ಸಂಗ್ರಹಕಾರ್ಯವನ್ನು ಪ್ರಾರಂಭಿಸಿ ಈಗಾಗಲೇ ಸುಮಾರು ೩೦೦ ಕಟ್ಟುಗಳನ್ನು ಕಲೆಹಾಕಿದೆ. ಕನ್ನಡ, ಸಂಸ್ಕೃತ, ತುಳು ಭಾಷೆಯ ಪ್ರತಿಗಳ ಈ ಸಂಗ್ರಹದಲ್ಲಿ ತೊರವೆ ರಾಮಾಯಣ, ಜೈಮಿನಿಭಾರತ, ಕುಮಾರವ್ಯಾಸ ಭಾರತ, ಭಾಗವತ ಕೃತಿಗಳಲ್ಲದೆ, ಕೆಲವು ಯಕ್ಷಗಾನ ಕೃತಿಗಳೂ ಇವೆ. ೧೭ನೆಯ ಶತಮಾನದ ವಿಷ್ಣುತುಂಗನ 'ಶ್ರೀ ಭಾಗವತೋ' ಕೃತಿಯನ್ನು ಸಂಪಾದಿಸಿ ಪ್ರಕಟಿಸ ಲಾಗಿದ್ದು, ಇನ್ನೂ ಸೂಚಿಯನ್ನು ಸಿದ್ಧಪಡಿಸಿಲ್ಲ.

**೯. ಉಸ್ಮಾನಿಯಾ ವಿಶ್ವವಿದ್ಯಾಲಯ, ಹೈದ್ರಾಬಾದ :** ಈ ವಿಶ್ವವಿದ್ಯಾ ಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿದ್ದ ಪ್ರೊ. ಡಿ. ಕೆ. ಭೀಮಸೇನರಾವ್ ಅವರ ಪ್ರಯತ್ನದ ಫಲವಾಗಿ ಇಲ್ಲಿ ಕೆಲವು ಹಸ್ತಪ್ರತಿಗಳು ಸಂಗ್ರಹಿಸಲ್ಪಟ್ಟವು. ಇವುಗಳಲ್ಲಿ ಬಹುಪಾಲು ಹೈದರಾಬಾದಕ್ಕೆ ವಲಸೆ ಹೋಗಿದ್ದ ಸವಣೂರು ನವಾಬರ ಸಂಗ್ರಹಕ್ಕೆ ಸಂಬಂಧಿಸಿದುದಾಗಿದೆ. ಇಲ್ಲಿ ಶಬ್ದಮಣಿದರ್ಪಣದ ವಿಶಿಷ್ಟ ಹಸ್ತಪ್ರತಿ ಇದ್ದು, ಇತ್ತೀಚೆಗೆ ಇದು ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಮೂಲಕ ಪ್ರಕಟವಾಗಿದೆ. ಡಾ. ಬಿ. ರಾಮಚಂದ್ರರಾವ್, ಡಾ. ಟಿ. ವಿ. ವೆಂಕಟಾ ಚಲಶಾಸ್ತ್ರಿಗಳು ಈ ಪ್ರತಿಗಳ ಸೂಚಿಯನ್ನು ಪ್ರಕಟಿಸಿದ್ದಾರೆ.

**೧೦. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು :** ಆಧುನಿಕ ಕರ್ನಾಟಕವನ್ನು ಕಟ್ಟುವಲ್ಲಿ ಮಹತ್ವದ ಪಾತ್ರ ವಹಿಸಿದ ಈ ಸಂಸ್ಥೆ, ಮೊದಮೊದಲು ಹಸ್ತಪ್ರತಿ ಸಂಗ್ರಹಕಾರ್ಯವನ್ನು ಉಪೇಕ್ಷಿಸಿತೆಂದೇ ಹೇಳಬೇಕು. ಇತ್ತೀಚೆಗೆ ೧೯೭೫ರ ಸುಮಾರಿಗೆ ಈ ಕಾರ್ಯವನ್ನು ಪ್ರಾರಂಭಿಸಿ, ಈಗಾಗಲೇ ಸುಮಾರು ೫೦೦ ಕಟ್ಟುಗಳನ್ನು ಸಂಗ್ರಹಿಸಿದೆ. ಇವುಗಳಲ್ಲಿ ವಡ್ಡಾರಾಧನೆ, ರಾಮಚಂದ್ರ ಚರಿತಪುರಾಣ, ಭರತೇಶ ವೈಭವ, ಪ್ರಭುಲಿಂಗಲೀಲೆ, ಕುಮಾರವ್ಯಾಸಭಾರತ ಮೊದಲಾದ ಹಸ್ತಪ್ರತಿಗಳು ಸೇರಿಕೊಂಡಿವೆ. ಇಲ್ಲಿಯ ಆದಿಪುರಾಣದ ಒಂದು ಹಸ್ತಪ್ರತಿಯಲ್ಲಿ ಆರು ಹೊಸ ಪದ್ಯಗಳಿರುವುದು ವಿಶೇಷ. ಈ ಹಸ್ತಪ್ರತಿಗಳ ವಿವರಣಾತ್ಮಕ ಸೂಚಿಯನ್ನು ಸಿದ್ಧ ಪಡಿಸಿದ್ದರೂ ಅದು ಇನ್ನೂ ಪ್ರಕಟವಾಗಿಲ್ಲ. ಮೊದಲಿನಿಂದಲೂ ಪಂಪಭಾರತ, ಪಂಪ ರಾಮಾಯಣ, ಶಬ್ದಮಣಿದರ್ಪಣಗಳಂಥ ಕೃತಿಗಳನ್ನು ಪರಿಷ್ಕರಿಸಿದ ಪರಿಷತ್ತು, ತನ್ನ ಭಾಂಡಾರದ ನೆರವಿನಿಂದ ಹೊಸ ಹೊಸ ಕೃತಿಗಳ ಪರಿಷ್ಕರಣಕಾರ್ಯವನ್ನು ಕೈಕೊಳ್ಳ ಬೇಕಿದೆ.

**೧೧. ಸಂಸ್ಕೃತ ಮಹಾಪಾಠಶಾಲೆ, ಮೈಸೂರು :** ಇಲ್ಲಿಯ ಹಸ್ತಪ್ರತಿಗಳು ಮೂಲತಃ ಮೈಸೂರು ಅರಮನೆಗೆ ಸಂಬಂಧಿಸಿದುವು. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಅರಮನೆಗೆ ಬೆಂಕಿಬಿದ್ದ ಸಮಯದಲ್ಲಿ ಉಳಿದುಕೊಂಡಿದ್ದ ಕೆಲವು ಹಸ್ತಪ್ರತಿಗಳನ್ನು ಜಗನ್ಮೋಹನ ಅರಮನೆಯಲ್ಲಿ ಇಡಲಾಗಿದ್ದಿತು. ೧೮೭೬ರಲ್ಲಿ ಚಾಮರಾಜ ಒಡೆಯರ್ ಅವರ ಪೋಷಕನಾಗಿದ್ದ ಕರ್ನಲ್ ಬಿ. ಬಿ. ಮ್ಯಾರಿಸನ್ ಇವುಗಳನ್ನು ಸಂಸ್ಕೃತ ಮಹಾಪಾಠಶಾಲೆಗೆ ವರ್ಗಾಯಿಸಿದ. ಇಲ್ಲಿಯ ಹಸ್ತಪ್ರತಿ ಸಂಖ್ಯೆ ೨೫೦೦. ಇವುಗಳಲ್ಲಿ ಸುಮಾರು ೨೫೦ ಕನ್ನಡ ಕೃತಿಗಳಿವೆ. ಇವುಗಳಲ್ಲಿ ವಚನಸಾಹಿತ್ಯಕ್ಕೆ ಸಂಬಂಧಪಟ್ಟುವು ಅಧಿಕ. ಏಕೋತ್ತರ ಶತಸ್ಥಲ, ಗಣಭಾಷ್ಯರತ್ನಮಾಲೆ, ದೀಕ್ಷಾಬೋಧೆ, ಪ್ರಭುಲಿಂಗಲೀಲೆ ಮೊದಲಾದ ಕೃತಿಗಳೂ, ಜ್ಞಾನಯ್ಯನ ಪದಗಳು, ಶಿವಯ್ಯನ ಪದಗಳು, ಪದಗಳ ಸಂಗ್ರಹ ಹೆಸರಿನ ಹಾಡಿನ ಸಂಕಲನಗಳೂ ಇಲ್ಲಿ ಕಂಡುಬರುತ್ತವೆ. ಈ ಮೊದಲು ಸಿದ್ಧಪಡಿಸಿದ್ದ ವರ್ಣನಾತ್ಮಕ ಹಸ್ತಪ್ರತಿಸೂಚಿ ಅರಮನೆಗೆ ಬೆಂಕಿಬಿದ್ದ ಸಂದರ್ಭದಲ್ಲಿ ಸುಟ್ಟುಹೋಯಿತೆಂದು ತಿಳಿದುಬರುತ್ತದೆ. ಅರಮನೆಯ ಅಧಿಕಾರ ವ್ಯಾಪ್ತಿಗೆ ಒಳಪಟ್ಟ ಇದು ಅರಮನೆಯಿಂದಲೂ, ಸರಕಾರದಿಂದಲೂ ನೆರವು ಇಲ್ಲದೆ ಸೊರಗಿಹೋಗುತ್ತಲಿದೆ. "ದಿ ಲಿಸ್ಟ ಆಫ್ ದಿ ಅನ್‌ಪ್ರಿಂಟೆಡ್ ಸಂಸ್ಕೃತ ಆ್ಯಂಡ್ ಕನ್ನಡ ಮ್ಯಾನ್ಯುಸ್ಕ್ರಿಪ್ಟ್ಸ ಇನ್ ದಿ ಪ್ಯಾಲೇಸ್ ಸರಸ್ವತೀ ಭಾಂಡಾರ (ಮಹಾರಾಜಾ ಸಂಸ್ಕೃತ ಕಾಲೇಜು, ಮೈಸೂರು)" ಹೆಸರಿನ ಸೂಚಿಯನ್ನು ಈ ಸಂಸ್ಥೆ ಪ್ರಕಟಿಸಿದೆ.

**೧೨. ದಿ ಅಕಾಡೆಮಿ ಸಂಸ್ಕೃತ ರೀಸರ್ಚ, ಮೇಲುಕೋಟೆ :** ಸರಕಾರದಿಂದ ಅನುದಾನಿತವಾದ ಈ ಸಂಸ್ಥೆ ೧೯೭೭ರಲ್ಲಿ ಅಸ್ತಿತ್ವಕ್ಕೆ ಬಂದಿದೆ. ಹೆಸರೇ ಸೂಚಿಸುವಂತೆ ಇದು ಸಂಸ್ಕೃತ ಸಾಹಿತ್ಯ ಸಂಶೋಧನೆಯ ಸಂಸ್ಥೆಯಾಗಿದ್ದು, ಇಲ್ಲಿ ಸುಮಾರು ೮೦೦೦ ಸಂಸ್ಕೃತ ಹಸ್ತಪ್ರತಿಗಳಿವೆ. ಇವುಗಳಲ್ಲಿ ಸುಮಾರು ೭೫ ಕನ್ನಡ ಪ್ರತಿಗಳೂ ಸೇರಿಕೊಂಡಿವೆ. ಕುಮಾರವ್ಯಾಸಭಾರತ, ಜೈಮಿನಿಭಾರತದ ಪ್ರತಿಗಳೇ ಅಧಿಕಸಂಖ್ಯೆಯಲ್ಲಿದ್ದು, ಗಿರಿಜಾಕಲ್ಯಾಣ, ಅನಂತನಾಥ ಪುರಾಣ ಪ್ರತಿಗಳಿರುವದು, ವಿಶೇಷ.

**೧೩. ಶ್ರೀಮಂಜುನಾಥೇಶ್ವರ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ, ಧರ್ಮಸ್ಥಳ:** ಈ ಸಂಸ್ಥೆ ೧೯೮೮ರಲ್ಲಿ ಪ್ರಾರಂಭವಾಯಿತು. ಶ್ರೀ ಎಸ್. ಉಮಾಪತಿ ಶಾಸ್ತ್ರಿ ಅವರ ವಶದಲ್ಲಿದ್ದ ಹಸ್ತಪ್ರತಿಗಳನ್ನು ಒಳಗುಮಾಡಿಕೊಂಡು ಇಲ್ಲಿ ೨೦೦೦ ತಾಳೆಗರಿ ಕಟ್ಟುಗಳು, ೧೦೦೦ ಕಾಗದಪ್ರತಿಗಳು ಸಂಗ್ರಹಿಸಲ್ಪಟ್ಟಿವೆ. ತಾಳೆಪ್ರತಿಗಳ ವಿವರಣಾತ್ಮಕ ಸೂಚಿ, ಯಕ್ಷಗಾನಗಳ ವಿವರಣಾತ್ಮಕ ಸೂಚಿ (ಕನ್ನಡ, ಹಿಂದಿ, ಇಂಗ್ಲೀಷ್) ಅಚ್ಚಿಗಾಗಿ ದಾರಿಕಾಯುತ್ತಲಿವೆ. ಈ ಸಂಸ್ಥೆ ಪ್ರಾಚೀನ ಕೃತಿಗಳ ಪರಿಷ್ಕರಣ ಮತ್ತು ಪ್ರಕಟನಕಾರ್ಯವನ್ನು ಕೈಗೆತ್ತಿಕೊಳ್ಳಬೇಕಿದೆ.

**೧೪. ಕೆಳದಿ ವಸ್ತುಸಂಗ್ರಹಾಲಯ :** ಪ್ರಾಚೀನ ಅವಶೇಷ, ಹಸ್ತಪ್ರತಿಗಳನ್ನು ವ್ಯಕ್ತಿಮಟ್ಟದಲ್ಲಿ ಸಂಗ್ರಹಿಸತೊಡಗಿದ ಶ್ರೀ ಕೆಳದಿ ಗುಂಡಾಜೋಯಿಸರು ೧೯೬೦ರಲ್ಲಿ

ಕೆಳದಿ ಮ್ಯೂಜಿಯಂನ್ನು ಅಸ್ತಿತ್ವಕ್ಕೆ ತಂದರು. ಈಗ ಇಲ್ಲಿ ೭೭೦ ತಾಳೆಗರಿಕಟ್ಟು, ೮೫೦ ಕಾಗದ ಕಟ್ಟುಗಳಿವೆ. ಕನ್ನಡ, ಸಂಸ್ಕೃತ, ತೆಲುಗು ಭಾಷೆಯ ಕೃತಿಗಳಾಗಿರುವ ಇವು ಕನ್ನಡ, ದೇವನಾಗರಿ, ತೆಲುಗು, ತಿಗಳಾರಿ ಲಿಪಿಯಲ್ಲಿ ಬರೆಯಲ್ಪಟ್ಟಿವೆ. ಕೆಳದಿ ವೆಂಕಣ್ಣ ಕವಿಯ ಕೃತಿಗಳು, ತುರಂಗ ಭಾರತ, ಬಸಪ್ಪನಾಯಕನ ಶಿವತತ್ವರತ್ನಾಕರ ಮೊದಲಾದುವು ಇಲ್ಲಿಯ ಮಹತ್ವದ ಕೃತಿಗಳಾಗಿವೆ. ಈ ಸಂಸ್ಥೆ "ವರ್ಣನಾತ್ಮಕ ಹಸ್ತಪ್ರತಿ ಸೂಚಿ" ಹೆಸರಿನ ಒಂದು ಸಂಪುಟವನ್ನು ಪ್ರಕಟಿಸಿದೆ (ಸಂ-ಡಾ.ಎಸ್.ಆರ್. ರಾವ್ ೧೯೮೫). "ಕೆಳದಿ ವೆಂಕಣ್ಣನ ಕೃತಿಗಳು" ಹೆಸರಿನ ಕೃತಿ ಈ ಕೇಂದ್ರದಿಂದ ಪ್ರಕಟವಾಗಿದೆ.

**೧೫. ಬಿ.ಎಂ.ಶ್ರೀ. ಪ್ರತಿಷ್ಠಾನ, ಬೆಂಗಳೂರು:** ೧೯೭೯ರಲ್ಲಿ ಪ್ರಾರಂಭವಾದ ಈ ಸಂಸ್ಥೆ, ಸಂಸ್ಥಾಪಕ ಅಧ್ಯಕ್ಷ ಶ್ರೀ ಎಂ. ವಿ. ಸೀತಾರಾಮಯ್ಯ ಅವರ ಆಸಕ್ತಿ ಕಾರಣವಾಗಿ ಈ ವರೆಗೆ ಸುಮಾರು ೧೦೦೦ ಹಸ್ತಪ್ರತಿ ಕಟ್ಟುಗಳನ್ನು ಸಂಗ್ರಹಿಸಿದೆ, "ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂಪುಟ-೧" ಹೆಸರಿನ ಸೂಚಿಯನ್ನು ಪ್ರಕಟಿಸಲಾಗಿದೆ. ೯೬ ಪ್ರತಿಗಳ ವಿವರಣೆಯನ್ನೊಳಗೊಂಡ ಇದರ ಸಂಪಾದಕರು ಶ್ರೀ ಕೆಳದಿ ಗುಂಡಾಜೋಯಿಸ್ ಮತ್ತು ನಾ. ಗೀತಾಚಾರ್ಯ. ಈ ಸಂಸ್ಥೆ ಸೂತಭಾರತ, ಶ್ರೀ ಕೃಷ್ಣದೇವರಾಯ ದಿನಚರಿ, ಕೀರ್ತನ ಕುಸುಮಾಂಜಲಿ ಮೊದಲಾದ ಕೃತಿಗಳನ್ನು ಪರಿಷ್ಕರಿಸಿ ಪ್ರಕಟಿಸಿದೆ.

**೧೬. ದೇವಕುಮಾರ ಓರಿಯಂಟಲ್ ಇನ್‌ಸ್ಟಿಟ್ಯೂಟ್, ಆರಾ:** ಬಿಹಾರದ ಆರಾ ಪಟ್ಟಣದ ಸಂಸ್ಥಾನಿಕ ಮನೆತನಕ್ಕೆ ಸಂಬಂಧಪಟ್ಟ ಈ ಭಾಂಡಾರದಲ್ಲಿರುವ ಸಾವಿರಾರು ಹಸ್ತಪ್ರತಿ ಕಟ್ಟುಗಳಲ್ಲಿ ಕನ್ನಡ ಹಸ್ತಪ್ರತಿಗಳ ಸಂಖ್ಯೆ ಸುಮಾರು ೨೦೦. ಇಲ್ಲಿಯ ಪಂಪಭಾರತದ ಪ್ರತಿ ಸಂಪೂರ್ಣವಿದ್ದು, ಅಂಚಿನಲ್ಲಿ ಭಿನ್ನಪಾಠಗಳಿರುವುದು ಒಂದು ವಿಶೇಷ. ಇಲ್ಲಿಯ ದುರ್ಗಸಿಂಹನ ಪಂಚತಂತ್ರದ ಪ್ರತಿಯಿಂದಾಗಿ ಕವಿಯ ಕಾಲ ನಿರ್ಣಯ ಸಾಧ್ಯವಾಯಿತು. ಅಚ್ಚಣ್ಣನ ವರ್ಧಮಾನಪುರಾಣದ ಅಂಚಿನಲ್ಲಿ ಬರೆದ ಸೂಚನೆಯಿಂದ ಅಜ್ಞಾತವಾಗಿದ್ದ ನಾಗವರ್ಮನ ಜೈನಪುರಾಣವು ವರ್ಧಮಾನಪುರಾಣವೆಂದು ಊಹಿಸಲು ಸಾಧ್ಯವಾಯಿತು. ಈ ಸಂಸ್ಥೆ "ಎ ಕೆಟಲಾಗ ಆಫ್ ಸಂಸ್ಕೃತ, ಪ್ರಾಕೃತ ಆ್ಯಂಡ್ ಹಿಂದಿ ವರ್ಕ್ಸ್ ಇನ್ ದಿ ಜೈನ ಸಿದ್ಧಾಂತಭವನ, ಆರಾ" ಹೆಸರಿನ ಕೆಟಲಾಗ್ ಪ್ರಕಟಿಸಿದೆ.

**೧೭. ಶಿವಯೋಗ ಮಂದಿರ:** ಈ ಶತಮಾನದ ಮೊದಲ ದಶಕದಲ್ಲಿ ಹಸ್ತಪ್ರತಿ ಸಂಗ್ರಹ ಕಾರ್ಯವನ್ನು ಕೈಕೊಂಡ ಈ ಸಂಸ್ಥೆ, ೧೯೬೧ರ ಹೊತ್ತಿಗೆ ಸುಮಾರು ೧೦೦೦ದಷ್ಟು ತಾಳೆಪ್ರತಿ, ೫೦೦ರಷ್ಟು ಕಾಗದ ಪ್ರತಿಗಳನ್ನು ಸಂಗ್ರಹಿಸಿದ್ದಿತು. ಡಾ. ಫ. ಗು. ಹಳಕಟ್ಟಿ ಮೊದಲಾದವರು ಈ ಹಸ್ತಪ್ರತಿಗಳ ಪ್ರಯೋಜನ ಪಡೆದಿದ್ದಾರೆ. ಕೆಲವು ಹಸ್ತಪ್ರತಿಗಳು ವಿದ್ವಾಂಸರ ವಶದಲ್ಲಿ ಉಳಿದು, ಈ ಭಂಡಾರದ ಸಂಪತ್ತು ಕೆಲಮಟ್ಟಿಗೆ

ಕರಗಿ ಹೋಯಿತು. ನೋಡಿಕೊಳ್ಳುವ ಸೂಕ್ತ ವ್ಯಕ್ತಿಗಳಿಲ್ಲದೆ ಹಸ್ತಪ್ರತಿಗಳು ಉಪೇಕ್ಷೆಗೆ ಗುರಿಯಾಗಿವೆ. ಇವುಗಳ ರಕ್ಷಣೆ, ಸೂಚೀಕರಣ ಇಂದಿನ ಬಹುಮುಖ್ಯ ಕೆಲಸವಾಗಿದೆ.

## ಕನ್ನಡ ಹಸ್ತಪ್ರತಿಸೂಚಿಗಳು:

ಆಧುನಿಕ ಹಸ್ತಪ್ರತಿ ಭಾಂಡಾರಗಳು ಸೂಚೀರಚನೆಯನ್ನು ಒಂದು ಶಿಸ್ತನ್ನಾಗಿ ಬೆಳೆಸಿವೆ. ಒಂದು ಶೈಕ್ಷಣಿಕ ಶಿಸ್ತಾಗದಿದ್ದರೂ, ಓದುಗರ ಪ್ರಯೋಜನ ದೃಷ್ಟಿಯಿಂದ ಸೂಚಿಯನ್ನು ರಚಿಸಿಸುವುದು ನಮ್ಮಲ್ಲಿ ಪ್ರಾಚೀನ ಕಾಲದಿಂದಲೂ ಬೆಳೆದು ಬಂದಿದೆ. ಅದು, ಒಂದು ಕಟ್ಟಿನಲ್ಲಿ ಅಡಕವಾಗಿರುವ ಕೃತಿಗಳ ಪಟ್ಟಿಯನ್ನು ಮೊದಲಿನ ಇಲ್ಲವೆ ಕೊನೆಯ ಪುಟದಲ್ಲಿ ಬರೆಯುವ ರೂಪದ್ದಾಗಿರುತ್ತಿದ್ದಿತ್ತು. ಕಟ್ಟು ಕಳೆದುಹೋಗಿ ಉಳಿದುಕೊಂಡಿರಬಹುದಾದ ಇಂಥ ಯಾದಿ ಕೆಲವೊಮ್ಮೆ ಅಪೂರ್ವ ಸಂಗತಿಯನ್ನು ಹೊರಗೆಡಹುವುದು ಸಹಜ. ಐನೂಲಿಯಲ್ಲಿ ಸಿಕ್ಕ ಇಂಥ ಒಂದು ಪುಟ ನನಗೆ ಕವಿರಾಜ ಮಾರ್ಗ ಹಸ್ತಪ್ರತಿಯ ಶೋಧಕ್ಕೆ ಸಹಾಯ ಮಾಡಿತೆಂಬುದನ್ನು ಇಲ್ಲಿ ನೆನೆಯಬಹುದು.[೩] ಬೆಂಗಳೂರು ವಿಶ್ವವಿದ್ಯಾಲಯದ ಕೆ. ೧೨೮:೧೧ ಸಂಖ್ಯೆಯ ಕಟ್ಟಿನಲ್ಲಿ "ಶ್ರೀ ಶುಭಮಸ್ತು। ಮುಳುವಳ್ಳಿ ಮಠದಲ್ಲಿಹ ಪುಸ್ತಕದ ವಿವರ" ಎಂದು ಹೇಳಿ, ಅಲ್ಲಿಯ ಪುಸ್ತಕಗಳ ಯಾದಿಯನ್ನು ಕೊಡಲಾಗಿದೆ. ಇದಲ್ಲದೆ ಜೈಮಿನಿ ಭಾರತದ ತಾಳೆಪ್ರತಿ (ಮಹಸೂV–೯೫೬)ಯಲ್ಲಿ ೬೦೦ ಗ್ರಂಥಗಳ ಹೆಸರಿರುವ ಸೂಚೀ ಪತ್ರವಿರುವ ವಿಷಯ ತಿಳಿದುಬರುತ್ತದೆ.

ಆಧುನಿಕ ಕಾಲಕ್ಕೆ ಬಂದರೆ, ಸೂಚಿ ರಚಿಸುವ ಕ್ರಿಯೆ ಭಾರತದಲ್ಲಿ ಸರ್ ವಿಲಿಯಂ ಜೋನ್ಸ್ (೧೮೦೭) ಅವರಿಂದ ಪ್ರಾರಂಭವಾಯಿತು. ಕನ್ನಡಕ್ಕೆ ಬಂದರೆ ೧೮೨೮ರಲ್ಲಿ ಪ್ರಕಟವಾದ 'ಮೆಕೆಂರೆಝಿ ಕಲೆಕ್ಷನ್: ಎ ಡಿಸ್ಕ್ರಿಪ್ಟಿವ್ ಕೆಟಲಾಗ್ ಆಫ್ ದಿ ಮ್ಯಾನ್ಯುಸ್ಕ್ರಿಪ್ಟ್ಸ್' ಎಂಬುದೇ ಪ್ರಥಮಸೂಚಿಯಾಗಿದೆ. ಆ ಮೇಲೆ ಮೈಸೂರು, ಧಾರವಾಡ, ಬೆಂಗಳೂರು, ಹೈದ್ರಾಬಾದ ವಿಶ್ವವಿದ್ಯಾಲಯಗಳು, ಕರ್ನಾಟಕದ ಒಳಹೊರಗಿನ ವೈಯಕ್ತಿಕ ಸಂಸ್ಥೆಗಳು ಹಸ್ತಪ್ರತಿಸೂಚಿಗಳನ್ನು ಪ್ರಕಟಿಸಿವೆ. ಇವುಗಳನ್ನು ಯಾದಿರೂಪದ ಸೂಚಿ, ವಿವರಣಾತ್ಮಕ ಸೂಚಿ, ಲೇಖರೂಪದ ಸೂಚಿಯೆಂದು ವರ್ಗೀಕರಿಸಬಹುದು. ಕನ್ನಡ ಹಸ್ತಪ್ರತಿಗಳನ್ನು ಕುರಿತು ಈ ವರೆಗೆ ಪ್ರಕಟವಾದ ಈ ಎಲ್ಲ ಬಗೆಯ ಸೂಚಿಗಳನ್ನು ಅಭ್ಯಾಸದ ಅನುಕೂಲಕ್ಕಾಗಿ ೧. ಮದ್ರಾಸ ಹಸ್ತಪ್ರತಿ ಸೂಚಿಗಳು ೨. ಮೈಸೂರು ಹಸ್ತಪ್ರತಿ ಸೂಚಿಗಳು ೩. ಧಾರವಾಡ ಹಸ್ತಪ್ರತಿಸೂಚಿಗಳು ೪. ಬೆಂಗಳೂರು ಮತ್ತು ಹೈದ್ರಾಬಾದ ಹಸ್ತಪ್ರತಿಸೂಚಿಗಳು ೫. ಇತರ ಸೂಚಿಗಳು ೬. ಲೇಖನರೂಪದ ಸೂಚಿಗಳು ಎಂದು ವರ್ಗೀಕರಿಸಿ ಈ ಕೆಳಗಿನಂತೆ ಕೊಡಬಹುದು :

---

೩. ನೃಪತುಂಗಾಭ್ಯುದಯ – ಮಾರ್ಗ I–೧೨

೪. ಮೈಹಸೂ I–೨೯೩.

# ಕನ್ನಡ ಹಸ್ತಪ್ರತಿಸೂಚಿಗಳು

| ಕ್ರ. ಸಂ. | ಸೂಚಿಯ ಹೆಸರು | ಸಂಪಾದಕರು | ಪ್ರಕಟನೆ–ಇಸ್ವಿ | ಪ್ರತಿಸಂಖ್ಯೆ |
|---|---|---|---|---|
| ೧ | ೨ | ೩ | ೪ | ೫ |
| | **೧। ಮದ್ರಾಸ ಹಸ್ತಪ್ರತಿಸೂಚಿಗಳು** | | | |
| ೧. | ದಿ ಮೆಕೆಂರ್ಜಿ ಕಲೆಕ್ಶನ್: ಎ ಡಿಸ್ಕ್ರಿಪ್ಟಿವ್ ಕೆಟಲಾಗ ಆಫ್ ದಿ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್.[೫] | ಎಚ್.ಎಚ್. ವಿಲ್ಸನ್ | ೧೮೨೮ | ೧೫೨ |
| ೨. | ಅಲ್ಫಾಬೆಟಿಕಲ್ ಇಂಡೆಕ್ಸ್ ಆಫ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನಮೆಂಟ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ | — | ೧೮೯೩ | — |
| ೩. | ಆ್ಯನ್ ಅಲ್ಫಾಬೆಟಿಕಲ್ ಇಂಡೆಕ್ಸ್ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನಮೆಂಟ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ | ಎಸ್. ಕುಪ್ಪುಸ್ವಾಮಿಶಾಸ್ತ್ರಿ | ೧೯೨೯ | ೧೫೪೦ |
| ೪. | ಆ್ಯನ್ ಅಲ್ಫಾಬೆಟಿಕಲ್ ಇಂಡೆಕ್ಸ್ ಆಫ್ ಕನ್ನಡ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನಮೆಂಟ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ | ಟಿ. ಚಂದ್ರಶೇಖರನ್ | ೧೯೫೨ | ೧೮೨೯ |

೫. ಇದರಲ್ಲಿ ಪು. ೩೦೪–೩೪೬ ವರೆಗಿನ ಭಾಗದಲ್ಲಿ ಕನ್ನಡ ಹಸ್ತಪ್ರತಿಗಳ ವಿವರವಿದೆ. (ಸಂ)

| ೧ | ೨ | ೩ | ೪ | ೫ |
|---|---|---|---|---|
| ೫. | ಎ ಡಿಸ್ಕ್ರಿಪ್ಟಿವ್ ಕೆಟಲಾಗ ಆಫ್ ಕೆನರೀಸ್ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಗವರ್ನಮೆಂಟ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ, ಮದ್ರಾಸ ಸಂಪುಟ–೧ | ಕುಪ್ಪುಸ್ವಾಮಿಶಾಸ್ತ್ರಿ | ೧೯೩೪ | ೧೩೮ |
| ೬. | ,, ,, ಸಂಪುಟ–೨ | ಕುಪ್ಪುಸ್ವಾಮಿಶಾಸ್ತ್ರಿ ಮತ್ತು ಪಿ.ಪಿ.ಎಸ್.ಶಾಸ್ತ್ರಿ | ೧೯೩೭ | ೨೭೮ |
| ೭. | ,, ,, ಸಂಪುಟ–೩ | ,, | ೧೯೩೯ | ೧೫೮ |
| ೮. | ,, ,, ಸಂಪುಟ–೪ | ಎ. ಶಂಕರನ್ | ೧೯೪೬ | ೩೪೮ |
| ೯. | ,, ,, ಸಂಪುಟ–೫ | ಟಿ. ಚಂದ್ರಶೇಖರನ್ | ೧೯೫೧ | ೨೧೩ |
| ೧೦. | ,, ,, ಸಂಪುಟ–೬ | ,, | ೧೯೫೨ | ೨೩೩ |
| ೧೧. | ,, ,, ಸಂಪುಟ–೭ | ,, | ೧೯೫೮ | ೧೪೪ |
| ೧೨. | Mackenzie Manuscripts: Summaries of the Historical Manuscripts in the Mackenzie Collecticn Vol. II (Telugu, Kannada, Marathi) | T. V. Mahalingam | 1976 | — |

## ೨) ಮೈಸೂರು ಹಸ್ತಪ್ರತಿಸೂಚಿಗಳು

| | | | | |
|---|---|---|---|---|
| ೧೩. | ಮೈಸೂರು ಗವರ್ನಮೆಂಟ ಓರಿಯಂಟಲ್ ಲೈಬ್ರರಿಯಲ್ಲಿರುವ ಅಚ್ಚಿನ ಮತ್ತು ಕೈಬರಹದ ಪುಸ್ತಕಗಳ ಪಟ್ಟಿ | — | ೧೯೨೧ | ೧೫೧೧ |

| | | | | |
|---|---|---|---|---|
| ೧೪. | ಮೈಸೂರು ಗವರ್ನಮೆಂಟ ಓರಿಯಂಟಲ್ ಲೈಬ್ರರಿ ೧೯೨೨ ರಿಂದ ೧೯೨೯ರ ವರೆಗಿನ ಅವಧಿಯಲ್ಲಿ ಸಂಗ್ರಹಿಸಿದ ಅಚ್ಚಿನ ಮತ್ತು ಕೈಬರಹದ ಕನ್ನಡ ಪುಸ್ತಕಗಳ ಪಟ್ಟಿ | — | ೧೯೩೦ | ೧೬೪ |
| ೧೫. | ಮೈಸೂರು ಯುನಿವ್ಹರ್ಸಿಟಿ ಓರಿಯಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟದಲ್ಲಿ ೧೯೪೧ ರಿಂದ ೧೯೫೪ರ ವರೆಗೆ ಸಂಗ್ರಹಿಸಿರುವ ಕೈಬರಹದ ಪುಸ್ತಕಗಳ ಪಟ್ಟಿ | — | ೧೯೫೫ | ೧೪೪ |
| ೧೬. | ಮೈಸೂರು ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಯಲ್ಲಿರುವ ಕೈಬರಹದ ಕನ್ನಡ ಗ್ರಂಥಗಳ ಅಕಾರಾದಿ ಸೂಚಿಸೀ (೧೮೯೧ರಿಂದ ೧೯೫೧ರ ವರೆಗೆ) | — | ೧೯೫೫ | ೧೮೨೭ |
| ೧೭. | ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ ಸಂಪುಟ–೧ | ಬಿ.ಎಸ್. ಸಣ್ಣಯ್ಯ | ೧೯೬೨ | ೪೯೭ |
| ೧೮. | ,, ,, ಸಂಪುಟ–೨ | ,, | ೧೯೬೨ | ೫೧೪ |
| ೧೯. | ,, ,, ಸಂಪುಟ–೩ | ,, | ೧೯೬೩ | ೫೧೪ |
| ೨೦. | ,, ,, ಸಂಪುಟ–೪ | ,, | ೧೯೬೩ | ೫೪೮ |
| ೨೧. | ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂಪುಟ–೫ (ಕನ್ನಡ ಅಧ್ಯಯನ ಸಂಸ್ಥೆ) | ,, | ೧೯೭೦ | ೭೩೫ |
| ೨೨. | ,, ,, ಸಂಪುಟ–೬ | ,, | ೧೯೭೦ | ೭೪೪ |
| ೨೩. | ,, ,, ಸಂಪುಟ–೭ | ,, | ೧೯೭೦ | ೮೦೨ |

| ೧ | ೨ | ೩ | ೪ | ೫ |
|---|---|---|---|---|
| ೨೪. ,, ,, | ಸಂಪುಟ–೮ | ,, | ೧೯೮೭ | ೬೨೬ |
| ೨೫. ,, ,, | ಸಂಪುಟ–೯ | ,, | ೧೯೮೧ | ೩೨೮ + ೧೩೮ |
| ೨೬. ಕನ್ನಡ ಹಸ್ತಪ್ರತಿಗಳ ಮೈಕ್ರೋಫಿಲ್ಮಸೂಚಿ | | ,, | ೧೯೮೮ | ೧೩೨೪ |
| | **೩) ಧಾರವಾಡ ಹಸ್ತಪ್ರತಿ ಸೂಚಿಗಳು** | | | |
| ೨೭. ಪ್ರಾಚೀನ ಹಸ್ತಪ್ರತಿ ವಿವರಣಾತ್ಮಕ ಸೂಚಿ (ಕನ್ನಡ ಸಂಶೋಧನ ಸಂಸ್ಥೆ) | ಸಂಪುಟ–೧ | ಆರ್.ಎಸ್. ಪಂಚಮುಖಿ | ೧೯೫೩ | ೫೭ |
| ೨೮. ,, ,, | ಸಂಪುಟ–೨ | ಎಸ್.ಎಸ್. ಮಾಳವಾಡ<br>ಬಿ.ಎಸ್. ಕುಲಕರ್ಣಿ | ೧೯೫೫ | ೪೪ |
| ೨೯. ,, ,, | ಸಂಪುಟ–೩ | ಬಿ.ಎಸ್. ಕುಲಕರ್ಣಿ | ೧೯೫೭ | ೪೮ |
| ೩೦. ,, ,, | ಸಂಪುಟ–೪ | ಎ.ಎಂ. ಅಣ್ಣಿಗೇರಿ<br>ಎಸ್.ಬಿ. ಪುರೋಹಿತ | ೧೯೬೧ | ೮೫ |
| ೩೧. ,, ,, | ಸಂಪುಟ–೫ | ಬಿ.ಎಸ್. ಕುಲಕರ್ಣಿ | ೧೯೬೪ | ೮೦ |
| ೩೨. ,, ,, | ಸಂಪುಟ–೬ | ,, | ೧೯೬೫ | ೮೫ |
| ೩೩. ,, ,, | ಸಂಪುಟ–೭ | ಬಿ.ಎಸ್. ಕುಲಕರ್ಣಿ<br>ಎಸ್.ಬಿ. ಪುರೋಹಿತ | ೧೯೬೭ | ೮೩ |
| ೩೪. ,, ,, | ಸಂಪುಟ–೮ | ,, | ೧೯೬೮ | ೭೮ |

| | | | | | |
|---|---|---|---|---|---|
| ೩೫. | ,, ,, | ಸಂಪುಟ–೯ | ,, | ೧೯೭೦ | ೭೨ |
| ೩೬. | ,, ,, | ಸಂಪುಟ–೧೦ | ಬಿ.ಎಸ್. ಕುಲಕರ್ಣಿ | ೧೯೭೬ | ೫೧ |
| ೩೭. | ,, ,, | ಸಂಪುಟ–೧೧ | ,, | ೧೯೮೨ | ೬೮ |
| ೩೮. | ,, ,, | ಸಂಪುಟ–೧೨ | ,, | ೧೯೮೩ | ೬೫ |
| ೩೯. | ,, ,, | ಸಂಪುಟ–೧೩ | ಸಿ.ಬಿ.ಕಡಕೋಳ<br>ಕೆ.ಪಿ. ಈರಣ್ಣ | ೧೯೯೦ | ೮೨ |
| ೪೦. | ಕನ್ನಡ ಅಧ್ಯಯನಪೀಠದ ಹಸ್ತಪ್ರತಿಸೂಚಿ | ಸಂಪುಟ–೧ | ಡಾ. ಬಿ.ಆರ್. ಹಿರೇಮಠ | ೧೯೯೨ | ಕಟ್ಟು ೧ ರಿಂದ<br>೧೧೦(೩೫೪ ಪ್ರತಿ) |
| ೪೧. | ,, | ಸಂಪುಟ–೨ | ,, | ಅಚ್ಚಿನಲ್ಲಿ | ೧೧೧–೨೦೦ |
| ೪೨. | ,, | ಸಂಪುಟ–೩ | ,, | ,, | ೨೦೧–೩೦೦ |
| ೪೩. | ,, | ಸಂಪುಟ–೪ | ,, | ,, | ೩೦೧–೪೦೦ |
| ೪೪. | ,, | ಸಂಪುಟ–೫ | ,, | ,, | ೪೦೧–೫೦೦ |
| ೪೫. | ,, | ಸಂಪುಟ–೬ | ಡಾ. ವಿ.ಬಿ. ರಾಜೂರ | ೧೯೯೨ | ೫೦೧–೬೦೦<br>(೩೬೭ ಪ್ರತಿ) |
| ೪೬. | ,, | ಸಂಪುಟ–೭ | ,, | ,, | ೬೦೧–೭೦೦<br>(೩೦೬ ಪ್ರತಿ) |
| ೪೭. | ,, | ಸಂಪುಟ–೮ | ,, | ,, | ೭೦೧–೮೦೦<br>(೨೭೯ ಪ್ರತಿ) |

| ೧ | ೨ | ೩ | ೪ | ೫ |
|---|---|---|---|---|
| ೪೮. | ,, ಸಂಪುಟ-೯ | ,, | ,, | ೮೦೧-೯೦೦ (೩೯೭ ಪ್ರತಿ) |
| ೪೯. | ,, ಸಂಪುಟ-೧೦ | ,, | ,, | ೯೦೧-೧೦೦೦ (೨೪೫ ಪ್ರತಿ) |

## ೪) ಬೆಂಗಳೂರು ಮತ್ತು ಹೈದ್ರಾಬಾದ ಹಸ್ತಪ್ರತಿಸೂಚಿಗಳು

| ೧ | ೨ | ೩ | ೪ | ೫ |
|---|---|---|---|---|
| ೫೦. | ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂಪುಟ-೧ (ಬೆಂಗಳೂರು ಕನ್ನಡ ಅಧ್ಯಯನ ಕೇಂದ್ರ) | ಎಸ್. ಶಿವಣ್ಣ | ೧೯೮೨ | ೪೪೯ |
| ೫೧. | ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂಪುಟ-೨ (ಬೆಂಗಳೂರು ಬಿ.ಎಂ.ಶ್ರೀ. ಪ್ರತಿಷ್ಠಾನ) | ಕೆಳದಿ ಗುಂಡಾಜೋಯಿಸ ಸಾ. ಗೀತಾಚಾರ್ಯ | ೧೯೮೭ | ೯೬ |
| ೫೨. | ಎ ಡಿಸ್ಕ್ರಿಪ್ಟಿವ್ ಕ್ಯಾಟಲಾಗ ಆಫ್ ದಿ ಕನ್ನಡ ಮ್ಯಾನ್ಯುಸ್ಕ್ರಿಪ್ಟ್ಸ ಇನ್ ದಿ ಉಸ್ಮಾನಿಯಾ ಯುನಿವ್ಹರ್ಸಿಟಿ ಲೈಬ್ರರಿ | ಬಿ. ರಾಮಚಂದ್ರರಾವ್ ಟಿ. ವಿ. ವೆಂಕಟಾಚಲಶಾಸ್ತ್ರಿ | ೧೯೬೬ | ೨೯೪ |

## ೫) ಇತರ ಸೂಚಿಗಳು

| ೧ | ೨ | ೩ | ೪ | ೫ |
|---|---|---|---|---|
| ೫೩. | ಕನ್ನಡ ಪ್ರಾಂತೀಯ ತಾಡಪತ್ರೀಯ ಗ್ರಂಥಸೂಚೀ | ಕೆ. ಭುಜಬಲಿಶಾಸ್ತ್ರಿ | ೧೯೪೮ | ೩೫೩೮ |
| ೫೪. | ಶ್ರವಣಬೆಳಗೊಳ ಶ್ರೀ ಜೈನಮಠದ ತಾಡಪತ್ರೀಯ ಗ್ರಂಥಗಳ ವಿವರ | ದೇವಕುಮಾರಶಾಸ್ತ್ರಿ | ೧೯೮೦ | ೪೪೮ + ೧೯ |

| | | | | |
|---|---|---|---|---|
| ೫೫. | A Devanagari Printed Catalogue of the manuscripts in the Mutt of Sri Lakshmisena Bhattaraka Mahaswamin, Kolhapur. | — | ಸಂ.೧೯೦೦ | — |
| ೫೬. | ಕೊಲ್ಲಾಪೂರ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಜೈನ ಬಸದಿಯ ಹಸ್ತಪ್ರತಿ ಸೂಚಿ | ಎಂ. ಎಂ. ಕಲಬುರ್ಗಿ<br>ಬಿ. ಆರ್. ಹಿರೇಮಠ<br>ಎಸ್.ವಿ. ಅಯ್ಯನಗೌಡರ | ೧೯೮೮ | ೮೫೧ |
| ೫೭. | ಗದುಗಿನ ತೋಂಟದಾರ್ಯಮಠದ ಹಸ್ತಪ್ರತಿಸೂಚಿ | ಎಸ್. ಶಿವಣ್ಣ | ೧೯೮೫ | ಕನ್ನಡ ೧೧೪೧<br>ಇತರ ೨೫೬ |
| ೫೮. | ವೀರಶೈವ ಅಪ್ರಕಟಿತ ಗ್ರಂಥಸೂಚಿ | ಎಸ್. ಶಿವಣ್ಣ | ೧೯೮೭ | ೧೭೧೭ |
| ೫೯. | ಎ ಕ್ಲಾಸಿಫೈಡ್ ಕ್ಯಾಟಲಾಗ ಅಫ್ ಸಂಸ್ಕೃತ ಆ್ಯಂಡ್ ಕನ್ನಡ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಸರಸ್ವತೀ ಭಂಡಾರವ್ (ಪ್ಯಾಲೇಸ್ ಸಂಸ್ಕೃತ ಲೈಬ್ರರಿ) ಆಫ್ ಎಚ್. ಎಚ್. ಮಹಾರಾಜಾ ಆಫ್ ಮೈಸೂರು ಕಲೆಕ್ಶನ್ ಆಫ್ 1900–1905 | — | ೧೯೦೫ | ೩೦೦ |
| ೬೦. | ದಿ ಲಿಸ್ಟ ಆಫ್ ದಿ ಅನ್‌ಪ್ರಿಂಟೆಡ್ ಸಂಸ್ಕೃತ ಆ್ಯಂಡ್ ಕನ್ನಡ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಪ್ಯಾಲೇಸ್ ಸರಸ್ವತಿ ಭಂಡಾರ (ಮಹಾರಾಜಾ ಸಂಸ್ಕೃತ ಕಾಲೇಜು ಮೈಸೂರು) | — | ೧೯೪೩ | ೧೧೩ |
| ೬೧. | ಎ ಕ್ಯಾಟಲಾಗ ಆಫ್ ಸಂಸ್ಕೃತ ಪ್ರಾಕೃತ ಆ್ಯಂಡ್ ಹಿಂದಿ ವರ್ಕ್ಸ್ ಇನ್ ದಿ ಜೈನ ಸಿದ್ಧಾಂತಭವನ ಆರಾ. | ಸುಪಾರ್ಶದಾಸ ಗುಪ್ತ<br>ಮೂಲಚಂದ್ರ ಜೈನ | ೧೯೧೯ | ೫೦೦ |

| ೧ | ೨ | ೩ | ೪ | ೫ |
|---|---|---|---|---|
| ೬೨. | ಕ್ಯಾಟಲಾಗ ಆಫ್ ಸಂಸ್ಕೃತ ಆ್ಯಂಡ್ ಪ್ರಾಕೃತ ಮ್ಯಾನ್ಯುಸ್ಕ್ರಿಪ್ಟ್ಸ್ ಇನ್ ದಿ ಸೆಂಟ್ರಲ್ ಪ್ರಾವಿನ್ಸಿಸ್ ಆ್ಯಂಡ್ ಬೆರಾರ್ (ಅನುಬಂಧ). | ರಾವಬಹದ್ದೂರ ಹೀರಾಲಾಲ | ೧೯೨೬ | ೪೩ |
| ೬೩. | ದಿ ಅನ್‌ನೋನ್ ಪೇಜಿಸ್ ಇನ್ ದಿ ಹಿಸ್ಟರಿ ಆಫ್ ಕನ್ನಡ ಲಿಟರೇಚರ್ | ಸಿ. ಮಹಾದೇವಪ್ಪ | ೧೯೬೦ | ೧೩ |
| ೬೪. | ಶ್ರೀ ಜಗದ್ಗುರು ಮೂರುಸಾವಿರಮಠದ ವರ್ಣನಾತ್ಮಕ ಹಸ್ತಪ್ರತಿಸೂಚಿ | ಕೆಳದಿ ಗುಂಡಾಜೋಯಿಸ್ | ೧೯೮೯ | ೩೯೦ |
| ೬೫. | ಶ್ರೀ ಜಗದ್ಗುರು ಮುರುಘರಾಜೇಂದ್ರ ಬೃಹನ್ಮಠದ ಹಸ್ತಪ್ರತಿಸೂಚಿ | ಎಸ್. ಶಿವಣ್ಣ | ೧೯೯೧ | ೪೬೬೧ |
| ೬೬. | ಕೆಳದಿ ಸಂಗ್ರಹಾಲಯ ಮತ್ತು ಐತಿಹಾಸಿಕ ಸಂಶೋಧನ ಕೇಂದ್ರ ವರ್ಣನಾತ್ಮಕ ಹಸ್ತಪ್ರತಿಸೂಚಿ. | ಎಸ್. ಆರ್. ರಾವ್<br>ಕೆಳದಿ ಗುಂಡಾಜೋಯಿಸ್ | | |

## ೬) ಲೇಖನ ರೂಪದ ಸೂಚಿಗಳು

| | | | | |
|---|---|---|---|---|
| ೬೭. | ಅ) ಸ್ವಾದಿಯ ಜೈನಮಠದೊಳಗಿರುವ ಕನ್ನಡ ಗ್ರಂಥಗಳು | ಕೆ. ಜಿ. ಕುಂದಣಗಾರ | ಜ.ಕ. ೭–೩ | ೨೮ |
| | ಆ) ಧರಣೇಂದ್ರಪ್ಪ ಅಣ್ಣ ಆಲೂರ ಸಿರ್ಸಿ, ಇವರಲ್ಲಿನ ತಾಡಪತ್ರ ಗ್ರಂಥಗಳು | | ೧೯೨೯ | ೦೮+೨<br>೨೭ |
| | ಇ) ಇಸ್ಲೂರ ಮಠದಲ್ಲಿರುವ ವೀರಶೈವ ಗ್ರಂಥಗಳು | | | |

| | | | | |
|---|---|---|---|---|
| ೬೮. | ಕೈಬರಹದ ಗ್ರಂಥಗಳ ಶೋಧನೆಯು | ಎಸ್.ಸಿ. ನಂದಿಮಠ | ಶಿ.ವಾ. ೬–೧ (೧೯೩೨) | ೨೧೫ |
| ೬೯. | ಹೈದರಾಬಾದು ಪ್ರಾಂತದಲ್ಲಿ ಕನ್ನಡ ಗ್ರಂಥಗಳ ಸಂಶೋಧನೆ | ಡಿ. ಕೆ. ಭೀಮಸೇನರಾವ್ | ಕ. ಸಾ. ಪ. ೨೧–೮ (೧೯೩೬) | ೨೦ |
| ೭೦. | ಐನೂಲಿ ಗುಂಡಯ್ಯನ ಮನೆಯ ಸಂಗ್ರಹ | ಕಪಟರಾಳ ಕೃಷ್ಣರಾಯ | ಶ. ಸಾ. ೪–೭ (೧೯೪೧) | ೮೩ |
| ೭೧. | ಹುಂಬಜ ಮಠದ ಗ್ರಂಥಗಳ ಪಟ್ಟಿ | — | ಜೈನ ಸಿದ್ಧಾಂತ ಭಾಸ್ಕರ ೧೪–೨ (೧೯೪೮) | — |
| ೭೨. | ಕಂಚಗಲ್ಲ–ಬಿದಿರೆ ದೊಡ್ಡಮಠದಲ್ಲಿ ದೊರೆತ ತಾಡವೋಲೆ ಗ್ರಂಥಗಳು | ಜಿ. ಎಂ. ಉಮಾಪತಿಶಾಸ್ತ್ರಿ | ಸುಕುಮಾರ ೪–೩, ೪–೯ | — |
| ೭೩. | ಗದಗ ತೋಂಟದಾರ್ಯಮಠದ ತಾಡವೋಲೆ | ,, | ಸುಕುಮಾರ ೫–೩,೪ (೧೯೫೪–೫೫) | — |
| ೭೪. | ಹಾವೇರಿ ಹುಕ್ಕೇರಿಮಠದ ಓಲೆ ಸಂಗ್ರಹ | ,, | ಸುಕುಮಾರ ೫–೫ (೧೯೫೫) | — |
| ೭೫. | ಹಾರ್ನಹಳ್ಳಿ ಕೋಡಿಮಠದ ಓಲೆಗಳು | ,, | ಸುಕುಮಾರ ೫–೮,೯ (೧೯೫೫) | — |
| ೭೬. | ಮದರಾಸು ಅಡಿಯಾರು ಪುಸ್ತಕಾಲಯದಲ್ಲಿರುವ ಕನ್ನಡ ಗ್ರಂಥಗಳು | — | ಶ. ಸಾ. ೨೦–೬ (೧೯೫೭) | ೫೬ |

| ೧ | ೨ | ೩ | ೪ | ೫ |
|---|---|---|---|---|
| ೭೭. | ಶರಣ ಸಾಹಿತ್ಯ ಕಾರ್ಯಾಲಯದಲ್ಲಿರುವ ತಾಳೆಯೋಲೆ ಹಾಗೂ ಕಾಗದ ಪ್ರತಿಗಳು | — | ಶ. ಸಾ. ೨೧-೫ (೧೯೫೮) | — |
| ೭೮. | ಬಳ್ಳಾರಿ ಹೊಸಪೇಟೆಯ ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಸಂಸ್ಥಾನಮಠದ ಗ್ರಂಥಭಂಡಾರದಲ್ಲಿರುವ ಓಲೆಗರಿ ಹಸ್ತಪ್ರತಿ ಗ್ರಂಥಗಳ ಸೂಚಿ | ಜಿ. ಎಂ. ಉಮಾಪತಿಶಾಸ್ತ್ರಿ | ಹೇಮಕೂಟ ೧-೨ (೧೯೭೫) | ೧೧೬ |
| ೭೯. | ಬಳ್ಳಾರಿ ಹೊಸಪೇಟೆಯ ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಸಂಸ್ಥಾನಮಠದ ಗ್ರಂಥಭಂಡಾರದಲ್ಲಿರುವ ಓಲೆಗರಿ ಹಸ್ತಪ್ರತಿ ಗ್ರಂಥಗಳ ಸೂಚಿ | ಎಸ್. ಎಸ್. ಹಿರೇಮಠ | ಹೇಮಕೂಟ ೧-೧೧ (೧೯೭೬) | ೧೧೬ |
| ೮೦. | ಶ್ರೀ ಬಾಹುಬಲಿ ಬ್ರಹ್ಮಚರ್ಯಾಶ್ರಮದಲ್ಲಿ ಮೈಕ್ರೋಫಿಲ್ಮ ಮಾಡಿರುವ ಗ್ರಂಥಗಳು | ಬಿ. ಎಸ್. ಸಣ್ಣಯ್ಯ | ಸನ್ಮತಿ ೨೨-೧ (೧೯೭೮) | ೩೬ |
| ೮೧. | ಶ್ರೀ ತಾತನವರ ಮಠದ ಗ್ರಂಥಭಂಡಾರ ಸೂಚಿ | ಜಿ. ಎಂ. ಉಮಾಪತಿಶಾಸ್ತ್ರಿ | ಹೇಮಕೂಟ ೪-೧೨ (೧೯೭೯) | ೧೪ |
| ೮೨. | ಇಂಗ್ಲಂಡಿನಲ್ಲಿರುವ ಕನ್ನಡ ಹಸ್ತಪ್ರತಿಗಳು | ಎಂ. ಎಂ. ಕಲಬುರ್ಗಿ | ಮಾರ್ಗ II | ೮೦ |

ಈ ಹಿಂದೆ ಹೇಳಿದ ಮತ್ತು ಇಲ್ಲಿಯ ವಿವರಗಳನ್ನು ನೋಡಿದರೆ ಧಾರವಾಡದ ಕನ್ನಡ ಅಧ್ಯಯನ ಸಂಸ್ಥೆ, ಬೆಂಗಳೂರಿನ ಕನ್ನಡ ಅಧ್ಯಯನ ಕೇಂದ್ರ, ಗುಲ್ಬರ್ಗಾದ ಕನ್ನಡ ವಿಭಾಗಗಳಲ್ಲಿ ಸೂಚೀರಚನಾ ಕೆಲಸ ತೀರ ಹಿಂದೆ ಬಿದ್ದಿದೆಯೆಂದು ಸ್ಪಷ್ಟವಾಗುತ್ತದೆ. ಕನ್ನಡ ಸಾಹಿತ್ಯ ಪರಿಷತ್ತು, ಶ್ರೀ ಮಂಜುನಾಥೇಶ್ವರ ಸಂಸ್ಕೃತಿ ಪ್ರತಿಷ್ಠಾನ, ಶಿವಯೋಗಮಂದಿರಗಳಂಥ ಸಂಸ್ಥೆಗಳೂ ಸೂಚಿ ರಚಿಸಬೇಕೆಂಬುದು ವ್ಯಕ್ತವಾಗಿಯೇ ಗೋಚರಿಸುತ್ತದೆ.

೬

# ವ್ಯವಸ್ಥಾಪನ

ಆಕರಣ ವಿಭಾಗ-ತಾಂತ್ರಿಕ ವಿಭಾಗ-ಸಂರಕ್ಷಣ ವಿಭಾಗ-ಗ್ರಂಥಸಂಪಾದನ ವಿಭಾಗ-ಗ್ರಂಥ ಪರಿಚಲನ ವಿಭಾಗ-ಅಧ್ಯಯನ ವಿಭಾಗ-ಗ್ರಂಥಾಲಯ ವಿಭಾಗ-ಯಂತ್ರೋಪಕರಣ ವಿಭಾಗ-ಪ್ರದರ್ಶನ ವಿಭಾಗ-ಸಮಾಲೋಚನ ವಿಭಾಗ-ಸಭಾಗೃಹ ವಿಭಾಗ-ವಿಶ್ರಾಂತಿ ವಿಭಾಗ.

"ಕಷ್ಟೇನ ಲಿಖಿತಂ ಮಯಾ, ಯತ್ನೇನ ಪರಿಪಾಲಯೇತ್" ಎಂದು ನಮ್ಮ ಹಸ್ತಪ್ರತಿ ಲಿಪಿಕಾರರು ಆಗಾಗ ಹೇಳಿದುದುಂಟು. 'ಕಷ್ಟಪಟ್ಟು ಬರೆದಿದ್ದೇನೆ, ಪ್ರಯತ್ನಪೂರ್ವಕ ರಕ್ಷಿಸಿರಿ' ಎಂದು ಸಮಸ್ತ ಲಿಪಿಕಾರರ ಪ್ರತಿನಿಧಿಯಾಗಿ ಈ ಲಿಪಿಕಾರರು ಇಲ್ಲಿ ಹೇಳಿದ್ದಾರೆ. ಇವರಂತೆ ಕೃತಿಕಾರರೂ-

"........ಒರೆದಂಗೆ ಬರೆದಂಗೆ ವಾಚಿಪಂ ।
ಗುರುತರಾನಂದದಿಂದಿದರ ತಾತ್ಪರ್ಯಮಂ ವಿಸ್ತರಿಸಿ ಪೇಳ್ದವಂಗೆ ।
ಪರಮಸದ್ಭಕ್ತಿಯಿಂದಾದರಿಸಿ ಕೇಳ್ದಂಗೆ....[೧]

ಸಕಲಸೌಭಾಗ್ಯಗಳು ಒದಗಿಬರಲಿ -ಎಂದು ಹಾರೈಸಿದ್ದಾರೆ. ಪ್ರತಿಗಳ ರಕ್ಷಣೆಯೆಂದರೆ ಕೃತಿಗಳ ರಕ್ಷಣೆ, ಕೃತಿಗಳ ರಕ್ಷಣೆಯೆಂದರೆ ಅಕ್ಷರರೂಪದಲ್ಲಿ ಸಂಸ್ಕೃತಿಯನ್ನು ಸಂರಕ್ಷಿಸುವುದಾಗಿದೆ. ಹೀಗಾಗಿ ದೇಶದ ತುಂಬ ಚದರಿಹೋಗಿರುವ ಹಸ್ತಪ್ರತಿಗಳನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸುವಷ್ಟೇ ಮುಖ್ಯವಾದುದು ಅವುಗಳ ವ್ಯವಸ್ಥಾಪನ. "ಇಂದು ಭಾರತದಲ್ಲಿ ೨೦೦ಕ್ಕೂ ಮಿಕ್ಕಿದ ಪೌರ್ವಾತ್ಯ ಸಂಶೋಧನ ಸಂಸ್ಥೆಗಳ ಹಾಗೂ ಇನ್ನಿತರ ಸಾಂಸ್ಕೃತಿಕ ಸಂಸ್ಥೆಗಳ ಗ್ರಂಥಾಲಯಗಳಲ್ಲಿ ೧೦ ಲಕ್ಷಕ್ಕೂ ಮಿಕ್ಕಿ ಹಸ್ತಪ್ರತಿಗಳಿವೆ, ಎಂದು ಅಂದಾಜು ಮಾಡಲಾಗಿದೆ. ಅಚ್ಚರಿಯ ಮಾತೆಂದರೆ ಪರದೇಶಗಳ ಗ್ರಂಥಾಲಯಗಳಲ್ಲಿಯೇ ಒಂದು ಲಕ್ಷಕ್ಕೂ ಮಿಕ್ಕಿ ಭಾರ

೧. ಶಿವತತ್ವ ಚಿಂತಾಮಣಿ, ೫೪-೫೪

ತೀಯ ಹಸ್ತಪ್ರತಿಗಳಿವೆ"[೨] ಎಂಬ ಮಾತನ್ನು ನೆನೆದರೆ ಈ ಅಪೂರ್ವ ಸಂಪತ್ತಿನ ಸಂರಕ್ಷಣೆಯ ಜವಾಬ್ದಾರಿ ಬಹುಮುಖ್ಯವಾದುದೆಂದು ಸ್ಪಷ್ಟವಾಗುತ್ತದೆ.

ಹಸ್ತಪ್ರತಿಗಳ ರಕ್ಷಣೆಯ ನೆಲೆಗಳಾದ ಹಸ್ತಪ್ರತಿ ಭಾಂಡಾರಗಳನ್ನು ನೆನೆದಾಗ ಪತ್ರಾಗಾರ (Archieves) ನಮ್ಮ ಕಣ್ಣು ಮುಂದೆ ಬರುತ್ತದೆ. ಇಲ್ಲಿ ರಕ್ಷಿಸಲ್ಪಡುವ ಹಸ್ತಪ್ರತಿ ಮತ್ತು ದಾಖಲೆಗಳ ವ್ಯತ್ಯಾಸವನ್ನು "The chief difference is that archieves are 'received' from one's parentbody where as manuscripts are 'collected' whether by gift or deposit or purchase".[೩] ಎಂದು ರಾಬರ್ಟ ಡಬ್ಲ್ಯೂ ಲೋವೆಟ್ ಹೇಳುವನಾದರೂ "ಹಸ್ತಪ್ರತಿ ಬಹುಪ್ರತಿ ರೂಪದಲ್ಲಿ ಸಿಗುವ ಸಾಮಾನ್ಯೀಕೃತ ಬರವಣಿಗೆಯಾಗಿದ್ದರೆ, ದಾಖಲೆ ಏಕಪ್ರತಿ ರೂಪದಲ್ಲಿ ಸಿಗುವ ನಿರ್ದಿಷ್ಟ ಬರವಣಿಗೆಯಾಗಿರುತ್ತದೆ"-ಎಂದು ಹೇಳುವುದೇ ಸೂಕ್ತವೆಂದು ತೋರುತ್ತದೆ. ಹೀಗೆ ಭಿನ್ನ ದೃಷ್ಟಿಕೋನಗಳಲ್ಲಿ ಬೆಳೆದ ಈ ಉಭಯ ಬರವಣಿಗೆಗಳನ್ನು ಸಂಗ್ರಹಿಸುವ, ಸಂರಕ್ಷಿಸುವ ಕೇಂದ್ರಗಳನ್ನು ಪ್ರತ್ಯೇಕವಾಗಿಯೇ ಬೆಳೆಸುವುದು ಸರಿಯಾದ ಉಪಕ್ರಮವಾಗಿದೆ.

ಈ ಸಂದರ್ಭದಲ್ಲಿ ಸ್ಮರಣೆಗೆ ಬರುವ ಇನ್ನೊಂದು ಬಗೆಯ ಸಂಸ್ಥೆಯೆಂದರೆ ಯಂತ್ರಪ್ರತಿ ಗ್ರಂಥ ಭಾಂಡಾರ (Printed books library). ಹಸ್ತಪ್ರತಿಗಳಾಗಲಿ, ಯಂತ್ರಪ್ರತಿಗಳಾಗಲಿ ಗ್ರಂಥಗಳೇ ಆಗಿದ್ದರೂ ಇವೆರಡರ ಸ್ವರೂಪ, ಪ್ರಯೋಜನ ವಿಧಾನ ಬೇರೆಯಾಗಿರುವುದರಿಂದ ಯಂತ್ರಪ್ರತಿ ಗ್ರಂಥಾಲಯದಲ್ಲಿಯ ವ್ಯವಸ್ಥೆಯನ್ನೇ ಹಸ್ತಪ್ರತಿಗ್ರಂಥಾಲಯಕ್ಕೂ ಇಡಿಯಾಗಿ ಅನ್ವಯಿಸುವುದು ಸೂಕ್ತ ಕಾಣುವುದಿಲ್ಲ. ಹೀಗಾಗಿ ಯಂತ್ರಪ್ರತಿ ಗ್ರಂಥಾಲಯದಿಂದ ಪ್ರತ್ಯೇಕವಾಗಿಯೇ ಹಸ್ತಪ್ರತಿ ಗ್ರಂಥಾಲಯವನ್ನು ಬೆಳೆಸಬೇಕಾಗಿದೆ.

ಹಸ್ತಪ್ರತಿ ಗ್ರಂಥಾಲಯಗಳನ್ನು ವೈಯಕ್ತಿಕ ಸಂಸ್ಥೆ, ಸಾರ್ವಜನಿಕ ಸಂಸ್ಥೆ ಮತ್ತು ಸರಕಾರಿ ಸಂಸ್ಥೆ ಎಂದು ಮೂರುವಿಭಾಗಗಳಲ್ಲಿ ವರ್ಗೀಕರಿಸಬಹುದು. ಧರ್ಮಸ್ಥಳದ ಮಂಜುನಾಥೇಶ್ವರ ಸಂಸ್ಕೃತಿ ಸಂಶೋಧನಸಂಸ್ಥೆ, ಮಠ-ಮಾನ್ಯಗಳ ಹಸ್ತಪ್ರತಿಭಾಂಡಾರಗಳು ವೈಯಕ್ತಿಕ ಸಂಸ್ಥೆಯಾದರೆ, ಕನ್ನಡ ಸಾಹಿತ್ಯಪರಿಷತ್ತು, ಬಸವಸಮಿತಿ ಮೊದಲಾದುವು ಸಾರ್ವಜನಿಕ ಸಂಸ್ಥೆಗಳಾಗಿವೆ. ವಿಶ್ವವಿದ್ಯಾಲಯಗಳ ಕನ್ನಡ ವಿಭಾಗ ಮತ್ತು ಪ್ರಾಚ್ಯವಿದ್ಯಾಸಂಸ್ಥೆಗಳು ಸರಕಾರೀ ಸಂಸ್ಥೆಗಳಾಗಿವೆ. ಹಸ್ತಪ್ರತಿ ವ್ಯವಸ್ಥಾಪನೆ ಅಧಿಕ ಮೊತ್ತದ ಹಣವನ್ನು ಅಪೇಕ್ಷಿಸುವುದರಿಂದ ಇಂಥ

---

೨. ಹಸ್ತಪ್ರತಿಗಳ ವರ್ಗೀಕರಣ ಹಾಗೂ ಸೂಚೀಕರಣ (ಕೆ. ಎಸ್. ದೇಶಪಾಂಡೆ). ಕ. ಭಾ. ೧೬-೧,೨

೩. Robert. W. Lovett : of manuscripts and Archieves. (Special Libraries, Vol. 64, P. 415)

ಭಾಂಡಾರಗಳಿಗೆ ತುಂಬ ಶ್ರೀಮಂತ ಹಿನ್ನೆಲೆ ಬೇಕಾಗುತ್ತದೆ; ಮುದ್ರಿತ ಗ್ರಂಥಾಲಯ ಸಿಬ್ಬಂದಿಯಿಂದ ಭಿನ್ನ ಮನೋಧರ್ಮದ ಸಿಬ್ಬಂದಿ ಬೇಕಾಗುತ್ತದೆ; ಹಸ್ತಪ್ರತಿ ಭಾಂಡಾರದ ಕಟ್ಟಡ ಮುದ್ರಿತ ಪ್ರತಿ ಗ್ರಂಥಭಾಂಡಾರಕ್ಕಿಂತ ಭಿನ್ನವಾಗಿರಬೇಕಾಗುತ್ತದೆ. ಈ ಎಲ್ಲ ಬಗೆಯ ಅನುಕೂಲತೆಗಳನ್ನೊಳಗೊಂಡ ಕಟ್ಟಡದಲ್ಲಿ ೧೨ ವಿಭಾಗಗಳನ್ನು ಕಲ್ಪಿಸಬಹುದಾಗಿದೆ. ೧. ಆಕರಣ ವಿಭಾಗ, ೨. ತಾಂತ್ರಿಕ ವಿಭಾಗ, ೩. ಸಂರಕ್ಷಣ ವಿಭಾಗ, ೪. ಗ್ರಂಥಸಂಪಾದನ ವಿಭಾಗ, ೫. ಗ್ರಂಥಪರಿಚಲನ ವಿಭಾಗ, ೬. ಅಧ್ಯಯನ ವಿಭಾಗ, ೭. ಗ್ರಂಥಾಲಯ ವಿಭಾಗ, ೮. ಯಂತ್ರೋಪಕರಣ ವಿಭಾಗ, ೯. ಪ್ರದರ್ಶನ ವಿಭಾಗ, ೧೦. ಸಮಾಲೋಚನ ವಿಭಾಗ, ೧೧. ಸಭಾಗೃಹ ವಿಭಾಗ, ಮತ್ತು ೧೨. ವಿಶ್ರಾಂತಿ ವಿಭಾಗ. ಈ ಎಲ್ಲ ವಿಭಾಗಗಳನ್ನೊಳಗೊಂಡುದು ಪರಿಪೂರ್ಣ 'ಹಸ್ತಪ್ರತಿವಾಸ್ತು' ಎನಿಸುತ್ತದೆ.

## ೧. ಆಕರಣ ವಿಭಾಗ

ಕ್ಷೇತ್ರಕಾರ್ಯಕರ್ತರು ಬೇರೆ ಬೇರೆ ಪ್ರದೇಶಗಳಿಂದ ಸಂಗ್ರಹಿಸಿ ತಂದ ಹಸ್ತಪ್ರತಿಗಳನ್ನು ಗ್ರಂಥಭಾಂಡಾರಕ್ಕೆ ಸ್ವೀಕರಿಸುವ ವಿಭಾಗವಿದು. ಇಲ್ಲಿ ಪ್ರತಿಗಳನ್ನು ಎಣಿಸಿ ತೆಗೆದುಕೊಳ್ಳುವುದು, ಕೊಟ್ಟವರ-ತಂದವರ ವಿಳಾಸ – ದಿನಾಂಕಗಳನ್ನು ದಾಖಲಿಸಿಕೊಳ್ಳುವುದು, ಹಿಂದುಮುಂದಾಗಿದ್ದರೆ ಪುಟಗಳನ್ನು ಕ್ರಮವಾಗಿ ಹೊಂದಿಸುವುದು, ಮುರಿದ ತುಂಡುಗಳನ್ನು ಗಮ್‌ಟೇಪಿನಿಂದ ದುರಸ್ತಿ ಮಾಡುವುದು, ಅವಶ್ಯವೆನಿಸಿದಲ್ಲಿ ಹೊಸ ದಾರ, ಹೊಸ ಫಲಕಗಳನ್ನು ಅಳವಡಿಸುವುದು, ಹಸ್ತಪ್ರತಿಯನ್ನು ಕಟ್ಟಲು ಉಪಯೋಗಿಸಿದ್ದ ಯಾವುದೋ ಕಾಲದ ಧೂಳುತುಂಬಿದ್ದ ಅರಿವೆಯನ್ನು ತೆಗೆದುಹಾಕುವುದು, ಧೂಳು-ಬೂಷ್ಟ-ಕ್ರಿಮಿಗಳನ್ನು ದೂರಮಾಡುವುದು, ಕ್ರಿಮಿನಾಶಕ ತೈಲವನ್ನು ಲೇಪಿಸುವುದು ಈ ವಿಭಾಗದ ಕೆಲಸವಾಗಿದೆ. ಈ ಎಲ್ಲ ಕಾರ್ಯಗಳಿಗೆ ಅವಶ್ಯವಾದ ಟೇಪು, ಕತ್ತರಿ, ಅಂಟು, ದಾರ, ಫಲಕ, ಕ್ರಿಮಿನಾಶಕ ತೈಲ ಇತ್ಯಾದಿ ಸಣ್ಣಪುಟ್ಟ ಸಾಮಗ್ರಿಗಳು ಇಲ್ಲಿ ಬೇಕಾಗುತ್ತವೆ. ಒಟ್ಟಾಗಿ ಹಸ್ತಪ್ರತಿಯ ಜೀರ್ಣೋದ್ಧಾರಕಾರ್ಯ ಇಲ್ಲಿ ನಡೆಯುತ್ತದೆ. ಇವುಗಳಲ್ಲಿ ಬಹುಮುಖ್ಯ ಕೆಲಸವೆಂದರೆ ಧೂಳು, ಬೂಷ್ಟ, ಕ್ರಿಮಿ ಮತ್ತು ದಂಶಕ ಪ್ರಾಣಿಗಳ ನಿವಾರಣೆ ಮತ್ತು ಕ್ರಿಮಿನಾಶಕ ತೈಲಲೇಪನ.

ಹಸ್ತಪ್ರತಿಗಳನ್ನು ಹಾಳುಮಾಡಲು ಧೂಳು ಬೂಷ್ಟಗಳೂ ಕಾರಣವಾಗುತ್ತವೆ. ಧೂಳು ಕಾರಣವಾಗಿ ಹಸ್ತಪ್ರತಿಯಲ್ಲಿ ಸೇರಿಕೊಳ್ಳುವ ಅಂಡಾಣುಗಳಿಂದ ಕ್ರಿಮಿಗಳು ಹುಟ್ಟಿಕೊಳ್ಳುತ್ತವೆ. ಮಳೆಗಾಲದ ತೇವಾಂಶದಿಂದಾಗಿ ಧೂಳು ಕೆಸರಿನಂತಾಗಿ ಅಕ್ಷರ ಮಸಕಾಗುತ್ತವೆ. ಈ ಅಪಾಯವನ್ನು ತಪ್ಪಿಸುವ ಸಲುವಾಗಿ ಧೂಳನ್ನು ಸರಿಯಾಗಿ ಜಾಡಿಸಿ, ಒರೆಸಿ ತೆಗೆಯಬೇಕು, ಮಳೆಗಾಲದಲ್ಲಿ ಹಸ್ತಪ್ರತಿಗಳ ಮೇಲ್ಭಾಗದಲ್ಲಿ ಬಿಳಿಯ ಬೂಷ್ಟ ಆವರಿಸುತ್ತದೆ. ಇದು ಗ್ರಂಥದಿಂದ ಗ್ರಂಥಕ್ಕೆ ಹರಡುವ ಸಾಧ್ಯತೆಯುಂಟು.

ಇದರಿಂದಾಗಿ ಎಲೆಗಳು ಒಂದಕ್ಕೊಂದು ಬಿಡಿಸಲಾರದಂತೆ ಅಂಟಿಕೊಳ್ಳುತ್ತವೆ. ಬಿಡಿಸಲು ಹೋದರೆ ಮುರಿದು ಹಾಳಾಗುವ ಸಂಭವವೇ ಹೆಚ್ಚು. ಆದುದರಿಂದ ಬೂಷ್ಟು ಬೆಳೆಯದಂತೆ ನೋಡಿಕೊಳ್ಳುವುದು, ಬೆಳೆದ ಬೂಷ್ಟನ್ನು ಒರೆಸಿ ತೆಗೆಯುವುದು ಇಲ್ಲಿ ಮೊದಲು ನಡೆಯಬೇಕಾಗುತ್ತದೆ.

ಇವೆರಡಕ್ಕಿಂತ ಹಸ್ತಪ್ರತಿಗಳನ್ನು ರಾಕ್ಷಸನಂತೆ ಹಾಳು ಮಾಡುವುವು ಕ್ರಿಮಿಗಳು. ಇಂದು ಗ್ರಂಥಗಳು ಒಂದು ಗ್ರಂಥಾಲಯದಿಂದ ಇನ್ನೊಂದು ಗ್ರಂಥಾಲಯಕ್ಕೆ ಎರವಲು ಹೋಗುವ ಸವಲತ್ತು ಇರುವ ಕಾರಣವಾಗಿ ಅವುಗಳ ಜೊತೆ ಕ್ರಿಮಿಗಳೂ ಪ್ರಾಂತದಿಂದ ಪ್ರಾಂತಕ್ಕೆ, ದೇಶದಿಂದ ದೇಶಕ್ಕೆ ವಲಸೆ ಹೋಗುತ್ತವೆ. ಇವುಗಳಲ್ಲಿ ಜಿರಲೆ ಪುಸ್ತಕವನ್ನು ತಿನ್ನುವುದಲ್ಲದೆ ತಾನು ಹೊರಬಿಡುವ ಕಪ್ಪುದ್ರವದಿಂದ ಪುಸ್ತಕದ ಬಣ್ಣವನ್ನು ನಾಶಗೊಳಿಸುತ್ತದೆ. ಇದಕ್ಕಿಂತ ಭಯಾನಕವಾದುದು ಪುಸ್ತಕ ಕ್ರಿಮಿ (ಬುಕ್‌ವರ್ಮ್). ಇದು ಕಾಗದ ಪ್ರತಿಯ ಅಂಟನ್ನು ತಿನ್ನುವುದಲ್ಲದೆ, ತಾಳೆ ಮತ್ತು ಕಾಗದ ಪ್ರತಿಗಳಲ್ಲಿ ಅನೇಕ ರೀತಿಯ ರಂಧ್ರ ಕೊರೆಯುತ್ತದೆ ಮತ್ತು ಹೊರಬಿಡುವ ದ್ರವದಿಂದ ಪುಸ್ತಕದ ಪುಟಗಳು ಅಂಟಿಕೊಳ್ಳುವಂತೆ ಮಾಡುತ್ತದೆ. ಬುಕ್‌ಲೈಸ ಹೆಸರಿನ ಬಿಳಿಯ ಹಾಗೂ ಬೂದು ಬಣ್ಣದ ಈ ಕ್ರಿಮಿಯು ಅಂಟು ತಿನ್ನುವುದಲ್ಲದೆ, ತಾಳೆಪ್ರತಿಗಿಂತ ಕಾಗದಪ್ರತಿಯನ್ನು ಹೆಚ್ಚು ನಾಶಮಾಡುತ್ತದೆ. ಸಿಲ್ವರ್‌ಫಿಶ್ ಹೆಸರಿನ ಕ್ರಿಮಿ ತೇವು ಕತ್ತಲೆ ಇರುವಲ್ಲಿ ಸೇರಿ, ಗ್ರಂಥವನ್ನು ತಿಂದು ಹಾಕುತ್ತದೆ. ಇನ್ನೊಂದು ಗ್ರಂಥವೈರಿಯೆಂದರೆ ಗೆದ್ದಲು. ಇದು ಪುಸ್ತಕವಲ್ಲದೆ ಪೀಠೋಪಕರಣ ಮೊದಲಾದುವನ್ನೂ ನಾಶಮಾಡುತ್ತವೆ. ಈ ಕ್ರಿಮಿಗಳಿಗೆ ಸೇರಿಕೊಳ್ಳಲು ಅವಕಾಶ ಕೊಡಲೇ ಬಾರದು. ಒಂದುವೇಳೆ ಸೇರಿದ್ದರೆ ತೀವ್ರ ದೂರ ಮಾಡಬೇಕು. ಬಳಿಕ ಮೇಲುಕೋಟೆ, ಮೈಸೂರು ಹಸ್ತಪ್ರತಿ ಭಾಂಡಾರಗಳಲ್ಲಿ ಬಳಸುವ ದೇಶೀತೈಲವನ್ನೋ, ಇತ್ತೀಚೆ ಉಪಯೋಗಿಸುತ್ತಿರುವ ಸಿಟ್ರೋನೆಲ್ ತೈಲವನ್ನೋ ಗರಿಗಳಿಗೆ ಲೇಪಿಸಬೇಕು. ಇದಕ್ಕಿಂತ, ಕೀಟಗಳ ನಾಶಕ್ಕಾಗಿ ಪ್ರಧೂಮನಕ್ರಿಯೆ (Fumigation) ಕೈಕೊಳ್ಳುವುದು ಲೇಸು. ಇದು ಘನ, ದ್ರವ ಇಲ್ಲವೆ ಅನಿಲರೂಪದ ರಸಾಯನ ವಸ್ತುಗಳನ್ನು ಹವೆಯ ಮೂಲಕ ಹಸ್ತಪ್ರತಿಗಳ ಮೇಲೆ ಪ್ರಸರಿಸುವುದಾಗಿದೆ. ಇದಕ್ಕಾಗಿ ಕನಿಷ್ಠ ಪಕ್ಷ ಒಂದಾದರೂ ಪ್ರಧೂಮನ ಕಪಾಟು (Fumigation Chamber) ಸಂಸ್ಥೆಗೆ ಅವಶ್ಯ.

ಈ ಕ್ರಿಮಿಗಳಲ್ಲದೆ ದಂಶಕ ಪ್ರಾಣಿಗಳು ಅಂದರೆ ಇಲಿ, ಹೆಗ್ಗಣ ಮೊದಲಾದವುಗಳಿಂದಲೂ ಹಸ್ತಪ್ರತಿಗಳನ್ನು ರಕ್ಷಿಸಬೇಕು. ಹಸ್ತಪ್ರತಿಗಳನ್ನು ಕಡಿದು ಚೂರು ಚೂರು ಮಾಡುವ ಇವು, ಒಳಗೆ ಬರದಂತೆ ಎಚ್ಚರವಹಿಸಬೇಕು; ಬಂದಿದ್ದರೆ ತೀವ್ರ ನಾಶಮಾಡಬೇಕು.[೪]

೪. ಹಸ್ತಪ್ರತಿಗಳ ರಕ್ಷಣೆ ಮತ್ತು ಪರಿಚಲನೆ (ಬಿ. ಎಸ್. ಸಣ್ಣಯ್ಯ) ಕ. ಭಾ. ೧೬-೧,೨.

## ೨. ತಾಂತ್ರಿಕ ವಿಭಾಗ :

ಜೀರ್ಣೋದ್ಧಾರದ ಬಳಿಕ ಹಸ್ತಪ್ರತಿಗಳು ಈ ವಿಭಾಗಕ್ಕೆ ವರ್ಗಾಯಿಸಲ್ಪಡುತ್ತವೆ. ಇಲ್ಲಿ ಹಸ್ತಪ್ರತಿವಿಷಯಜ್ಞಾನ, ಹಸ್ತಪ್ರತಿಶಾಸ್ತ್ರಜ್ಞಾನವುಳ್ಳ ವಿಶಿಷ್ಟ ಸಿಬ್ಬಂದಿವರ್ಗ ಇರುತ್ತದೆ. ಕೃತಿ ಮತ್ತು ಪ್ರತಿಗಳ ಅಧ್ಯಯನದ ಬಲದಿಂದ ಸೂಚೀಕರಣ, ವರ್ಗೀಕರಣ ಕ್ರಿಯೆಗಳನ್ನು ಇಲ್ಲಿ ಮಾಡಲಾಗುತ್ತದೆ. ಕ್ಷೇತ್ರಕಾರ್ಯಕರ್ತ ಹಸ್ತಪ್ರತಿಯಲ್ಲಿಯ ಕೃತಿನಾಮಗಳನ್ನು ಯಾದಿಮಾಡಿಕೊಂಡು ಬಂದಿದ್ದರೂ ಅದು ಪರಿಪೂರ್ಣವಾಗಿರುವುದೆಂದು ಹೇಳಲು ಬರುವುದಿಲ್ಲ. ಏಕೆಂದರೆ ಅಲ್ಲಿ ಅವನಿಗೆ ಸಮಯವೂ ಇರುವುದಿಲ್ಲ, ಅನುಕೂಲತೆಯೂ ಇರುವುದಿಲ್ಲ. ಹೀಗಾಗಿ ಈ ವಿಭಾಗದ ಸಿಬ್ಬಂದಿ ಮಾತ್ರ ಎಲ್ಲ ಪುಟಗಳನ್ನು ಬಿಚ್ಚಿ, ಕೃತಿಗೆ ಸಂಬಂಧಪಟ್ಟಂತೆ ಕೃತಿನಾಮ, ವಿಷಯ, ಪ್ರಕಾರ, ಕವಿನಾಮ, ಕಾಲ ಇತ್ಯಾದಿ ವಿವರಗಳನ್ನೂ, ಪ್ರತಿಗೆ ಸಂಬಂಧಪಟ್ಟಂತೆ ಬಳಸಿದ ವಸ್ತು, ಆಕಾರ, ಪುಟಸಂಖ್ಯೆ, ಹಸ್ತಪ್ರತಿಸಂಖ್ಯೆ, ಲಿಪಿಸ್ವರೂಪ, ಭಾಷಾಸ್ವರೂಪ ಆದಿ-ಅಂತ್ಯ ಇತ್ಯಾದಿ ವಿವರಗಳನ್ನೂ ಟಿಪ್ಪಣಿ ಮಾಡಿಕೊಳ್ಳಬೇಕಾಗುತ್ತದೆ. ಇದಕ್ಕಾಗಿಯೇ ಸಿದ್ಧಪಡಿಸಿರುವ ಮುದ್ರಿತ ನಮೂನೆಗಳಲ್ಲಿ ಈ ವಿವರಗಳನ್ನು ತುಂಬುವ ಕೆಲಸ ಇಲ್ಲಿ ಜರುಗುತ್ತದೆ. ಹೀಗೆ ಪ್ರತಿಯೊಂದು ಹಸ್ತಪ್ರತಿಯಲ್ಲಿಯ ಕೃತಿಪರಿಚಯ, ಪ್ರತಿಪರಿಚಯಗಳ ಸೂಚೀಕರಣದ ಬಳಿಕ ವರ್ಗೀಕರಣ ಕ್ರಿಯೆಯನ್ನು ಅವನು ಪೂರೈಸಬೇಕಾಗುತ್ತದೆ.

ಇಂದು ಮುದ್ರಿತ ಗ್ರಂಥ ಒಂದು ನಿರ್ದಿಷ್ಟ ಆಕಾರ ಪಡೆದಿದ್ದು ಅದರ ಸ್ವರೂಪ, ಪುಟಸಂಖ್ಯಾ ಕ್ರಮ, ಶೀರ್ಷಿಕೆ, ಲೇಖಕರ ಹೆಸರು, ಪ್ರಕಟಿತ ವರ್ಷ, ಬೆಲೆ, ಪ್ರಕಾಶನ ಇತ್ಯಾದಿ ವಿವರಗಳು ನಿರ್ದಿಷ್ಟವಾಗಿವೆ. ಹಸ್ತಪ್ರತಿಗಳಿಗೆ ಇಂಥ ನಿರ್ದಿಷ್ಟತೆ ಕಡಿಮೆ. ಅವು ಯಾವುಯಾವುದೋ ಆಕಾರ, ಎಲ್ಲಿ ಎಲ್ಲಿಯೋ ಪುಟಸಂಖ್ಯೆ, ಶೀರ್ಷಿಕೆ ಮತ್ತು ಲೇಖಕನ ಹೆಸರು ಹೊಂದಿರುವುದರಿಂದ ಅವುಗಳಲ್ಲಿ ಪುಸ್ತಕದ ಅಚ್ಚುಕಟ್ಟುತನ ಕಂಡು ಬರುವುದಿಲ್ಲ. ಲೇಖನ ಮಿತಿ, ಲಿಪಿಕಾರರ ಹೆಸರು ಇತ್ಯಾದಿಗಳೂ ಅನಿಯತವಾಗಿರುತ್ತವೆ. ಆದುದರಿಂದ ಸೂಚೀಕರಣವು ಮುದ್ರಿತ ಗ್ರಂಥಾಲಯ ಶಾಸ್ತ್ರದಲ್ಲಿ ಸರಳ, ಹಸ್ತಪ್ರತಿ ಶಾಸ್ತ್ರದಲ್ಲಿ ಜಟಿಲವೆಂದೇ ಹೇಳಬೇಕು.

**ಸೂಚೀಕರಣ :** ಹಸ್ತಪ್ರತಿಸೂಚಿಯೆನ್ನುವುದು ಒಂದು ಹಸ್ತಪ್ರತಿಯ ವಿವರಗಳನ್ನು ತಿಳಿಸಿ ಕೊಡುವುದಾಗಿದೆ. ಇಲ್ಲಿ ಕೆಲವೇ ವಿವರಗಳನ್ನು ತೋರಿಸಿಕೊಡುವುದು 'ಸೂಚಿ', ಎಲ್ಲ ವಿವರಗಳನ್ನು ತೋರಿಸಿಕೊಡುವುದು 'ವಿವರಣಾತ್ಮಕ ಸೂಚಿ' ಎಂದು ಎರಡು ಮುಖ್ಯ ಬಗೆಗಳಿವೆ. ಇನ್ನೊಂದು ಬಗೆಯೆಂದರೆ ಒಂದು ಕೃತಿಯ ಪ್ರತಿಗಳು ಯಾವ ಯಾವ ಸ್ಥಳದಲ್ಲಿವೆಯೆಂಬುದನ್ನು ವಿಶಿಷ್ಟ ವಿವರಗಳೊಂದಿಗೆ ತೋರಿಸಿಕೊಡುವ 'ಸಮಗ್ರಸೂಚಿ'

ಈ ಮೂರರಲ್ಲಿ ಸೂಚಿಯೆನ್ನುವುದು ಹಸ್ತಪ್ರತಿಯ ನಂಬರು, ಕೃತಿಯ ಶೀರ್ಷಿಕೆ, ಕವಿನಾಮ, ಪ್ರಕಾರ-ಇಷ್ಟು ವಿವರಗಳ ಕಾಲಂಗಳನ್ನೊಳಗೊಂಡಿರುತ್ತದೆ; ಇಲ್ಲಿ ಶೀರ್ಷಿಕೆಗಳನ್ನು ಅಕಾರಾದಿಯಲ್ಲಿ ಹೊಂದಿಸಲಾಗಿರುತ್ತದೆ. ಇದಕ್ಕೆ ಬದಲು

ಕವಿನಾಮಗಳನ್ನೂ ಅಕಾರಾದಿಯಾಗಿ ಹೊಂದಿಸಬಹುದು. ಆಗ ಶೀರ್ಷಿಕೆ, ಕವಿನಾಮ ಕಾಲಂ ಪಲ್ಲಟವಾಗುತ್ತವೆ. ಕವಿನಾಮದ ಕೆಳಗೆ ಅವನ ಕೃತಿಗಳನ್ನು ಅಕಾರಾದಿಯಾಗಿ ಹೊಂದಿಸಬೇಕು. ಮೂರನೆಯದಾಗಿ ಕೃತಿಗಳನ್ನು ಪ್ರಕಾರವಾಗಿ ವರ್ಗೀಕರಿಸಿ, ಆಯಾ ಪ್ರಕಾರದ ಕೆಳಗೆ ಶೀರ್ಷಿಕೆಗಳನ್ನು ಅಕಾರಾದಿಯಾಗಿ ಜೋಡಿಸಬೇಕು. ಇದು ತೀರ ಸಾಮಾನ್ಯಸೂಚಿಯಾಗಿದ್ದು, 'ದರ್ಶಕಸೂಚಿ'ಯೆಂದು ಇಂಥವುಗಳನ್ನು ಕರೆಯಬಹುದು.

ಇದನ್ನು ಬಿಟ್ಟರೆ ತುಂಬ ವಿವೇಚನೆಗೆ ಒಳಗಾದುದು ವಿವರಣಾತ್ಮಕ ಸೂಚಿ. ಇದನ್ನು ಕಾರ್ಡಿನಲ್ಲಿ ದಾಖಲಿಸಬಹುದು, ಗ್ರಂಥರೂಪದಲ್ಲಿ ಪ್ರಕಟಿಸಬಹುದು. ಇವುಗಳನ್ನು ಕ್ರಮವಾಗಿ ಪತ್ರಕಸೂಚಿ, ಪುಸ್ತಕಸೂಚಿ ಎಂದು ಕರೆಯಬಹುದಾಗಿದೆ. ಇಂದು ವ್ಯವಸ್ಥಿತ ನಿರ್ಮಿತಿಯಿಂದಾಗಿ ವಿವರಣಾತ್ಮಕ ಸೂಚೀಸಾಹಿತ್ಯಕ್ಕೆ ವಿಜ್ಞಾನ ಮರ್ಯಾದೆ ಪ್ರಾಪ್ತವಾಗಿದೆ. ಪ್ರಯೋಜನ, ಮಹತ್ವ ಹೆಚ್ಚುತ್ತ ನಡೆದಂತೆ ತಕ್ಕ ತಂತ್ರಗಳು ಅವಿಷ್ಕಾರಗೊಂಡು ಅದು ವೈವಿಧ್ಯಪೂರ್ಣವಾಗಿ ಬೆಳೆಯುತೊಡಗಿದೆ. ಈ ವರೆಗೆ ಮದ್ರಾಸ ಪ್ರಾಚ್ಯಹಸ್ತಪ್ರತಿಭಾಂಡಾರ, ಮೈಸೂರಿನ ಪ್ರಾಚ್ಯವಿದ್ಯಾಸಂಸ್ಥೆ-ಕನ್ನಡ ಅಧ್ಯಯನಸಂಸ್ಥೆ, ಧಾರವಾಡದ ಕನ್ನಡ ಸಂಶೋಧನಸಂಸ್ಥೆ-ಕನ್ನಡ ಅಧ್ಯಯನ ಪೀಠ, ಬೆಂಗಳೂರಿನ ಕನ್ನಡ ಅಧ್ಯಯನ ಕೇಂದ್ರ, ಹೈದ್ರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾಲಯದ ಕನ್ನಡ ವಿಭಾಗಗಳು ವಿವರಣಾತ್ಮಕ ಸೂಚೀ ಗ್ರಂಥವನ್ನು ಪ್ರಕಟಿಸಿವೆ. ಇಲ್ಲೆಲ್ಲ ಹಸ್ತಪ್ರತಿಯನ್ನು ಕುರಿತು ಅಡಕಗೊಳಿಸಿದ ವಿವರಗಳಲ್ಲಿ ಒಂದಿಷ್ಟು ವ್ಯತ್ಯಾಸ ಕಂಡುಬರುತ್ತದೆ. ಬಹುಶಃ ಇವರಾರೂ ಒಂದು ಮೂಲಭೂತ ವಿಷಯವನ್ನೇ ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದಂತಿಲ್ಲ. ಅದು: ಯಾವುದೇ ಹಸ್ತಪ್ರತಿಯಲ್ಲಿ ಕೃತಿ ಮತ್ತು ಪ್ರತಿ ಎಂಬ ಎರಡು ಘಟಕಗಳು ಸೇರಿರುತ್ತವೆ. ಇವುಗಳಲ್ಲಿ ಕೃತಿಯೆನ್ನುವುದು ಕವಿ ಬರೆದ ಪಾಠ, ಪ್ರತಿಯೆನ್ನುವುದು ಲಿಪಿಕಾರ ಬರೆದ ಪಾಠ ಮತ್ತು ಬಳಸಿದ ವಸ್ತುವಾಗಿದೆ. ಆದುದರಿಂದ ಕೃತಿಪರಿಚಯ, ಪ್ರತಿಪರಿಚಯ ಎಂದು ಎರಡು ಹಂತಗಳಲ್ಲಿ ಹಸ್ತಪ್ರತಿಗಳ ವಿವರವನ್ನು ಸೂಚಿಯಲ್ಲಿ ಹೀಗೆ ಸಂಗ್ರಹಿಸಬೇಕು:

**ಕೃತಿ ಪರಿಚಯ**

| | | |
|---|---|---|
| ಶೀರ್ಷಿಕೆ | ಕವಿ | ವಿಷಯ |
| ಪ್ರಕಾರ | ಕಾಲ | ಪ್ರಕಟಿತ/ಅಪ್ರಕಟಿತ |

ವಿಶೇಷ:

**ಪ್ರತಿ ಪರಿಚಯ**

| | | |
|---|---|---|
| ಬರೆಯಲು ಬಳಸಿದ ವಸ್ತು/ ನಂ | ಆಕಾರ | ಪುಟ |
| ಹಸ್ತಪ್ರತಿಸ್ವರೂಪ | ಲಿಪಿಸ್ವರೂಪ | ಭಾಷಾಸ್ವರೂಪ |

ಆದಿ :

ಅಂತ್ಯ :

ವಿಶೇಷ :

ಕಟ್ಟಿನಲ್ಲಿರುವ ಪ್ರತಿಗಳು :

ಹಸ್ತಪ್ರತಿಯ ವಿವರಣಾತ್ಮಕ ಸೂಚಿ ಸಿದ್ಧಮಾಡುವಾಗ ಕಾರ್ಡಿನ ಮೇಲೆ ಎಲ್ಲಿ? ಯಾವ ವಿವರವನ್ನು ಬರೆಯಬೇಕು? ಎಂಬುದರ ನಮೂನೆ ಇದು. ಇವುಗಳಲ್ಲಿ ಆದಿ ಅಂತ್ಯ ಈ ಶೀರ್ಷಿಕೆಗಳನ್ನು ಮಾತ್ರ ಕಡ್ಡಾಯವಾಗಿ ಉಳಿಸಿಕೊಂಡು, ಅವಶ್ಯವೆನಿಸಿದಲ್ಲಿ ಮಾತ್ರ ಎರಡೂ ಹಂತಗಳಲ್ಲಿ 'ವಿಶೇಷ' ಎಂಬುದನ್ನೂ, ಎರಡನೆಯ ಹಂತದಲ್ಲಿ 'ಕಟ್ಟಿನಲ್ಲಿರುವ ಪ್ರತಿಗಳು' ಎಂಬುದನ್ನೂ ಉಳಿಸಿಕೊಂಡು ಇವುಗಳ ಮುಂದೆ ಸಂಬಂಧ ಪಟ್ಟ ವಿವರ ತುಂಬಬೇಕು. ಮಿಕ್ಕ ಶೀರ್ಷಿಕೆಗಳನ್ನು ತೆಗೆದುಹಾಕಿ ಅವುಗಳ ಸ್ಥಾನದಲ್ಲಿ ಸಂಬಂಧಪಟ್ಟ ವಿವರಗಳನ್ನು ಬರೆಯಬೇಕು. 'ವಿಷಯ' ಎಂಬಲ್ಲಿ ಪುರಾಣ, ಚರಿತ್ರೆ, ಛಂದಸ್ಸು –ಹೀಗೆ ನಮೂದಿಸಬೇಕು. 'ಪ್ರಕಾರ' ಎಂಬಲ್ಲಿ ಗದ್ಯ, ಚಂಪೂ, ರಗಳೆ, ಷಟ್ಪದಿ ಇತ್ಯಾದಿ ದಾಖಲಿಸಬೇಕು. ಕೃತಿ ಪ್ರಕಟವಾಗದಿದ್ದಲ್ಲಿ ಅಪ್ರಕಟಿತವೆಂದು, ಪ್ರಕಟವಾಗಿದ್ದರೆ ಸಂಪಾದಕರ ಹೆಸರು, ವರ್ಷಗಳನ್ನು ನಮೂದಿಸಬೇಕು. 'ವಸ್ತು/ ನಂ' ಎಂಬಲ್ಲಿ ಬರೆಯಲು ಬಳಸಿದುದು ತಾಳೆಪ್ರತಿಯೋ? ಸ್ವದೇಶಿ ಕಾಗದ ಪ್ರತಿಯೋ? ವಿದೇಶೀ ಕಾಗದಪ್ರತಿಯೋ? ಎಂಬ ಸೂಚನೆ ಮತ್ತು ಆ ಹಸ್ತಪ್ರತಿಯ ನಂಬರು ಬರೆಯಬೇಕು. ಉದಾ: ತಾಪ್ರ / ೪೫, ಸ್ವಕಾಪ್ರ / ೪೫, ವಿಕಾಪ್ರ / ೪೫. ಆಕಾರ ಎಂಬಲ್ಲಿ ಉದ್ದ-ಆಗಲಗಳನ್ನು ಅಂಗುಲಗಳಲ್ಲಿ ೩''×೧೫'' ಹೀಗೆ ಬರೆಯ ಬೇಕು. ಪುಟದ ಸ್ಥಾನದಲ್ಲಿ ಪ್ರಸ್ತುತ ಕೃತಿ ಯಾವ ಪುಟದಿಂದ ಯಾವ ಪುಟದವರೆಗೆ ವ್ಯಾಪಿಸಿದೆಯೆಂಬುದನ್ನು ಸೂಚಿಸಬೇಕು. ಉದಾ: ಪು. ೨೫–೭೫. ಹಸ್ತಪ್ರತಿ ಸ್ವರೂಪ, ಲಿಪಿಸ್ವರೂಪ, ಭಾಷಾಸ್ವರೂಪಗಳ ವಿಷಯವಾಗಿ, ಉತ್ತಮ, ಮಧ್ಯಮ, ಕನಿಷ್ಠ ಎಂಬ ಪದಗಳನ್ನು ಬಳಸಿದರೆ ಸಾಕು. ಒಂದು ಕಟ್ಟಿನಲ್ಲಿ ಅನೇಕ ಪ್ರತಿಗಳು ಅಡಕವಾಗಿದ್ದರೆ ಮೊದಲಿನ ಪ್ರತಿಯ ಸೂಚೀಕಾರ್ಡಿನಲ್ಲಿ ಮಾತ್ರ 'ಕಟ್ಟಿನಲ್ಲಿರುವ ಪ್ರತಿಗಳು' ಶೀರ್ಷಿಕೆಯ ಮುಂದೆ ಅದರಲ್ಲಿಯ ಎಲ್ಲ ಪ್ರತಿಗಳ ಯಾದಿ ಕೊಡಬೇಕು. ಆ ಕಟ್ಟಿನಲ್ಲಿಯ ಪ್ರಥಮೇತರ ಪ್ರತಿಗಳನ್ನು ಪರಿಚಯಿಸುವಾಗ ಹೀಗೆ ಯಾದಿ ಕೊಡದೆ 'ಕಟ್ಟಿನಲ್ಲಿರುವ ಪ್ರತಿಗಳು' ಕಾಲಂ ಮುಂದೆ 'ನೋಡಿ : ಕ್ರಮಾಂಕ........' ಎಂದು ಪ್ರಥಮ ಪ್ರತಿಯ ಕ್ರಮಾಂಕ ಸೂಚಿಸಿದರೆ ಸಾಕು. ಇಷ್ಟು ಅಂಶಗಳು ಕಾರ್ಡಿನಲ್ಲಿ ಅಡಕಗೊಳ್ಳಬೇಕು. ಹಸ್ತಪ್ರತಿ ಕೊಟ್ಟವರು–ತಂದವರು, ತಂದ ದಿನಾಂಕಗಳು, ಸ್ವೀಕೃತಿ ಪುಸ್ತಕಗಳಲ್ಲಿ ದಾಖಲಾಗಿರುವುದರಿಂದ ಇಲ್ಲಿ ಅವುಗಳನ್ನು ಕೈಬಿಡಬೇಕು. ಅನ್ಯಭಾಷೆಯ ಹಸ್ತಪ್ರತಿಗಳನ್ನು ಹೊರಗಿಟ್ಟು ಕನ್ನಡ ಭಾಷೆಯ ಹಸ್ತಪ್ರತಿಗಳನ್ನೇ ಕುರಿತು ಸೂಚಿಯನ್ನು ರಚಿಸುತ್ತಿರುವುದರಿಂದ ಭಾಷೆಯೆಂಬ ಶೀರ್ಷಿಕೆ ಇಲ್ಲಿ ಅನವಶ್ಯ. ಮುದ್ರಿತ ಗ್ರಂಥಗಳಿಗಾಗಿ ೩''×೫'' ಆಕಾರದ ಕಾರ್ಡುಗಳನ್ನು ಬಳಸುತ್ತೇವೆ. ಹಸ್ತಪ್ರತಿ ಸಂದರ್ಭದಲ್ಲಿ ವಿವರಗಳ ಸಂಖ್ಯೆ ಬಹಳವಿರುವುದರಿಂದ ೪''×೬'' ಕಾರ್ಡುಗಳನ್ನು ಬಳಸಬಹುದಾಗಿದೆ.

ಪ್ರತಿಯೊಂದು ಕಾರ್ಡನ್ನು ಮೂರು ಪ್ರತಿಗಳಾಗಿ ಮುದ್ರಿಸಬೇಕು. ಇವುಗಳಲ್ಲಿ ಒಂದು ಕಾರ್ಡನ್ನು ಶೀರ್ಷಿಕೆ (Title) ವರ್ಗೀಕರಣಕ್ಕೆ ಸೇರಿಸುತ್ತಿದ್ದರೆ ಅಲ್ಲಿಯ ಕೃತಿ

ಶೀರ್ಷಿಕೆಯ ಕೆಳಗೆ ಗೆರೆ ಎಳೆಯಬೇಕು. ಇನ್ನೊಂದು ಕಾರ್ಡನ್ನು ಲೇಖಕ (Author) ವರ್ಗೀಕರಣಕ್ಕೆ ಸೇರಿಸುತ್ತಿದ್ದರೆ ಅಲ್ಲಿಯ ಲೇಖಕನ ಹೆಸರಿನ ಕೆಳಗೆ ಗೆರೆ ಎಳೆಯಬೇಕು. ಇನ್ನೊಂದು ಕಾರ್ಡನ್ನು ವಿಷಯ (Subject) ವರ್ಗೀಕರಣಕ್ಕೆ ಸೇರಿಸುತ್ತಿದ್ದರೆ ಅಲ್ಲಿಯ ವಿಷಯದ ಕೆಳೆಗ ಗೆರೆ ಎಳೆಯಬೇಕು. ಈ ಉದ್ದೇಶದ ಸಫಲತೆಗಾಗಿಯೇ ಕಾರ್ಡಿನಲ್ಲಿ ಶೀರ್ಷಿಕೆ, ಲೇಖಕ, ವಿಷಯಗಳಿಗೆ ಮೊದಲ ಸಾಲಿನಲ್ಲಿ ಸ್ಥಳಾವಕಾಶ ಕಲ್ಪಿಸಿ ಕೊಡಲಾಗಿದೆ.

ಹೀಗೆ ಸೂಚೀಕಾರ್ಡುಗಳನ್ನು ಸಿದ್ಧಪಡಿಸಿ, ನೋಂದಣಿ ಪುಸ್ತಕದಲ್ಲಿ ವಿವರ ಗಳನ್ನು ಬರೆದುಕೊಂಡು, ಕಟ್ಟುಗಳಿಗೆ ನಂಬರು-ಹೆಸರುಗಳನ್ನು ಅಂಟಿಸಿ, ಅವುಗಳನ್ನು ಸಂರಕ್ಷಣವಿಭಾಗಕ್ಕೆ ಕಳಿಸಬೇಕು. ಒಟ್ಟಿನಲ್ಲಿ ಸೂಚಿಗಳು ರೈಲು ವೇಳಾಪತ್ರಿಕೆಯಂತೆ ಹಸ್ತಪ್ರತಿ ಅಭ್ಯಾಸಿಗಳಿಗೆ ನಿರ್ದಿಷ್ಟ ಮಾರ್ಗದರ್ಶನ ನೀಡಬೇಕು. ಈ ರೀತಿ ಕಾರ್ಡಿನ ಮೇಲೆ ಅಡಕಗೊಂಡುದನ್ನೇ ಗ್ರಂಥರೂಪದಲ್ಲಿ ಪ್ರಕಟಿಸಬಹುದಾಗಿದೆ.

ಇವುಗಳಿಗಿಂತ ತುಂಬ ಭಿನ್ನವಾದುದು Catalogus Catalogorum. ಇದರ ಸಂಪಾದಿಪದ 'ಸಮಗ್ರಸೂಚಿ'. ಈ ಸೂಚಿಯ ಜನಕ ಜರ್ಮನ್ ವಿದ್ವಾಂಸ ಆಫ್ರೆಕ್ಟ್. ಬೇರೆ ಬೇರೆ ಹಸ್ತಪ್ರತಿಭಾಂಡಾರಗಳ ಸೂಚಿಗಳಲ್ಲಿಯ ಮಾಹಿತಿಯನ್ನು ಕ್ರೋಢೀಕರಿಸಿ Catalogus Catalogorum ಹೆಸರಿನ ಸಂಸ್ಕೃತ ಹಸ್ತಪ್ರತಿಗಳ ಸಮಗ್ರ ಸೂಚಿ ಯನ್ನು ಈತ ಸಿದ್ಧಪಡಿಸಿದ (೧೮೯೧). ಇದರ ಮುಂದುವರಿಕೆಯಾಗಿ New Catalogus Catalogorum ಹೆಸರಿನ ಎಂಟು ಸಂಪುಟಗಳು ಈಗ ಪ್ರಕಟವಾಗಿವೆ. ಡಾ. ಎಚ್. ಡಿ. ವೇಲಂಕರ ಅವರು ಜೈನ ಹಸ್ತಪ್ರತಿಗಳಿಗೆ 'ಜಿನರತ್ನಕೋಶ' ಹೆಸರಿನಲ್ಲಿ ಒಂದು ಸಮಗ್ರಸೂಚಿಯನ್ನು ರಚಿಸಿ ಪ್ರಕಟಿಸಿದ್ದಾರೆ.

ಸಮಗ್ರಸೂಚಿಯೆನ್ನುವುದು ಕೃತಿಶೀರ್ಷಿಕೆಯ ಸೂಚಿಯಾಗಿದ್ದು, ಇಲ್ಲಿ ಎಲ್ಲ ಶೀರ್ಷಿಕೆಗಳನ್ನು ಅಕಾರಾದಿಯಲ್ಲಿ ಹೊಂದಿಸಲಾಗಿರುತ್ತದೆ. ಒಂದು ಕೃತಿಯ ಶೀರ್ಷಿಕೆ ಬರೆದು, ಅದರ ಪ್ರತಿಗಳು ಎಲ್ಲೆಲ್ಲಿ ದೊರೆಯುತ್ತವೆಯೆಂಬ ವಿವರಗಳನ್ನು ಸೂಕ್ತ ಸಂಕೇತಗಳೊಂದಿಗೆ ಕೊಡಲಾಗಿರುತ್ತದೆ. ಲಭ್ಯಕೃತಿಗಳೊಂದಿಗೆ ಅಲಭ್ಯಕೃತಿಗಳ ಉಲ್ಲೇಖವೂ ಇಲ್ಲಿ ಸೇರಿಕೊಂಡಿರುತ್ತದೆ. ಸೂಚಿಯಿಂದ ವಿವರವನ್ನು ಸ್ವೀಕರಿಸಿದ್ದರೆ ಆ ಸೂಚಿಯನ್ನು ಸಂಕೇತದೊಂದಿಗೆ ದಾಖಲಿಸಲಾಗಿರುತ್ತದೆ. ಕೃತಿ ಪ್ರಕಟವಾಗಿದ್ದರೆ ಆ ಪ್ರಕಟನೆಯ ವಿವರಗಳನ್ನು, ಪ್ರಕಟವಾಗದೆ ಪರಿಚಯಾತ್ಮಕ ಲೇಖನ ಬೆಳಕುಕಂಡಿದ್ದರೆ ಆ ಲೇಖನದ ವಿವರಗಳನ್ನು ಕೊಡಲಾಗುತ್ತದೆ. ಕೃತಿ ಬೇರೆ ಭಾಷೆಯಿಂದ ಅನುವಾದ ಗೊಂಡಿದ್ದರೆ, ಬೇರೆ ಭಾಷೆಗಳಿಗೆ ಅನುವಾದಗೊಂಡಿದ್ದರೆ ಆ ಸೂಚನೆಯನ್ನೂ ಇದು ಒಳಗೊಂಡಿರುತ್ತದೆ. ಕವಿಯ ಬಗ್ಗೆ ಗ್ರಂಥ ಮತ್ತು ಲೇಖನರೂಪದ ವಿವರಗಳಿದ್ದಲ್ಲಿ ಅವುಗಳನ್ನೂ ಸೂಚಿಸಲಾಗುತ್ತದೆ. ಹೀಗೆ ಅಂಗೈ ಮೇಲೆ ಒಂದು ಕೃತಿಯ ಸಮಸ್ತ ಪ್ರತಿಗಳ ಬಗ್ಗೆ ತಿಳುವಳಿಕೆ ಮಾಡಿಕೊಡುವುದೇ ಈ ಸಮಗ್ರ ಸೂಚಿಯ

ಮುಖ್ಯ ಗುರಿಯಾಗಿರುತ್ತದೆ. ಈ ಗುರಿಯನ್ನು ಮುಟ್ಟಬೇಕಾದರೆ ಒಂದು ಭಾಷೆಯಲ್ಲಿ ಸಿಗುವ ಎಲ್ಲ ಹಸ್ತಪ್ರತಿಗಳ ವಿವರಣಾತ್ಮಕ ಸೂಚಿಗಳು ಮೊದಲು ಪ್ರಕಟವಾಗ ಬೇಕಾಗುತ್ತದೆ.

**ವರ್ಗೀಕರಣ :** ವರ್ಗೀಕರಣವು ಅನೇಕ ಬಗೆಯಾಗಿದೆ. ಹಸ್ತಪ್ರತಿಗಳಿಗೆ ಬಳಸಿದ ವಸ್ತುಗಳನ್ನಾಧರಿಸಿ ತಾಳೆಪ್ರತಿ, ಕಾಗದಪ್ರತಿ ಎಂದು ಸಾಮಾನ್ಯವಾಗಿ ವರ್ಗೀಕರಿಸುತ್ತಾರೆ. ಆದರೆ ಕಾಗದ ಪ್ರತಿಯನ್ನು ಸ್ವದೇಶಿ ಕಾಗದಪ್ರತಿ (ಕೋರಿಕಾಗದ ಪ್ರತಿ) ವಿದೇಶಿ ಕಾಗದಪ್ರತಿ ಎಂದು ವರ್ಗೀಕರಿಸದಿದ್ದರೆ ಕೆಲವೊಮ್ಮೆ ಪ್ರತಿಯ ಕಾಲ ನಿರ್ಣಯಕ್ಕೆ ತೊಂದರೆಯಾಗುವ ಸಂಭವವುಂಟು. ಉದಾ: ಕರ್ನಾಟಕದಲ್ಲಿ ಲಭ್ಯವಾದ ಪ್ರಾಚೀನತಮ ಕಾಗದಪ್ರತಿಯೆಂದರೆ ಕ್ರಿ. ಶ. ೧೫೨೦ರಲ್ಲಿ ಹುಟ್ಟಿದ "ಏಕೋತ್ತರ ಶತಸ್ಥಲೀ ಟೀಕು" ಎಂದು ಶ್ರೀ ಎಚ್. ದೇವೀರಪ್ಪ ಹೇಳುತ್ತಾರೆ. ಆದರೆ ಇದಕ್ಕೆ ಬಳಸಿದುದು ವಿದೇಶೀ ಕಾಗದವಾದುದರಿಂದ ಅವರ ಅಭಿಪ್ರಾಯ ಬಿದ್ದುಹೋಗುತ್ತದೆ.[೫] ಆದುದರಿಂದ ಹಸ್ತಪ್ರತಿಗಳಿಗೆ ಬಳಸಿದ ವಸ್ತುಗಳನ್ನು ಇನ್ನು ಮುಂದೆ ತಾಳೆಪ್ರತಿ, ಸ್ವದೇಶಿಕಾಗದಪ್ರತಿ ಮತ್ತು ವಿದೇಶಿ ಕಾಗದಪ್ರತಿ ಎಂದು ಹೆಸರಿಸುವುದೇ ಸರಿಯಾದ ಕ್ರಮವಾಗಿದೆ.

ಇದನ್ನು ಬಿಟ್ಟರೆ ಧರ್ಮವನ್ನಾಧರಿಸಿ ಜೈನ, ವೀರಶೈವ, ಬ್ರಾಹ್ಮಣ, ಇತರ ವೆಂದೂ, ಭಾಷೆಯನ್ನಾಧರಿಸಿ ಕನ್ನಡ, ಸಂಸ್ಕೃತ, ಇತರವೆಂದೂ, ಪ್ರಕಾರವನ್ನಾಧರಿಸಿ ಗದ್ಯ, ಪದ್ಯ, ಮಿಶ್ರವೆಂದೂ ಹಸ್ತಪ್ರತಿಗಳನ್ನು ವರ್ಗೀಕರಿಸಬಹುದು. ಆದರೆ ಇವು ಗಳಿಗಿಂತ ಕಾವ್ಯ, ಪುರಾಣ, ಇತಿಹಾಸ, ಜನಹಿತಶಾಸ್ತ್ರ, ಕಾವ್ಯಶಾಸ್ತ್ರ, ತತ್ವಶಾಸ್ತ್ರ ಮತ್ತು ಇತರವೆಂದು ವಿಷಯದೃಷ್ಟಿಯಿಂದ ವರ್ಗೀಕರಿಸುವುದೇ ಹೆಚ್ಚು ಪ್ರಯೋಜಕ. ವರ್ಗೀಕರಣವೆಂದರೆ ವಿಷಯ ವರ್ಗೀಕರಣ (Subject Catalogue) ವೆಂದೇ ಪ್ರಸಿದ್ಧಿ ಪಡೆದುದು, ಈ ಕಾರಣಕ್ಕಾಗಿ. ನಿತ್ಯ ಹುಟ್ಟುವ ಗ್ರಂಥಗಳಲ್ಲವಾದುದರಿಂದ ಹಸ್ತಪ್ರತಿಗಳ ಸಂಖ್ಯೆಯೂ ಪರಿಮಿತ; ಇಂದಿನ ಜ್ಞಾನಕ್ಷೇತ್ರಗಳೊಂದಿಗೆ ಹೋಲಿಸಿ ದರೆ ನಮ್ಮ ಪ್ರಾಚೀನರ ಜ್ಞಾನದ ಹರಹು-ಪ್ರಕಾರಗಳೂ ಪರಿಮಿತ. ಆದುದರಿಂದ ಮುದ್ರಿತ ಗ್ರಂಥಾಲಯ ಶಾಸ್ತ್ರದೊಂದಿಗೆ ಹೋಲಿಸಿದರೆ ಹಸ್ತಪ್ರತಿಶಾಸ್ತ್ರದಲ್ಲಿ ಮೇಲೆ ಹೇಳಿದಂತೆ ವರ್ಗಗಳು ಕಡಿಮೆ. ಈ ಕಾರಣದಿಂದಾಗಿ ಇಲ್ಲಿ ವರ್ಗೀಕರಣಕ್ರಿಯೆ ಸರಳ. ಬಹಳೆಂದರೆ ಮೇಲೆ ಸೂಚಿಸಿದ ಕಾವ್ಯ, ಪುರಾಣ, ಇತಿಹಾಸ, ಜನಹಿತಶಾಸ್ತ್ರ, ಕಾವ್ಯ ಶಾಸ್ತ್ರ, ತತ್ವಶಾಸ್ತ್ರ ಮತ್ತು ಇತರವೆಂಬ ವಿಷಯವರ್ಗೀಕರಣದಲ್ಲಿ ಮತ್ತೆ ಕೆಲವು ಉಪವರ್ಗಗಳನ್ನು ಮಾಡಬಹುದಾದರೂ ಇದು ಅವಶ್ಯವಿಲ್ಲವೆಂದೇ ಹೇಳಬೇಕು. ಹೀಗೆ ವರ್ಗಗಳ ಸಂಖ್ಯೆ ಪರಿಮಿತವಾಗಿರುವುದರಿಂದ ಮುದ್ರಿತಗ್ರಂಥಾಲಯ ಶಾಸ್ತ್ರ ದಂತೆ ಇವುಗಳನ್ನು ಸಂಕೇತಗಳಿಂದ ಸೂಚಿಸುವುದೂ ಅನವಶ್ಯವೆನಿಸುತ್ತದೆ.

---

೫. ಹಸ್ತಪ್ರತಿಶಾಸ್ತ್ರ (ಬಿ. ಎಂ. ಶ್ರೀ. ಪ್ರತಿಷ್ಠಾನ). ಪುಟ-೬೧

ಮೂಲತಃ ವರ್ಗೀಕರಣವೆಂಬುದು ಕಾರ್ಡು, ಕಪಾಟು ಮತ್ತು ಮುದ್ರಿತ ಸೂಚಿಗ್ರಂಥಗಳಲ್ಲಿ ಜರುಗುವ ಕ್ರಿಯೆಯಾಗಿದೆ. ಮುದ್ರಿತ ಪ್ರತಿ (Printed Book) ಗಳ ವರ್ಗೀಕರಣವನ್ನು ಕಾರ್ಡು, ಕಪಾಟು, ಸೂಚೀಗ್ರಂಥಗಳಲ್ಲಿ ಅನುಷ್ಠಾನಕ್ಕೆ ತರಬಹುದು. ಆದರೆ ಹಸ್ತಪ್ರತಿಗಳ ವರ್ಗೀಕರಣವನ್ನು ಕಾರ್ಡು ಸೂಚೀಗ್ರಂಥಗಳಲ್ಲಿ ಅಳವಡಿಸಬಹುದೇ ಹೊರತು, ಕಪಾಟುಗಳಲ್ಲಿ ಅಳವಡಿಸುವುದು ಸಾಧ್ಯವಾಗುವುದಿಲ್ಲ. ಏಕೆಂದರೆ ಒಂದು ಕಟ್ಟಿನಲ್ಲಿ ಒಂದು ಕಾವ್ಯ, ಒಂದು ಶಾಸ್ತ್ರ, ಒಂದು ಧಾರ್ಮಿಕ ಕೃತಿ ಇರಬಹುದು, ಇಲ್ಲವೆ ಒಂದು ಕನ್ನಡ ಕೃತಿ, ಒಂದು ಸಂಸ್ಕೃತ ಕೃತಿ ಇರಬಹುದು. ಇಂತಹ ಸಂಯುಕ್ತ ಕಟ್ಟುಗಳೇ ಅಧಿಕ ಸಂಖ್ಯೆಯಲ್ಲಿ ಸಿಗುವುದರಿಂದ ಅವುಗಳನ್ನು ಬೇರ್ಪಡಿಸಿ ಕಪಾಟಿನಲ್ಲಿ ಬೇರೆ ಬೇರೆ ಕಡೆ ಇಡಲು ಸಾಧ್ಯವಾಗುವುದಿಲ್ಲ. ಕಟ್ಟುಗಳು ಬಂದಬಂದಂತೆ ಕಪಾಟಿನಲ್ಲಿ ಒಂದರ ಬಳಿಕ ಒಂದನ್ನು ಕ್ರಮವಾಗಿ ಜೋಡಿಸುತ್ತ ಹೋಗುವುದೇ ಸರಿಯಾದ ಕ್ರಮವಾಗಿದೆ. ಬಹಳೆಂದರೆ ಒಂದು ಹಸ್ತಪ್ರತಿ ಇಡಿಯಾಗಿ ಕನ್ನಡೇತರ ಭಾಷಿಕವಾಗಿದ್ದರೆ ಅಂಥವುಗಳನ್ನು ಬೇರೆ ಕಪಾಟಿನಲ್ಲಿ ಜೋಡಿಸುತ್ತ ಹೋಗಬಹುದಾಗಿದೆ. ಒಂದೇ ಕಪಾಟಿನಲ್ಲಿ ಎಲ್ಲ ಭಾಷೆಯ ಕೃತಿಗಳನ್ನು ಮಿಶ್ರಮಾಡಿ ಇಟ್ಟರೆ ಸೂಚೀಕರಣ ಸಂದರ್ಭದಲ್ಲಿ ಕನ್ನಡ ಪ್ರತಿಗಳ ಜೊತೆ ಕನ್ನಡೇತರ ಪ್ರತಿಗಳು ಸೇರಿಕೊಳ್ಳುತ್ತವೆ. ಒಂದುವೇಳೆ ಆಗ ಕನ್ನಡೇತರ ಕೃತಿಗಳನ್ನು ಬಿಟ್ಟರೆ, ಅಷ್ಟು ನಂಬರುಗಳು ಹೊರಗುಳಿದು, ಸೂಚಿಯಲ್ಲಿಯ ದಾಖಲು ಕ್ರಮಸಂಖ್ಯೆ ತುಂಡು ತುಂಡಾಗುತ್ತದೆ. ಒಟ್ಟಿನಲ್ಲಿ ಹಸ್ತಪ್ರತಿಗಳಿಗೆ ಸಂಬಂಧಪಟ್ಟಂತೆ ವರ್ಗೀಕರಣ ಕ್ರಿಯೆ ಕಪಾಟಿನಲ್ಲಿ ಸಾಧ್ಯವಿಲ್ಲ. ಸೂಚೀಗ್ರಂಥ ಮತ್ತು ಕಾರ್ಡುಗಳಲ್ಲಿ ಮಾತ್ರಸಾಧ್ಯವೆಂದು ಹೇಳಬೇಕು.

ಮೂರು ಪ್ರತಿಗಳಾಗಿ ಮುದ್ರಿಸಿದ ಸೂಚೀಕೃತ ಕಾರ್ಡುಗಳನ್ನು ವಿಷಯನಿಷ್ಠ, ಲೇಖಕನಿಷ್ಠ, ಶೀರ್ಷಿಕೆನಿಷ್ಠ–ಹೀಗೆ ಮೂರು ಬಗೆಯಾಗಿ ವರ್ಗೀಕರಿಸಿ, ಅಕಾರಾದಿಯಲ್ಲಿ ಹೊಂದಿಸಿ, ಇವುಗಳಿಗಾಗಿ ಹಸ್ತಪ್ರತಿ ಭಾಂಡಾರದಲ್ಲಿ ಮೂರು ಪ್ರತ್ಯೇಕ ಕ್ಯಾಬಿನೆಟ್‌ಗಳನ್ನು ಸ್ಥಾಪಿಸಬೇಕು. ಇದರಿಂದ ಅಭ್ಯಾಸಿಯ ಬೇಡಿಕೆ, ಸಿಬ್ಬಂದಿಯ ಪೂರೈಕೆಗೆ ಅನುಕೂಲವಾಗುತ್ತದೆ. ಹೀಗಿದ್ದೂ ಹಸ್ತಪ್ರತಿಭಾಂಡಾರದಲ್ಲಿ ಶೀರ್ಷಿಕೆ ವರ್ಗೀಕರಣ ಹೆಚ್ಚು ಪ್ರಯೋಜಕ, ವಿಷಯ ವರ್ಗೀಕರಣ ಕಡಿಮೆ ಪ್ರಯೋಜಕ, ಲೇಖಕ ವರ್ಗೀಕರಣ ಇನ್ನೂ ಕಡಿಮೆ ಪ್ರಯೋಜಕವೆಂದೇ ಹೇಳಬಹುದು.

* * * * *

ಮೇಲೆ ಹೇಳಿದ 'ಸೂಚಿ' ಮತ್ತು 'ವಿವರಣಾತ್ಮಕ ಸೂಚಿ'ಗಳಲ್ಲಿ 'ಸೂಚಿ' ಎನ್ನುವುದು ಸಾಮಾನ್ಯಸ್ವರೂಪದ್ದಾಗಿದ್ದು, 'ವಿವರಣಾತ್ಮಕ ಸೂಚಿ'ಯೇ ಹೆಚ್ಚು ಪ್ರಯೋಜಕವೆನಿಸುತ್ತದೆ. ಇದನ್ನು ಶೀರ್ಷಿಕೆನಿಷ್ಠ, ವಿಷಯನಿಷ್ಠ ಮತ್ತು ಲೇಖಕನಿಷ್ಠ ದೃಷ್ಟಿಯಿಂದ ರಚಿಸಬಹುದಾಗಿದೆ.

ಮೈಸೂರು ಕನ್ನಡ ಅಧ್ಯಯನಸಂಸ್ಥೆ ಶೀರ್ಷಿಕೆನಿಷ್ಠ ವಿವರಣಾತ್ಮಕ ಸೂಚಿಗಳನ್ನು, ಮದ್ರಾಸ ಪ್ರಾಚ್ಯಹಸ್ತಪ್ರತಿ ಭಂಡಾರ ವಿಷಯವರ್ಗೀಕೃತ ಶೀರ್ಷಿಕೆನಿಷ್ಠ

ವಿವರಣಾತ್ಮಕಸೂಚಿಗಳನ್ನು ರಚಿಸಿವೆ. ಈ ಎರಡೂ ಬಗೆಗಳಲ್ಲಿ ವಿಷಯ ವರ್ಗೀಕೃತ ಶೀರ್ಷಿಕೆನಿಷ್ಠ ವಿವರಣಾತ್ಮಕಸೂಚಿ ಸ್ವಲ್ಪ ಗೊಂದಲವನ್ನುಂಟು ಮಾಡುತ್ತದೆ. ಏಕೆಂದರೆ ಯಾವುದೇ ಕೃತಿ ಧಾರ್ಮಿಕ ವರ್ಗದ್ದೋ, ಧಾರ್ಮಿಕದಲ್ಲಿ ಪುರಾಣ ವರ್ಗದ್ದೊ ಚರಿತ್ರೆ ವರ್ಗದ್ದೋ ಎಂದು ಬಿಡಿಸಿ ಹೇಳಲಾರದಂಥ ತೊಡಕುಗಳಿರುತ್ತವೆ. ಇಂಥ ಸಂದರ್ಭದಲ್ಲಿ ಸೂಚೀ ಸಂಪಾದಕ ಗ್ರಹಿಸಿದ ವರ್ಗವೇ ಬೇರೆ, ಓದುಗ ಗ್ರಹಿಸುವ ವರ್ಗವೇ ಬೇರೆಯಾದರೆ ಕೃತಿಗಳನ್ನು ಸೂಚಿ ಸಂಪುಟದಲ್ಲಿ ಹುಡುಕುವುದು ಕಷ್ಟವಾಗುತ್ತದೆ. ಹೀಗಾಗಿ ಶೀರ್ಷಿಕೆನಿಷ್ಠ ವಿವರಣಾತ್ಮಕ ಸೂಚಿಯೇ ಹೆಚ್ಚು ಪ್ರಯೋಜಕವೆನಿಸುತ್ತದೆ. ಆದರೆ ಇಲ್ಲಿ ಕೆಲವು ಸೂಚನೆಗಳು ಅವಶ್ಯ.

೧. ಮೈಸೂರು ಪ್ರಾಚ್ಯವಿದ್ಯಾಸಂಶೋಧನಾಲಯ ಮತ್ತು ಕನ್ನಡ ಅಧ್ಯಯನ ಸಂಸ್ಥೆಗಳು ಕ್ರಮವಾಗಿ ೧೯೫೪ರ ವರೆಗೆ ಸಂಗ್ರಹಿಸಿದ ಹಸ್ತಪ್ರತಿಗಳಿಗಾಗಿ ನಾಲ್ಕು, ೧೯೫೫ ರಿಂದ ೭೮ರ ವರೆಗೆ ಸಂಗ್ರಹಿಸಿದ ಹಸ್ತಪ್ರತಿಗಳಿಗಾಗಿ ಐದು, ಶೀರ್ಷಿಕೆನಿಷ್ಠ ವಿವರಣಾತ್ಮಕ ಸೂಚಿಸಂಪುಟಗಳನ್ನು ಸಿದ್ಧಪಡಿಸಿ, ಪ್ರಕಟಿಸಿವೆ. ಈ ರೀತಿ ಮಾಡದೆ ೧–೧೦೦ ಕಟ್ಟು, ೧೦೧–೨೦೦ ಕಟ್ಟು –ಹೀಗೆ ೧೦೦ ಕಟ್ಟುಗಳಿಗೆ ಒಂದರಂತೆ ಸೂಚೀ ಸಂಪುಟಗಳನ್ನು ರೂಪಿಸಿಕೊಳ್ಳುವುದು ಸೂಕ್ತ. ಈ ನೂರು ಕಟ್ಟುಗಳಲ್ಲಿ ಅಡಕವಾದ ಕೃತಿಗಳನ್ನು ಅಕಾರಾದಿಯಾಗಿ ಹೊಂದಿಸಿಕೊಂಡು ಇಲ್ಲಿ ಸೂಚಿಗಳನ್ನು ರಚಿಸಬೇಕಾಗುತ್ತದೆ. ಹಸ್ತಪ್ರತಿಗಳು ಭಂಡಾರಕ್ಕೆ ಆಕರಣೆಯಾಗುತ್ತ ಹೋದಂತೆ ಈ ಸೂಚೀ ಸಂಪುಟಗಳನ್ನು ಕ್ರಮವಾಗಿ ಬೆಳೆಸಲು ಇದರಿಂದ ಅನುಕೂಲ ವಾಗುತ್ತದೆ. ಪ್ರತಿಯೊಂದು ಸೂಚೀಸಂಪುಟದ ಕೊನೆಗೆ ವಿಷಯವರ್ಗೀಕೃತ ಅನು ಬಂಧ, ಲೇಖಕ ವರ್ಗೀಕೃತ ಅನುಬಂಧಗಳನ್ನು ಜೋಡಿಸಬೇಕು. ಇದರಿಂದ ಒಂದೇ ಸಂಪುಟದಲ್ಲಿ ಮೂರೂ ಬಗೆಯ (ಶೀರ್ಷಿಕೆ, ವಿಷಯ, ಲೇಖಕ) ಸೂಚಿಗಳು ಅಳವಟ್ಟಂತಾಗುತ್ತದೆ.

೨. ಹತ್ತು 'ವಿವರಣಾತ್ಮಕಸೂಚಿ' ಸಂಪುಟಗಳಿಗೆ ಒಂದು 'ಸಂಯುಕ್ತಸೂಚಿ' ಸಂಪುಟ ರೂಪಿಸಬೇಕು. ಇದು ಶೀರ್ಷಿಕೆಸೂಚಿ, ವಿಷಯಸೂಚಿ, ಲೇಖಕಸೂಚಿ ಗಳನ್ನೊಳಗೊಂಡ ಸಂಯುಕ್ತ ಸಂಪುಟವಾಗಿರಬೇಕು. 'ಮಹಾದರ್ಶಕಸೂಚಿ' ಎಂದು ಇದನ್ನು ಕರೆಯಬಹುದಾಗಿದೆ. ಕಾಲಕಾಲಕ್ಕೆ ಈ ಮಾಲೆಯನ್ನು ಸಂಪುಟ–೧, ಸಂಪುಟ–೨, ಹೀಗೆ ಬೆಳೆಸುತ್ತ ಹೋಗಬೇಕು.

ಇವೇ ಹತ್ತು 'ವಿವರಣಾತ್ಮಕಸೂಚಿ' ಸಂಪುಟಗಳಿಗೆ ಒಂದರಂತೆ 'ಸಮಗ್ರಸೂಚಿ' (Catalogus Catalogorum) ಯನ್ನು ಸಿದ್ಧಪಡಿಸಬೇಕು. ಇದನ್ನು ಸಂಪುಟ–೧, ಸಂಪುಟ–೨ ಎಂದು ಬೆಳೆಸುತ್ತ ಹೋಗಬಹುದಾಗಿದೆ. ಈ ಕ್ರಮದಲ್ಲಿ ಮುನ್ನಡೆದರೆ ಹಸ್ತಪ್ರತಿಸೂಚಿಗಳಿಗೆ ಒಂದು ಕ್ರಮಬದ್ಧತೆ ಪ್ರಾಪ್ತವಾಗುತ್ತದೆ.

### ೩. ಸಂರಕ್ಷಣ ವಿಭಾಗ :

ಗ್ರಂಥಾಲಯದ ಹೃದಯಸ್ಥಾನವಿದು. ಯಾವ ವಸ್ತುವಿಗಾಗಿ ಇಷ್ಟೆಲ್ಲ ಪ್ರಯತ್ನ, ವ್ಯವಸ್ಥೆ ಮಾಡಲಾಗುತ್ತಿದೆಯೋ ಅದರ ರಕ್ಷಣಾ ನೆಲೆಯಿದು. ಬ್ಯಾಂಕಿನಲ್ಲಿಯ ದ್ರವ್ಯಭಾಂಡಾರದಂಥ ಮಹತ್ವದ ವಿಭಾಗವಿದು. ಯಾವಾಗಲೂ ಬೀಗ ಮುದ್ರೆಯಲ್ಲಿದ್ದು, ಅಧಿಕೃತ ಇಬ್ಬರು ಮೂವರು ಮಾತ್ರ ಪ್ರವೇಶಮಾಡುವ ಕೇಂದ್ರ ಸ್ಥಾನವಿದು. ತುಂಬ ಮಹತ್ವದ ಇದನ್ನು ರಹಸ್ಯಸ್ಥಾನ, ಪವಿತ್ರಸ್ಥಾನದಂತೆ ಭಾವಿಸಬೇಕಾಗುತ್ತದೆ.

ಕನ್ನಡ, ಕನ್ನಡೇತರ ಹಸ್ತಪ್ರತಿಗಳನ್ನು ಇಡಲು ಎರಡು ಪ್ರತ್ಯೇಕ ವಿಭಾಗಗಳು ಇಲ್ಲಿ ಇರಬೇಕು. ಸೂಕ್ತ ಗಾಳಿ – ಬೆಳಕುಗಳ ವ್ಯವಸ್ಥೆಯುಳ್ಳ ಈ ವಿಭಾಗದಲ್ಲಿರುವ ಕಪಾಟಿನಲ್ಲಿ ಪ್ರತಿಗಳನ್ನು ಕ್ರಮವಾಗಿ ಹೊಂದಿಸಬೇಕು. ಕೆಲವೆಡೆ ಗಾಜಿನ ಬಾಗಿಲುಗಳುಳ್ಳ ಕಪಾಟು ಬಳಸುವದಾದರೂ ಹವೆಯಾಡದೆ ಪ್ರತಿಗಳು ಕೆಡುವ ಕಾರಣ ಬಾಗಿಲುಗಳಿಲ್ಲದ ಕಪಾಟುಗಳನ್ನೇ ಉಪಯೋಗಿಸಬೇಕೆಂದು ತೋರುತ್ತದೆ.

ಹಸ್ತಪ್ರತಿಗಳು ಬದುಕಲು ಅವಶ್ಯವಿರುವ ಹವೆಯನ್ನು ಇಲ್ಲಿ ನಿರ್ಮಾಣಮಾಡಬೇಕು. ಅಂದರೆ ಹವಾನಿಯಂತ್ರಣ ಕೊಠಡಿಯನ್ನು ರೂಪಿಸಬೇಕು. ಇದು ಸಾಧ್ಯವಿಲ್ಲದ ಪ್ರಸಂಗದಲ್ಲಿ ಚಳಿಗಾಲ, ಮಳೆಗಾಲ ಸಂದರ್ಭಗಳಲ್ಲಿ ವಿದ್ಯುತ್‌ಶಾಖದಿಂದ ಹವೆಯನ್ನು ನಿಯಂತ್ರಿಸಬೇಕು. ಇಷ್ಟೆಲ್ಲ ಕಾಳಜಿ ವಹಿಸಿದರೂ ಧೂಳು, ಬೂಷ್ಟ ಆವರಿಸುವ ಸಂಭವವಿರುತ್ತದೆ. ಕಾರಣ ಆಗಾಗ ಹಸ್ತಪ್ರತಿಗಳನ್ನು, ಕಪಾಟುಗಳನ್ನು, ಒಟ್ಟು ಪರಿಸರವನ್ನು ಸ್ವಚ್ಛಗೊಳಿಸುತ್ತ ಹೋಗಬೇಕು. ಹಸ್ತಪ್ರತಿಯನ್ನು ನಾಶ ಮಾಡುವ ಇಲಿ ಮೊದಲಾದುವು ಪ್ರವೇಶಿಸದಂತೆ ನೋಡಿಕೊಳ್ಳಬೇಕೆಂದು ಮತ್ತೆ ಹೇಳಬೇಕಿಲ್ಲ.

ಅನ್ಯ ಸಂಸ್ಥೆ ಮತ್ತು ವ್ಯಕ್ತಿಗಳ ವಶದಲ್ಲಿರುವ ಅಪೂರ್ವ ಕೃತಿಗಳ ನಕಲು ಪ್ರತಿಗಳನ್ನು ಸಂರಕ್ಷಿಸುವುದೂ ಹಸ್ತಪ್ರತಿಕ್ಷೇತ್ರದ ಬಹುಮುಖ್ಯ ಅಂಶವಾಗಿದೆ. ಈ ಹಿಂದೆ ಧಾರವಾಡದ ಕನ್ನಡ ಸಂಶೋಧನ ಸಂಸ್ಥೆ, ಮೈಸೂರಿನ ಪ್ರಾಚ್ಯವಿದ್ಯಾಸಂಸ್ಥೆಗಳಲ್ಲಿ ಹೀಗೆ ಸಂಗ್ರಹಿಸಿದ ನೂರಾರು ವಹಿಗಳಿರುವುದನ್ನು ನೆನೆಯಬಹುದು. ಇಂಥ ಪ್ರತಿಗಳನ್ನೂ ಇಲ್ಲಿಯೇ ರಕ್ಷಿಸಬೇಕಾಗುತ್ತದೆ.

ಇತ್ತೀಚೆ ಮೈಕ್ರೋಫಿಲ್ಮ್‌ಪ್ರತಿ, ಫೋಟೋಸ್ಟ್ಯಾಟ್‌ಪ್ರತಿ, ಝೆರಾಕ್ಸ್‌ಪ್ರತಿ, ಬೆರಳಚ್ಚುಪ್ರತಿಗಳನ್ನು ಸಿದ್ಧಪಡಿಸುವ ಚಟುವಟಿಕೆ ತೀವ್ರಗತಿಯಿಂದ ಬೆಳೆಯುತ್ತಲಿರುವ ಮೂಲಕ ಹಸ್ತಪ್ರತಿ ಬಗೆಗಳು (Types) ವರ್ಧಿಸುತ್ತಲಿವೆ. ಇವಲ್ಲದೆ ಕಳೆದ ಶತಮಾನದ ಕಲ್ಲಚ್ಚಿನ ಪ್ರತಿಗಳು ಪ್ರಾಚ್ಯಲೇಖನದ ಮೌಲ್ಯಪಡೆಯುತ್ತಲಿವೆ. ಹೀಗೆ ಹಸ್ತಪ್ರತಿ ಜಗತ್ತು ವಿಸ್ತರಿಸಿಕೊಳ್ಳುತ್ತಿದ್ದು, ಈ ಸಂರಕ್ಷಣವಿಭಾಗದಲ್ಲಿ ಇವುಗಳಿಗಾಗಿ ಪ್ರತ್ಯೇಕ ವ್ಯವಸ್ಥೆಗಳನ್ನು ಕಲ್ಪಿಸಿಕೊಡಬೇಕಾದ ಅವಶ್ಯಕತೆಗಳು ತೋರಿಬರುತ್ತಿವೆ.

ಅಭ್ಯಾಸಿ ಅಪೇಕ್ಷಿಸಿದ ಪ್ರಸಂಗದಲ್ಲಿ, ಸಂಪಾದನವಿಭಾಗಕ್ಕೆ ಬೇಕಾದ ಪಕ್ಷದಲ್ಲಿ ಮತ್ತು ಝೆರಾಕ್ಸ್ ಮೊದಲಾದ ನಕಲುಮಾಡಿಸಬೇಕಾದ ಸಂದರ್ಭದಲ್ಲಿ ಮಾತ್ರ ಹಸ್ತಪ್ರತಿ ಈ ವಿಭಾಗದಿಂದ ಹೊರಗೆ ಹೋಗಬೇಕು. ಮಿಕ್ಕ ಸಂದರ್ಭಗಳಲ್ಲಿ ಪ್ರತಿಗಳನ್ನು ಮುಟ್ಟಲೇಬಾರದು. ಕೆಲವು ಸಂಸ್ಥೆಗಳಲ್ಲಿ ಈ ವಿಭಾಗವನ್ನು ಪ್ರವೇಶಿಸಲು ಸಂದರ್ಶಕರಿಗೆ ಮುಕ್ತ ಅವಕಾಶ ಕಲ್ಪಿಸಿರುವುದುಂಟು. ಇದರಿಂದ ಧೂಳು ಹೊಲಸು ಪ್ರವೇಶಿಸಲು, ತಿಳಿಗೇಡಿಗಳು ಮುಟ್ಟಿನೋಡಲು, ದುಷ್ಟರು ಕಳವು ಮಾಡಲು ಅವಕಾಶ ಮಾಡಿಕೊಟ್ಟಂತಾಗುತ್ತದೆ. ಕಾರಣ ಇದನ್ನು ಪ್ರದರ್ಶನೀಯ ವಿಭಾಗವನ್ನಾಗಿ ಪರಿವರ್ತಿಸದೆ, ಕೇವಲ ಸಂಬಂಧಪಟ್ಟ ಅಧಿಕೃತ ಸಿಬ್ಬಂದಿಗೆ ಮಾತ್ರ ಪ್ರವೇಶವಿರುವ ಸ್ಥಳವಾಗಿ ರೂಪಿಸಬೇಕು.

## ೪. ಗ್ರಂಥಸಂಪಾದನ ವಿಭಾಗ

ತಾಂತ್ರಿಕವಿಭಾಗವು ಗ್ರಂಥಾಲಯ ವಿಜ್ಞಾನಿಗಳ ಕೇಂದ್ರವಾದರೆ, ಇದು ಗ್ರಂಥಜ್ಞಾನಿಗಳ ಕೇಂದ್ರವಾಗಿದೆ. ಹಸ್ತಪ್ರತಿಭಾಂಡಾರಕ್ಕೆ ವಿದ್ವತ್ತಿನ ಕೀರ್ತಿತರುವ ವಿಭಾಗ ವಿದು. ಮೈಸೂರಿನ ಓರಿಯಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟ್ ಕೌಟಿಲ್ಯನ ಅರ್ಥಶಾಸ್ತ್ರವನ್ನು, ಪುಣೆಯ ಭಾಂಡಾರಕರ ಓರಿಯಂಟಲ್ ರೀಸರ್ಚ ಇನ್‌ಸ್ಟಿಟ್ಯೂಟ್ ಮಹಾಭಾರತವನ್ನು, ಬರೋಡಾದ ಮಹಾರಾಜಾ ಸಯ್ಯಾಜಿರಾವ್ ವಿಶ್ವವಿದ್ಯಾಲಯ ರಾಮಾಯಣವನ್ನು ಪರಿಷ್ಕರಿಸಿ ಪ್ರಕಟಿಸುವ ಮೂಲಕ ಬಹುದೊಡ್ಡ ಹೆಸರು ಗಳಿಸಿದುದನ್ನು ಇಲ್ಲಿ ಸ್ಮರಿಸಬೇಕು. ಈ ಬಗೆಯ ಉನ್ನತ ಮಟ್ಟದ ಕೆಲಸ ನಡೆಯುವ ಈ ವಿಭಾಗದಲ್ಲಿ ಸಂಪಾದಕ ವಿದ್ವಾಂಸರು, ಹಸ್ತಪ್ರತಿ ಪ್ರತಿಕಾರರು, ಪಾಠಸಂಗ್ರಹ-ಪಾಠನಿರ್ಣಯ ಪ್ರೆಸ್‌ಕಾಪಿ ಸಿದ್ಧಪಡಿಸುವವರು, ಕರಡಚ್ಚು ಪರಿಶೀಲಿಸುವವರು ಇರುತ್ತಾರೆ. ಇವರಲ್ಲಿ ಪ್ರತಿಕಾರರು, ಪಾಠಸಂಗ್ರಹಕಾರರು ಹಸ್ತಪ್ರತಿವಾಚನದಲ್ಲಿ ತುಂಬ ದಕ್ಷರಾಗಿರಬೇಕಾಗುತ್ತದೆ. ತಪ್ಪು ವಾಚನ ಅನೇಕ ಅಪಾಯಗಳಿಗೆ ದಾರಿಮಾಡಿ ಕೊಡುವ ಸಂಭವವಿರುವುದರಿಂದ ಇವರಿಗೆ ಪ್ರಾಚೀನ ಅಕ್ಷರಜ್ಞಾನದಲ್ಲಿ ತಜ್ಞತೆ ಅವಶ್ಯ. ದುರ್ಗಸಿಂಹನ ಪಂಚತಂತ್ರವನ್ನು ತಿದ್ದಿದವನು ಮಾದಿರಾಜನಲ್ಲ, ವಾದಿರಾಜ. ಸಮಯಪರೀಕ್ಷೆಯ ಕರ್ತೃ ಬ್ರಹ್ಮಶಿವನಲ್ಲ, ಬ್ರಹ್ಮದೇವ. ಪಂಪನ ತಂದೆಯ ಹೆಸರಿನ ಪಾಠ ಅಭಿರಾಮ ದೇವರಾಯ ಅಲ್ಲ, ಭೀಮನಾಮಧೇಯ. ವಡ್ಡಾರಾಧನೆಯ ಕರ್ತೃ ರೇವಾಕೋಟ್ಯಾಚಾರ್ಯನಲ್ಲ, ಶಿವಕೋಟ್ಯಾಚಾರ್ಯ-ಇತ್ಯಾದಿಗಳೆಲ್ಲ ಪ್ರಾಚೀನ ಮತ್ತು ಆಧುನಿಕ ಲಿಪಿಕಾರರ ಅವಜ್ಞೆಯಿಂದ ಘಟಿಸಿದ ದೋಷಗಳೆಂಬುದನ್ನು ನೆನೆದರೆ ಲಿಪಿಕಾರರ, ಭಿನ್ನಪಾಠಸಂಗ್ರಾಹಕರ ಹೊಣೆ ಅರ್ಥವಾಗುತ್ತದೆ. ಇವರೆಲ್ಲರಿಗಿಂತ ಸಂಪಾದಕ ವಿದ್ವಾಂಸನ ಹೊಣೆ ದೊಡ್ಡದು. ಪ್ರತಿಭೆ, ಪಾಂಡಿತ್ಯಗಳ ಸಂಗಮ ವಾಗಿರುವ ಈತನು ಲೇಖನಸಂಭಾವ್ಯತೆ, ಅಂತಃ ಸಂಭಾವ್ಯತೆಗಳ ಬಲದಿಂದ ಮೂಲ ಪಾಠವನ್ನು ನಿರ್ಣಯಿಸಬೇಕಾಗುತ್ತದೆ.

ವೈಯಕ್ತಿಕ, ಜಂಟಿ, ಸಾಂಸ್ಥಿಕ–ಹೀಗೆ ಮೂರು ಬಗೆಯ ಸಂಪಾದನಕಾರ್ಯ ಇಲ್ಲಿ ಜರುಗಬಹುದಾಗಿದೆ. ಒಬ್ಬ ವಿದ್ವಾಂಸ ಇಲ್ಲವೆ ಒಬ್ಬನಿಗಿಂತ ಹೆಚ್ಚು ಜನ ವಿದ್ವಾಂಸರು ಇಲ್ಲವೇ ಇಡೀ ಸಂಸ್ಥೆ ಇಲ್ಲಿ ಕ್ರಮವಾಗಿ ಸಂಪಾದನಕಾರ್ಯದ ಜವಾಬ್ದಾರಿ ಹೊತ್ತಿರುತ್ತಾರೆ. ಕನ್ನಡ ಅಧ್ಯಯನ ಪೀಠದ "ಸಮಗ್ರ ವಚನಸಾಹಿತ್ಯದ ಪ್ರಕಟನ ಯೋಜನೆ" ಸಾಂಸ್ಥಿಕ ಸಂಪಾದನೆಗೆ ಉತ್ತಮ ನಿದರ್ಶನ. ಮದ್ರಾಸ ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ಸ್ ಲೈಬ್ರರಿಯ ಹಸ್ತಪ್ರತಿಗಳನ್ನು ಬಳಸಿ ಎ. ವೆಂಕಟರಾವ್ ಮತ್ತು ಎಚ್. ಶೇಷಯ್ಯಂಗಾರ ಬೆಳಕಿಗೆ ತಂದ ಅನೇಕ ಕೃತಿಗಳು ಜಂಟಿ ಸಂಪಾದನೆಗೆ, ಮೈಸೂರಿನ ಕನ್ನಡ ಅಧ್ಯಯನಸಂಸ್ಥೆಯಲ್ಲಿ ಶ್ರೀ ಎನ್. ಬಸವಾರಾಧ್ಯ, ಶ್ರೀ ಬಿ.ಎಸ್. ಸಣ್ಣಯ್ಯ ಮಾಡಿದ ಸಂಪಾದನಕಾರ್ಯ ವೈಯಕ್ತಿಕ ಸಂಪಾದನೆಗೆ ನಿದರ್ಶನವೆನಿಸಿವೆ.

ಪ್ರತಿಯೊಂದು ಹಸ್ತಪ್ರತಿಭಾಂಡಾರವು ಸಂಪಾದನವಿಭಾಗವನ್ನು ಬೆಳೆಸಲೇಬೇಕು. ತಮ್ಮ ಸಂಸ್ಥೆಯಲ್ಲಿರುವ ಶ್ರೇಷ್ಠ ಗ್ರಂಥಗಳನ್ನು ಆಗಾಗ ಪರಿಷ್ಕರಿಸಿ ಪ್ರಕಟಿಸುವ ಕಾರ್ಯದಲ್ಲಿ ಅಲ್ಲಿಯ ವಿದ್ವಾಂಸರು ತೊಡಗಿರಬೇಕು. ತಾವು ಸಂಪಾದಿಸಲಿರುವ ಕೃತಿಯ ಹಸ್ತಪ್ರತಿಗಳನ್ನೊಳಗೊಂಡ ಬೇರೆ ಭಾಂಡಾರಗಳ ತಿಳುವಳಿಕೆ ಇವರಿಗೆ ಅವಶ್ಯ. ಈ ತಿಳುವಳಿಕೆಯ ಹಿನ್ನೆಲೆಯಲ್ಲಿ ಹಸ್ತಪ್ರತಿಗಳನ್ನು ಸಂಗ್ರಹಿಸುವುದೂ, ಭಿನ್ನಪಾಠಗಳನ್ನು ಕಲೆ ಹಾಕುವುದೂ, ಶುದ್ಧಪಾಠವನ್ನು ನಿರ್ಣಯಿಸುವುದೂ ಇಲ್ಲಿ ಉದ್ದಕ್ಕೂ ನಡೆಯಬೇಕು. ವಿದ್ವತ್ತಿನ ವರಸೆಯೆಂಬಂತೆ 'ಪ್ರತಿ'ಗಳ ಸಹಾಯದಿಂದ ವೈಜ್ಞಾನಿಕ ವಿಧಾನದಲ್ಲಿ 'ಕೃತಿ'ಯ ಮರುರಚನೆಯ ಕೆಲಸ ನಡೆಯುವ ವಿಭಾಗವಿದು.

## ೫. ಗ್ರಂಥಪರಿಚಲನ ವಿಭಾಗ

ಒಂದು ಕಡೆಯಿಂದ ಗ್ರಂಥಭಾಂಡಾರ, ಇನ್ನೊಂದು ಕಡೆಯಿಂದ ವಾಚಕವರ್ಗ ಸಂಧಿಸುವ ಕೇಂದ್ರಸ್ಥಾನವಿದು. ಹೀಗಾಗಿ ಇದು ತುಂಬ ಸೂಕ್ತಸ್ಥಳದಲ್ಲಿ ಅಸ್ತಿತ್ವಕ್ಕೆ ಬರಬೇಕು. ಅನ್ಯವಸ್ತುಗಳನ್ನು ತೆಗೆದಿಟ್ಟು, ಗುರುತಿನ ಕಾರ್ಡು ತೋರಿಸಿ, ಬಳಿಕ ಸಹಿಮಾಡಿ, ಅಭ್ಯಾಸಿಯು ಈ 'ಪರಿಚಲನ ವಿಭಾಗ'ಕ್ಕೆ ಬರುತ್ತಾನೆ. ಹೀಗೆ ಬರುತ್ತಲೇ ಅವನನ್ನು ಲೇಖಕಸೂಚಿ, ಶೀರ್ಷಿಕೆಸೂಚಿ, ವಿಷಯಸೂಚಿಯ ಕ್ಯಾಬಿನೆಟ್ ಎದುರುಗೊಳ್ಳುತ್ತವೆ. ಈ ಕ್ಯಾಬಿನೆಟ್ ಪರಿಶೀಲಿಸಿ ತನಗೆ ಬೇಕಾದ ಹಸ್ತಪ್ರತಿಯ ವಿವರಗಳನ್ನು, ಅಲ್ಲಿಯೇ ಇರುವ ಬೇಡಿಕೆ ಪತ್ರದ ಮೇಲೆ ದ್ವಿಪ್ರತಿಯಲ್ಲಿ ನಮೂದಿಸಬೇಕು. ಈ ಬೇಡಿಕೆ ಪತ್ರದ ಮಾದರಿ ಹೀಗಿರಬೇಕು:

ಹಸ್ತಪ್ರತಿ ಭಾಂಡಾರ

ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಗ್ರಂಥದ ಹೆಸರು:
ಕರ್ತೃ:
ನಂಬರು:
ಅಭ್ಯಾಸಿಯ ಹೆಸರು/ಸಹಿ:
ಸಹಾಯಕ ಗ್ರಂಥಪಾಲಕನ ಸಹಿ:

ಈ ವಿವರಗಳನ್ನು ತುಂಬಿ, ಎರಡೂ ಬೇಡಿಕೆ ಪತ್ರಗಳನ್ನು ಕೌಂಟರ್‌ನಲ್ಲಿರುವ ಸಹಾಯಕ ಗ್ರಂಥಪಾಲಕನಿಗೆ ಕೊಡಬೇಕು. ಅವನು ಎರಡೂ ಪತ್ರಗಳಿಗೆ ಸಹಿ ಮಾಡಿ ಒಂದನ್ನು ತಾನು ಇಟ್ಟುಕೊಂಡು, ಇನ್ನೊಂದು ಪತ್ರವನ್ನು ಹಸ್ತಪ್ರತಿ ಸಂರಕ್ಷಣ ವಿಭಾಗಕ್ಕೆ ಕಳಿಸಿ, ಹಸ್ತಪ್ರತಿ ಪಡೆದು, ಅಭ್ಯಾಸಿಗೆ ಒದಗಿಸಬೇಕು. ಹೀಗೆ ಒದಗಿಸುವಾಗ ಅಭ್ಯಾಸಿಯು ಗುರುತಿನ ಪತ್ರ (Identity Card) ವನ್ನು ಪಡೆದು, ಅದಕ್ಕೆ ಬೇಡಿಕೆ ಚೀಟಿಯನ್ನು ಅಳವಡಿಸಿ ತನ್ನ ಹತ್ತಿರ ಇಟ್ಟುಕೊಳ್ಳಬೇಕು.

ಈ ಎಲ್ಲ ಕಾರ್ಯಮಾಡುವಲ್ಲಿ ಪರಿಚಲನಕಾರ ಸಹನೆ ಕಳೆದುಕೊಳ್ಳಬಾರದು, ಆಲಸ್ಯ ತೋರಬಾರದು. ಸ್ನೇಹ, ಸಹಕಾರ ಭಾವದಿಂದ ಅಭ್ಯಾಸಿಯನ್ನು ಸ್ವಾಗತಿಸಿ, ಅಲ್ಪಾವಧಿಯಲ್ಲಿಯೇ ಹಸ್ತಪ್ರತಿಯನ್ನು ಅವನಿಗೆ ಒಪ್ಪಿಸಬೇಕು. ಅವನು ಕೇಳಿದ ಇತರ ವಿವರಗಳಿಗೂ ಸೂಕ್ತ ಮಾರ್ಗದರ್ಶನ ನೀಡಬೇಕು.

## ೬. ಅಧ್ಯಯನ ವಿಭಾಗ

ಹಸ್ತಪ್ರತಿಯನ್ನು ಪಡೆದು, ಅಭ್ಯಾಸಿಯು ಅಧ್ಯಯನಕ್ಕೆ ಕುಳಿತುಕೊಳ್ಳುವ ವಿಭಾಗವಿದು. ಗಾಳಿ-ಬೆಳಕುಗಳ ವ್ಯವಸ್ಥೆ, ಶಾಂತ ವಾತಾವರಣ ಇಲ್ಲಿ ಅಗತ್ಯ. ಸೂಕ್ತ ಪೀಠೋಪಕರಣಗಳಿಂದ ಸುಸಜ್ಜಿತವಾದ ಇಲ್ಲಿ, ಭೂತಗನ್ನಡಿ-ಮೈಕ್ರೋ ಫಿಲ್ಮ್ ರೀಡರ್‌ಗಳ ಅನುಕೂಲತೆಯೂ ಇರಬೇಕು. ಮುದ್ರಿತ ಗ್ರಂಥಾಲಯದ ವಾಚನವ್ಯವಸ್ಥೆಗಿಂತ ಈ ವಿಭಾಗದ ವ್ಯವಸ್ಥೆ ಭಿನ್ನವಾಗಿರಬೇಕೆಂಬ ತಿಳುವಳಿಕೆಯ ಹಿನ್ನೆಲೆಯಲ್ಲಿ ಈ ಪರಿಸರವನ್ನು ಸಜ್ಜುಗೊಳಿಸಬೇಕು. ಒಬ್ಬ ವಿದ್ಯಾರ್ಥಿಗೆ ಒಂದು ಟೇಬಲ್ಲಿನಂತೆ ಪೀಠಾವಕಾಶ ಕಲ್ಪಿಸಬೇಕು. ಏಕೆಂದರೆ ಮುದ್ರಿತ ಪುಸ್ತಕಗಳ ಅಧ್ಯಯನಕ್ಕಿಂತ ಹಸ್ತಪ್ರತಿಗಳ ಅಧ್ಯಯನಕ್ಕೆ ಏಕಾಗ್ರತೆ ಅಧಿಕ ಬೇಕಾಗುತ್ತದೆ. ಅಲ್ಲದೆ ಹಸ್ತಪ್ರತಿಯನ್ನು ಅನೇಕ ರೀತಿಯಾಗಿ ಹಿಡಿದು ಆಗಾಗ ಅಕ್ಷರಗಳನ್ನು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಹೆಚ್ಚಿನ ಬೆಳಕಿಗಾಗಿ ಸಣ್ಣ ಟ್ಯೂಬಲಾಯಿಟ್ ಪ್ರತಿಯೊಂದು ಮೇಜಿಗೂ ಅವಶ್ಯ.

ಅಭ್ಯಾಸಿ ಹಸ್ತಪ್ರತಿಗಳನ್ನು ತುಂಬಾ ಕಾಳಜಿಯಿಂದ ಉಪಯೋಗಿಸಬೇಕು. ಕಟ್ಟನ್ನು ಬಿಚ್ಚುವಲ್ಲಿ, ಓದಲು ವ್ಯವಸ್ಥಿಗೊಳಿಸಿಕೊಳ್ಳುವಲ್ಲಿ, ಪುಟಗಳನ್ನು ಬಿಡಿಸು ವಲ್ಲಿ ಸದಾ ಕಾಳಜಿ ವಹಿಸಬೇಕು. "ಮೂರ್ಖಹಸ್ತೇ ನದಾತವ್ಯಂ" ಎಂದು ಹಸ್ತ ಪ್ರತಿ ಹಲುಬಬಾರದು. ಹಸ್ತಪ್ರತಿಗಳಲ್ಲಿ ಮಸಿಯಿಂದ ಗುರುತು ಮಾಡುವುದಾಗಲಿ, ಬೇಕಾದ ಗರಿಗಳನ್ನು ಕಳವು ಮಾಡುವುದಾಗಲಿ ಸಲ್ಲದ ಕೆಲಸವೇ ಸರಿ. ಅಭ್ಯಾಸ ಮುಗಿದ ಬಳಿಕ ಅದನ್ನು ಮತ್ತೆ ಸರಿಯಾಗಿ ಕಟ್ಟಬೇಕು. "ರಕ್ಷೇತ್ ಶಿಥಿಲಬಂಧ ನಾತ್" ಎಂದು ಹಸ್ತಪ್ರತಿ ಪ್ರಾರ್ಥಿಸಿಕೊಳ್ಳುವಂತಾಗಬಾರದು. ಬಳಿಕ ಅಭ್ಯಾಸಿ ಹಸ್ತಪ್ರತಿಯನ್ನು ಪರಿಚಲನವಿಭಾಗದಲ್ಲಿ ಮರಳಿಸಿ, ತನ್ನ ಗುರುತಿನ ಪತ್ರ ಒಯ್ಯ ಬೇಕು. ಅಭ್ಯಾಸಿಗೆ ಅನ್ಯಗ್ರಂಥಾಲಯದಿಂದ ಹಸ್ತಪ್ರತಿ ಎರವಲು ಬೇಕಾಗಿದ್ದರೆ, ಎರವಲು ಪಡೆದಿದ್ದ ಹಸ್ತಪ್ರತಿಯನ್ನು ರವಾನಿಸುವುದಿದ್ದರೆ, ಅದನ್ನು ಇಲ್ಲಿಯೇ ಜರುಗಿಸಬೇಕಾಗುತ್ತದೆ.

## ೭. ಗ್ರಂಥಾಲಯ ವಿಭಾಗ

ಹಸ್ತಪ್ರತಿ ಅಧ್ಯಯನಕ್ಕೆ ಬಂದ ಅಭ್ಯಾಸಿಗಳಿಗೆ ಆನುಷಂಗಿಕವಾಗಿ ಮುದ್ರಿತ ಗ್ರಂಥಗಳನ್ನೂ ಪರಿಶೀಲಿಸುವ ಅಗತ್ಯ ಒದಗುತ್ತದೆ. ಇದರ ಪೂರೈಕೆಗಾಗಿ ಒಂದು ಸುಸಜ್ಜಿತ ಗ್ರಂಥಾಲಯವನ್ನು ಹಸ್ತಪ್ರತಿಭಾಂಡಾರಕ್ಕೆ ಸಂಲಗ್ನಿಸಿಕೊಳ್ಳುವುದು ಅವಶ್ಯವಿದೆ. ಇದು ಸಾಮಾನ್ಯವಾಗಿ ಸಂಪಾದಿತ ಕೃತಿ, ಹಸ್ತಪ್ರತಿಸೂಚಿ ಮೊದ ಲಾದುವು ಪ್ರಧಾನವಾಗಿರುವ ಕೇಂದ್ರವಾಗಿರಬೇಕು. ಬೇರೆ ಬೇರೆ ಸಂಸ್ಥೆಗಳು ಪ್ರಕಟಿಸಿದ ಎಲ್ಲ ಹಸ್ತಪ್ರತಿಸೂಚಿಗ್ರಂಥಗಳಂತೂ ಅವಶ್ಯಬೇಕು. ಏಕೆಂದರೆ, ತಾನು ಅಭ್ಯಾಸ ಮಾಡಲಿರುವ ಹಸ್ತಪ್ರತಿಯು ಬೇರೆ ಪ್ರದೇಶದ ಯಾವ ಹಸ್ತಪ್ರತಿ ಭಾಂಡಾರದಲ್ಲಿದೆ ? ಎಂಬುದನ್ನು ಅಭ್ಯಾಸಿ ತಿಳಿದುಕೊಳ್ಳಬೇಕಾಗುತ್ತದೆ. ಕೆಲವೊಮ್ಮೆ ಸಂಪಾದನ ವಿಭಾಗ, ತಾಂತ್ರಿಕ ವಿಭಾಗಗಳಿಗೂ ಈ ಗ್ರಂಥಾಲಯ ಅವಶ್ಯವೆನಿಸು ತ್ತದೆ. ಹೀಗಾಗಿ ಪ್ರೌಢ ವ್ಯಾಸಂಗಕ್ಕೆ ಬೇಕಾಗುವ ವಿದ್ವತ್‌ಗ್ರಂಥಗಳ ಸುಸಜ್ಜಿತ ಕೇಂದ್ರವಾಗಿರುವ ಇಲ್ಲಿ, ಅಭ್ಯಾಸಿಗೆ ಅನುಕೂಲವೆನಿಸುವ ಪೀಠೋಪಕರಣ, ಗಾಳಿ-ಬೆಳಕಿನ ವ್ಯವಸ್ಥೆ, ಪ್ರಶಾಂತ ವಾತಾವರಣ ಅಪೇಕ್ಷಣೀಯವೆನಿಸಿದೆ. ಸಾಮಾನ್ಯ ವಾಗಿ ಮುದ್ರಿತ ಪುಸ್ತಕಗಳ ಗ್ರಂಥಭಾಂಡಾರದಲ್ಲಿಯಂತೆ ಓಪನ್ ಸಿಸ್ಟಮ್‌ಕ್ಕೆ ಬದಲು ಕ್ಲೋಸ್ಡ್ ಸಿಸ್ಟಮ್ ಇಲ್ಲಿ ಬೇಕು. ಅಭ್ಯಾಸಿ ತನಗೆ ಬೇಕಾದ ಗ್ರಂಥವನ್ನು ಕೆಟಲಾಗ್ ಕ್ಯಾಬಿನೆಟ್ ನೋಡಿ, ಬೇಡಿಕೆ ಪತ್ರದಲ್ಲಿ ನಮೂದಿಸಿ, ಪರಿಚಲನ ವಿಭಾಗದ ಸಿಬ್ಬಂದಿ ವರ್ಗದಿಂದ ಪಡೆಯುವ ವ್ಯವಸ್ಥೆ ಇಲ್ಲಿ ಇರಬೇಕಾಗುತ್ತದೆ.

## ೮. ಯಂತ್ರೋಪಕರಣ ವಿಭಾಗ

ಈ ವಿಭಾಗದಲ್ಲಿ ಮೈಕ್ರೋಫಿಲ್ಮ್, ಫೋಟೋಸ್ಟ್ಯಾಟ್, ಝೆರಾಕ್ಸ್, ಬೆರಳಚ್ಚುಯಂತ್ರ ಮೊದಲಾದ ಸೌಕರ್ಯಗಳು ಇರಬೇಕು. ಹಸ್ತಪ್ರತಿ ಇಲ್ಲವೆ

ಯಂತ್ರಪ್ರತಿಗಳ ನಕಲನ್ನು ತಯಾರಿಸಿಕೊಳ್ಳಲು ಅಭ್ಯಾಸಿಗೆ ಇವು ನೆರವಾಗಬೇಕು. ಕೆಲವೊಮ್ಮೆ ಪ್ರತಿಮಾಡಿಕೊಡುವ ವೃತ್ತಿ ಲಿಪಿಕಾರರೂ ಇಲ್ಲಿ ಇರಬೇಕಾಗುತ್ತದೆ. ಹಸ್ತಪ್ರತಿಭಾಂಡಾರಕ್ಕೆ ಬಂದ ಅಭ್ಯಾಸಿಗಳಿಗಲ್ಲದೆ ದೂರದ ಅಭ್ಯಾಸಿಗಳ ಬೇಡಿಕೆ ಯನ್ನೂ ಪೂರೈಸುವ ಕೆಲಸ ಇಲ್ಲಿ ನಡೆಯಬೇಕಾಗುತ್ತದೆ.

## ೯. ಪ್ರದರ್ಶನದ ವಿಭಾಗ

ಇಲ್ಲಿಯೇ ಇನ್ನೊಂದು ಮಗ್ಗುಲಿಗೆ ಒಂದು ಸಣ್ಣ ಪ್ರದರ್ಶನ ವ್ಯವಸ್ಥೆಯನ್ನು ಅಸ್ತಿತ್ವಕ್ಕೆ ತರಬೇಕು. ಅಪರೂಪದ ಹಸ್ತಪ್ರತಿಗಳು, ಹಸ್ತಪ್ರತಿಗಳಲ್ಲಿಯ ಚಿತ್ರ ಗಳು, ಬರವಣಿಗೆಯ ಪ್ರಾಚೀನ ಸಾಧನಗಳು ಇಲ್ಲಿ ಪ್ರದರ್ಶನಗೊಳ್ಳಬೇಕು. ಈ ಪ್ರದರ್ಶನವನ್ನು ಇವುಗಳ ಬೆಳವಣಿಗೆಯ ಕ್ರಮದಲ್ಲಿ ಸಂಯೋಜಿಸಿದರೆ ಇನ್ನೂ ಲೇಸು. ಸಾಮಾನ್ಯರಿಗೆ 'ಹಸ್ತಪ್ರತಿ ಜಗತ್ತು' ಎಂದರೆ ಏನು? ಎಂಬುದರ ಸ್ಥೂಲ ತಿಳುವಳಿಕೆಯನ್ನು ಇದು ಒದಗಿಸಿಕೊಡುವಂತಿರಬೇಕು.

ಇಲ್ಲಿಯೇ ಸಂಸ್ಥೆ ಸಂಪಾದಿಸಿ ಪ್ರಕಟಿಸಿರುವ ಎಲ್ಲ ಗ್ರಂಥಗಳ, ಅನ್ಯವ್ಯಕ್ತಿ ಇಲ್ಲವೆ ಸಂಸ್ಥೆ ಸಂಪಾದಿಸಿ ಪ್ರಕಟಿಸಿರುವ ಇತ್ತೀಚಿನ ಗ್ರಂಥಗಳ ಪ್ರದರ್ಶನವೂ ಅಗತ್ಯಬೇಕು. ಇದಲ್ಲದೆ ಸಂಸ್ಥೆ ಸಧ್ಯ ಕೈಗೆತ್ತಿಕೊಂಡಿರುವ ಯೋಜನೆಯ ವಿವರ ವಾದ ಪಟಗಳನ್ನೂ ಇಲ್ಲಿ ಪ್ರದರ್ಶಿಸಬಹುದು.

## ೧೦. ಸಮಾಲೋಚನ ವಿಭಾಗ

ಹಸ್ತಪ್ರತಿ ಭಾಂಡಾರ ಕೇವಲ ವಿದ್ವಾಂಸ ಮತ್ತು ಹಸ್ತಪ್ರತಿಗಳ ನಡುವೆ ಸಂಪರ್ಕ ಕಲ್ಪಿಸುವ ಸಂಸ್ಥೆಯಲ್ಲ. ಅದು ವಿದ್ವಾಂಸ-ವಿದ್ವಾಂಸರಲ್ಲಿಯೂ ಸಂಪರ್ಕ ಕಲ್ಪಿಸುವ ಕೇಂದ್ರವಾಗಿ ಪರಿಣಮಿಸಬೇಕು. ಹೀಗಾಗಿ ಅವರು ಪರಸ್ಪರ ವಿಚಾರ ಗಳನ್ನು ವಿನಿಮಯಿಸಿಕೊಳ್ಳಲು ಒಂದು ತಕ್ಕ ವ್ಯವಸ್ಥೆ ಇಲ್ಲಿ ಅವಶ್ಯವೆನಿಸುತ್ತದೆ. ಚಕ್ರಗೋಷ್ಠಿಗೆ ಅನುಕೂಲವಾಗುವ ಸೂಕ್ತ ಪೀಠೋಪಕರಣ, ನಿಯಂತ್ರಿತ ಗಾಳಿ-ಬೆಳಕುಗಳ ಪೂರೈಕೆ, ಆಹ್ಲಾದಕರ ವಾತಾವರಣದಿಂದ ಕೂಡಿದ ಈ ಸ್ಥಳ ವಿದ್ವತ್ ಗೋಷ್ಠಿಗೆ ಹೇಳಿಮಾಡಿಸಿದಂತಿರಬೇಕು. ವಿದ್ವಾಂಸರು ತಮ್ಮ ಸಂದೇಹ ನಿವಾರಣೆ ಮಾಡಿಕೊಳ್ಳಲು ಇಲ್ಲಿ ತಾವಾಗಿಯೇ ಸೇರಬಹುದು ಇಲ್ಲವೆ ಗ್ರಂಥಪಾಲಕನೇ ಇಂಥ ಸನ್ನಿವೇಶ ನಿರ್ಮಾಣ ಮಾಡಬಹುದು. ಇದರಿಂದ ಮುಕ್ತಚರ್ಚೆ ನಡೆದು, ವಿದ್ವಾಂಸರ ಜ್ಞಾನ ವರ್ಧಿಸುತ್ತದೆ. ಯೋಗ್ಯ ಸೂಚನೆಗಳು ಲಭ್ಯವಾಗಿ, ಗ್ರಂಥಾ ಲಯವೂ ಬೆಳೆಯುತ್ತದೆ. ಸಿಬ್ಬಂದಿವರ್ಗದವರ ಸಾಂಸ್ಥಿಕ, ಶೈಕ್ಷಣಿಕ ಸಮಾ ಲೋಚನೆಗೂ ಇದು ಅನುಕೂಲ ಸ್ಥಳವಾಗಿರುತ್ತದೆ.

## ೧೧. ಸಭಾಗೃಹ ವಿಭಾಗ

ಹಸ್ತಪ್ರತಿಭಾಂಡಾರವು ಸೂಚೀಕರಣ, ಅಧ್ಯಯನ, ಗ್ರಂಥಸಂಪಾದನಗಳೆಂಬ ಶೈಕ್ಷಣಿಕ ಚಟುವಟಿಕೆಗಳ ವಿಭಾಗವಾಗಿದ್ದರೂ ಕೆಲವೊಮ್ಮೆ ವಿಚಾರಸಂಕಿರಣ, ವಿಶೇಷೋಪನ್ಯಾಸ, ಪ್ರಾತ್ಯಕ್ಷಿಕೆಗಳನ್ನೂ ಏರ್ಪಡಿಸಬೇಕಾಗುತ್ತದೆ. ಇದು ಹಸ್ತಪ್ರತಿಶಾಸ್ತ್ರವನ್ನು ಕುರಿತಾಗಿರಬಹುದು ಇಲ್ಲವೆ ಹಸ್ತಪ್ರತಿಯಲ್ಲಿ ಅಡಕವಾಗಿರುವ ಜ್ಞಾನಕ್ಕೆ ಸಂಬಂಧಿಸಿರಬಹುದು. ವಿದೇಶದಲ್ಲಿ ಕನ್ನಡ ಹಸ್ತಪ್ರತಿಗಳು, ಕಳೆದುಹೋದ ಕನ್ನಡ ಹಸ್ತಪ್ರತಿಗಳು, ಪ್ರಾಚೀನ ವೈಯಕ್ತಿಕ ಹಸ್ತಪ್ರತಿಭಾಂಡಾರಗಳು, ಪ್ರಾಚೀನ ಸಾರ್ವಜನಿಕ ಹಸ್ತಪ್ರತಿಭಾಂಡಾರಗಳು, ಹಸ್ತಪ್ರತಿಶಾಸ್ತ್ರದ ಇತ್ತೀಚಿನ ಬೆಳವಣಿಗೆ, ಪ್ರಕ್ಷಿಪ್ತ ಹಸ್ತಪ್ರತಿಗಳು, ಅಪ್ರಕಟಿತ ಹಸ್ತಪ್ರತಿಗಳು, ಅಮೂಲ್ಯ ಹಸ್ತಪ್ರತಿಗಳು, ಅಲಕ್ಷಿತ ಹಸ್ತಪ್ರತಿಗಳು–ಇತ್ಯಾದಿ ಮಹತ್ವದ ವಿಷಯಗಳನ್ನು ಕುರಿತು ಕಾಲಕಾಲಕ್ಕೆ ವಿಚಾರಸಂಕಿರಣ, ಉಪನ್ಯಾಸ ಏರ್ಪಡಿಸುವುದು ತೀರ ಅಗತ್ಯ. ಈ ಉಪನ್ಯಾಸಗಳನ್ನು ಪ್ರಾತ್ಯಕ್ಷಿಕೆಗಳ ಮೂಲಕವೂ ಸ್ಪಷ್ಟಪಡಿಸುವ ಅವಕಾಶ ಇಲ್ಲಿ ಇರಬೇಕು.

## ೧೨. ವಿಶ್ರಾಂತಿ ವಿಭಾಗ

ಸಿಬ್ಬಂದಿ ವರ್ಗದವರಿಗೆ ಬಿಡುವಿನ ವೇಳೆಯಲ್ಲಿ, ಅಭ್ಯಾಸಿಗಳಿಗೆ ಬೇಸರ ಸಮಯದಲ್ಲಿ ವಿರಾಮ ಪಡೆಯುವುದಕ್ಕಾಗಿ ಇರುವ ವಿಭಾಗವಿದು. ವಿರಾಮಕ್ಕೆ ಅವಶ್ಯವಿರುವ ಮುಖಾಮುಖಿ ಕುಳಿತು ಹರಟೆ–ಚರ್ಚೆಗಳಿಗೆ ಅನುಕೂಲವೆನಿಸುವ ರೀತಿಯಲ್ಲಿ ಪೀಠೋಪಕರಣಗಳಿರಬೇಕು. ಬಿಸಿ–ತಂಪು ಪಾನೀಯ ಮತ್ತು ಅಲ್ಪೋಪಹಾರಗಳನ್ನು ಪೂರೈಸುವ ಅನುಕೂಲತೆಯೂ ಇಲ್ಲಿ ಅವಶ್ಯಬೇಕು.

ಹೀಗೆ ಹಸ್ತಪ್ರತಿಗಳ ವ್ಯವಸ್ಥೆ ಮತ್ತು ಅಭ್ಯಾಸಿಗಳ ವ್ಯಾಸಂಗಕ್ರಿಯೆಗಳಿಗೆ ತಕ್ಕ ನೆಲೆಯಾಗುವಂತೆ ಹಸ್ತಪ್ರತಿಭಾಂಡಾರವನ್ನು ಅಸ್ತಿತ್ವಕ್ಕೆ ತರಬೇಕು.



೫

# ಪ್ರಯೋಜನ

ಸಾರ್ಥಕ ಸೇವೆ; ಮುಂದೇನು ?: ಸಂಗ್ರಹಣ–ಸಂರಕ್ಷಣೆ–ಹಸ್ತಪ್ರತಿಶಾಸ್ತ್ರದ ಅಳವಡಿಕೆ–ಗ್ರಂಥ ಸಂಪಾದನ, ಪ್ರಶಸ್ತಿ ಸಂಗ್ರಹ–ಹಸ್ತಪ್ರತಿ ಭಾಂಡಾರದ ನವೀಕರಣ–ಹಸ್ತಪ್ರತಿ ಅಧ್ಯಯನ ತರಬೇತಿ–ರಾಜ್ಯ ಹಸ್ತಪ್ರತಿ ಇಲಾಖೆಯ ಸ್ಥಾಪನೆ.

## ಸಾರ್ಥಕ ಸೇವೆ

ಗ್ರಂಥಾಲಯಗಳನ್ನು ಸಾಮಾನ್ಯ ಮತ್ತು ವಿಶಿಷ್ಟ ಎಂದು ವರ್ಗೀಕರಿಸಿದರೆ, ಹಸ್ತಪ್ರತಿ ಗ್ರಂಥಾಲಯ ವಿಶಿಷ್ಟವರ್ಗಕ್ಕೆ ಒಳಪಡುತ್ತದೆ. ಈ ವೈಶಿಷ್ಟ್ಯ ಕಾರಣವಾಗಿ ಹಸ್ತಪ್ರತಿಶಾಸ್ತ್ರದಲ್ಲಿ ಪರಿಣಿತರಾದ ಸಿಬ್ಬಂದಿವರ್ಗ, ಹಸ್ತಪ್ರತಿನಿಷ್ಠ ವಿಷಯದ ಬಗ್ಗೆ ಆಸಕ್ತಿಯುಳ್ಳ ವಿದ್ವಾಂಸವರ್ಗ ಈ ಭಾಂಡಾರಕ್ಕೆ ನ್ಯಾಯ ಒದಗಿಸುತ್ತಾರೆ. ಗ್ರಂಥಾಲಯಕ್ಕೆ ಆಗಮಿಸಿದ ಅಭ್ಯಾಸಿಗಳಿಗೆ ಪರಮಾವಧಿ ಸೇವೆ ಸಲ್ಲಿಸುವಲ್ಲಿಯೇ ತಮ್ಮ ವೃತ್ತಿಯ ಸಾರ್ಥಕತೆಯಿದೆಯೆಂಬ ಭಾವ ಸಿಬ್ಬಂದಿಯಲ್ಲಿ ಜಾಗ್ರತವಾಗಿದ್ದಷ್ಟೂ ಅವರ ಭಾಂಡಾರದ ಪ್ರಯೋಜನ ವರ್ಧಿಸುತ್ತದೆ. ಈ ಹಿಂದೆ ಹೇಳಲಾದ ಹನ್ನೆರಡು ವಿಭಾಗಗಳಲ್ಲಿ ತಾಂತ್ರಿಕ ವಿಭಾಗ, ಪರಿಚಲನ ವಿಭಾಗ, ಸಂಪಾದನ ವಿಭಾಗಗಳು ಮಾತ್ರ ಅಭ್ಯಾಸಿಗೆ ನೇರವಾಗಿ ನೆರವಾಗುವ ನೆಲೆಗಳಾಗಿವೆ. ಇವು ಜಾಗ್ರತವಾಗಿದ್ದಷ್ಟೂ ಗ್ರಂಥಾಲಯದ ಪ್ರಯೋಜನ, ಪ್ರಸಿದ್ಧಿ ಬೆಳೆಯುತ್ತದೆ.

ತಾಂತ್ರಿಕ ವಿಭಾಗದ ಸಿಬ್ಬಂದಿಯು ವರ್ಗೀಕರಣ, ಸೂಚೀಕರಣ ಕಾರ್ಯವನ್ನು ಸಕಾಲದಲ್ಲಿ ಮತ್ತು ಸಮರ್ಪಕವಾಗಿ ಮಾಡಿ ಮುಗಿಸಬೇಕು. ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿ ತಂದ ಹಸ್ತಪ್ರತಿಗಳು ಅಭ್ಯಾಸಿಗಳ ವ್ಯಾಸಂಗಕ್ಕೆ ಒದಗದೆ ಮೂಲೆಯಲ್ಲಿ ಕೊಳೆಯಬಾರದು. ಪ್ರತಿಯೊಂದು ಪುಟ ಬಿಚ್ಚಿ ಓದಿ, ವಿಷಯವನ್ನು ತಿಳಿದುಕೊಂಡು

ಪೂರೈಸುವ ಸೂಚೀಕರಣ-ವರ್ಗೀಕರಣ ಕೆಲಸಗಳು ಶ್ರಮದಾಯಕವಾದುವು, ಜೇಸರ ಘಟ್ಟಿಸುವಂಥವು. ಇದಾವುದನ್ನೂ ಲೆಕ್ಕಿಸದೆ ಸಕಾಲದಲ್ಲಿ ಈ ಎರಡೂ ಕೆಲಸಗಳನ್ನು ಮಾಡಿಮುಗಿಸಬೇಕು. ಹಸ್ತಪ್ರತಿಯಲ್ಲಿ ಸೂಚೀಕರಣ ತಪ್ಪಿದರೆ ಕ್ಯಾಬಿನೆಟ್‌ನಲ್ಲಿ ಯಾವುದೋ ವಿಷಯದ ಕೆಳಗೆ ಯಾವುದೋ ವಿಷಯದ ಕಾರ್ಡು ಸೇರಿಕೊಂಡು, ಅಭ್ಯಾಸಿಗೆ ಅಡ್ಡದಾರಿ ತೋರಿಸುತ್ತದೆ. ಉದಾ : ಕನ್ನಡ ಅಧ್ಯಯನಪೀಠದ ಹಸ್ತಪ್ರತಿಸೂಚಿ I-೩೫ರಲ್ಲಿ "ಇಪ್ಪತ್ತೊಂದು ಯುಗದ ವಚನ"ವನ್ನು ಹೆಸರಿಸಿ, ಕೆಳಗೆ "ಕ್ರಿಯಾಶಕ್ತಯ್ಯಗಳ ವಾರ್ಧಕ"ದ ಪರಿಚಯ ಕೊಡಲಾಗಿದೆ. VII-೨೪೫ರಲ್ಲಿ ವೈದ್ಯರತ್ನಾಕರ ಹೆಸರಿನ ಗ್ರಂಥ ಶಿರೋನಾಮೆಯನ್ನು ಶೈವರತ್ನಾಕರ ಎಂದು ಓದಿದ್ದಾರೆ. ಇದರಿಂದ ವೈದ್ಯಪುಸ್ತಕದ ಈ ಕಾರ್ಡು ಶೈವಧರ್ಮ ವರ್ಗೀಕರಣದಲ್ಲಿ ಸೇರಿಕೊಳ್ಳುವುದು ಸಹಜ. ಸೂಚೀಕರಣ ಸಂದರ್ಭದಲ್ಲಿ ಮೇಲೆ ಹೇಳಿದ ಸೂಚಿ VII-೭ರಲ್ಲಿ ಅಖಂಡೇಶ್ವರ ವಚನದ ಕರ್ತೃ ಶಿವಯೋಗಿಯೆಂದು ಹೇಳಿದುದು, VII-೧೧೪ರಲ್ಲಿ ಪಂಚಾಂಗದ ವಚನ ಎಂಬುದನ್ನು ಪಂಚ ಲಿಂಗದ ವಚನ ಎಂದು ಓದಿದುದು ಗಮನಾರ್ಹ ದೋಷಗಳೇ ಸರಿ. VII-೧೫೯ರಲ್ಲಿಪುಷ್ಪಾಂಜಲಿ ಹೆಸರಿನ ಕೃತಿಯಿದೆ. ಇದು ಸಮಾಧಿಕ್ರಿಯಾ ಸಂದರ್ಭದಲ್ಲಿ ಹೇಳುವ ಪುಷ್ಪಾಂಜಲಿ ವಿಷಯವನ್ನೊಳಗೊಂಡಿದೆ. ಆದರೆ ಈ ಗ್ರಂಥದ ಬಗ್ಗೆ "ಪುಷ್ಪಗಳಿಂದ ಶಿವ, ಗುರು, ಲಿಂಗ, ಜಂಗಮ ಪೂಜೆ ಮಾಡಿ ಭವವನ್ನು ಗೆಲಿಯಲು ಬೋಧಿಸಲಾಗಿದೆ" ಎಂಬ ವಿವರಣೆ ಕೊಡಲಾಗಿದೆ. VII-೧೭೭ರಲ್ಲಿ 'ಮಹಂತ ನಿಜಲೀಲಾನುಭವ' ಕೃತಿಯು ಕರ್ತೃಸ್ಥಾನದಲ್ಲಿ ಪ್ರಶ್ನೆ ಚಿಹ್ನೆ ಹಾಕಲಾಗಿದೆ. ಆದರೆ ಇದರ ಕರ್ತೃ ಕಡಕೋಳ ಮಡಿವಾಳಪ್ಪ ಎಂಬುದು ಪ್ರಸಿದ್ಧವಾಗಿಯೇ ಇದೆ. ಎಚ್. ಡಿ. ವೆಲಂಕರ ಅವರ ಜಿನರತ್ನಕೋಶದಲ್ಲಿ ನಾಗಾರ್ಜುನ ಹೆಸರಿನಲ್ಲಿ 'ಕರ್ನಾಟಮಣಿದರ್ಪಣ' ಹೆಸರಿನ ಗ್ರಂಥವನ್ನು ಸೂಚಿಸುತ್ತ, ಇದು ಕೊಲ್ಲಾಪುರ ಲಕ್ಷ್ಮೀಸೇನ ಭಟ್ಟಾರಕ ಜೈನ ಬಸದಿಯಲ್ಲಿದೆಯೆಂದು ಹೇಳಲಾಗಿದೆ. ನಾನು ಕೊಲ್ಲಾಪುರ ವರೆಗೂ ಹೋಗಿ ನೋಡಿದರೆ, ಮೊದಲಿನಿಂದಲೂ ಆ ಹೆಸರಿನ ಹಸ್ತಪ್ರತಿ ಅಲ್ಲಿ ಇಲ್ಲವೆಂಬುದು ಖಚಿತವಾಯಿತು. ಬಹುಶಃ ನಾಗವರ್ಮ, ಕರ್ಣಾಟ ಭಾಷಾಭೂಷಣ, ಕೇಶಿರಾಜನ ಶಬ್ದಮಣಿದರ್ಪಣ ಇವೆಲ್ಲ ಸೇರಿ ಈ ಗೊಂದಲ ನಿರ್ಮಾಣವಾಗಿರಬೇಕು. ಇಂಥ ದೋಷಗಳು ಸೂಚಿಯಲ್ಲಿ ಕಂಡುಬರಬಾರದು. ಎಷ್ಟೋ ಸಲ ಇದು ಅಭ್ಯಾಸಿಗೆ ತಲೆಬೇನೆಯನ್ನುಂಟುಮಾಡುತ್ತದೆ.

ಇದಕ್ಕಿಂತ ಮುಖ್ಯವಾದುದು ಪರಿಚಲನ ವಿಭಾಗ. ವಿದ್ವಾಂಸನಿಗೂ, ಗ್ರಂಥಾಲಯಕ್ಕೂ ಸಂಪರ್ಕ ಕಲ್ಪಿಸುವ ಪ್ರಥಮ ನೆಲೆಯಿದು. ಹೀಗೆ ಸಂಬಂಧ ಕಲ್ಪಿಸುವ ಸೇತುವೆಯಾಗಬೇಕಾದ ಇದು ಅಡ್ಡಗೋಡೆಯಾಗಿ ನಿಲ್ಲಬಾರದು. ೧. ಹಸ್ತಪ್ರತಿ ಪೂರೈಕೆ, ೨. ಹಸ್ತಪ್ರತಿಯ ನಕಲು ಪೂರೈಕೆ, ೩. ದೂರದ ವಿದ್ವಾಂಸರಿಗೆ ಹಸ್ತಪ್ರತಿಯ ಎರವಲು ಪೂರೈಕೆ, ೪. ಸ್ಥಳೀಯ ವಿದ್ವಾಂಸರಿಗೆ ಅನ್ಯಸ್ಥಳದ ಹಸ್ತ

ಪ್ರತಿ ತರಿಸಿಕೊಡುವಿಕೆ–ಹೀಗೆ ನಾಲ್ಕು ಬಗೆಗಳಲ್ಲಿ ಇಲ್ಲಿಯ ಸಿಬ್ಬಂದಿ ಕೆಲಸ ಮಾಡಬೇಕಾಗುತ್ತದೆ. ಹಸ್ತಪ್ರತಿ ಪೂರೈಕೆ ಎನ್ನುವುದು ಭಾಂಡಾರಕ್ಕೆ ಬಂದ ವಿದ್ವಾಂಸರಿಗೆ ಹಸ್ತಪ್ರತಿಯನ್ನು ಪೂರೈಸುವುದಾಗಿದೆ. ಮೇಲೆ ಹೇಳಿದ ನಾಲ್ಕೂ ಬಗೆಗಳಲ್ಲಿ ಇದು ಬಹುಮುಖ್ಯ ಸೇವೆಯಾಗಿದೆ. ವಿದ್ವಾಂಸನ ಮನಸ್ಸಿಗೆ ಬೇಸರವಾಗದಂತೆ ಎಲ್ಲ ಬಗೆಗಳಿಂದಲೂ ಆತನು ಮೃದುವಾಗಿ ನಡೆದುಕೊಳ್ಳಬೇಕು. ಸಂಭಾಷಣೆ, ಸಮಯದ ಉಳಿತಾಯ, ಸರಿಯಾದ ಗ್ರಂಥಪೂರೈಕೆ, ಸಣ್ಣಪುಟ್ಟ ಸಹಾಯ ಇತ್ಯಾದಿ ಹಂತಗಳಲ್ಲಿ ಅವನು ಉತ್ಸಾಹಶಾಲಿಯಾಗಿರಬೇಕು. ವಿದ್ವಾಂಸರು ಅಪೇಕ್ಷಿಸಿದಲ್ಲಿ ಹಸ್ತಪ್ರತಿಯ ಝೆರಾಕ್ಸ್, ಫೋಟೋಸ್ಟ್ಯಾಟ್, ಮೈಕ್ರೋಫಿಲ್ಮ್, ಇನ್ನೂ ಅವಶ್ಯವೆನಿಸಿದರೆ ಕೈಬರಹದ ಪ್ರತಿಯನ್ನು ಮಾಡಿಸಿಕೊಡುವ ಕೆಲಸ ಇವನದಾಗಿರುತ್ತದೆ. ಹಸ್ತಪ್ರತಿಯನ್ನು ಬೇರೆ ಊರಿಗೆ ಕಳಿಸುವ ವಿಷಯದಲ್ಲಿ ತುಂಬ ಎಚ್ಚರವಹಿಸುವುದು ಅವಶ್ಯವಿದೆ. ಒಂದೇ ಹಸ್ತಪ್ರತಿ ಇದ್ದರೆ ಕಳಿಸಲೇಬಾರದು. ಒಂದಕ್ಕಿಂತ ಹೆಚ್ಚು ಹಸ್ತಪ್ರತಿಗಳಿದ್ದರೆ ಅಪೇಕ್ಷಿಸುವ ವಿದ್ವಾಂಸನು ದುಡಿಯುತ್ತಿರುವ ಸಂಸ್ಥೆಯನ್ನು ಜವಾಬ್ದಾರಿ ಮಾಡಿ, ಹಸ್ತಪ್ರತಿಯನ್ನು ಕಳಿಸಬೇಕು. ಹಾಗೆ ಕಳಿಸುವಾಗ ಹಸ್ತಪ್ರತಿಯ ಪುಟ ಸಂಖ್ಯೆ, ಸ್ಥಿತಿ ಇತ್ಯಾದಿ ವಿವರಗಳನ್ನು ಪರಿಶೀಲಿಸುವುದು ಅವಶ್ಯವಿದೆ. ಈಗ ಇನ್‌ಶೂರ ಮಾಡಿಸಿ ಕಳಿಸುವುದು ಸರಿಯಾದ ಕ್ರಮವೆನಿಸುತ್ತದೆ. ಈ ಸಂದರ್ಭದಲ್ಲಿ ಮರಳಿಸುವ ನಿರ್ದಿಷ್ಟ ಅವಧಿಯನ್ನು ಸೂಚಿಸಬೇಕು. ಇಲ್ಲದಿದ್ದರೆ ವಿದ್ವಾಂಸರು ಬೇರೆ ಕೆಲಸಗಳಲ್ಲಿ ತೊಡಗಿ, ತಮಗೆ ಬಿಡುವು ದೊರೆತಾಗ ಇಲ್ಲವೆ ಅಗತ್ಯವೆನಿಸಿದಾಗ ಆ ಕಟ್ಟನ್ನು ಬಿಚ್ಚುತ್ತಾರೆ. ಹೀಗಿ ಹಸ್ತಪ್ರತಿ ಹೊರಗೆ ಹೋಗಿ ನಿಷ್ಪ್ರಯೋಜಕ ದಿನಗಳನ್ನು ಕಳೆಯದಂತೆ ಎಚ್ಚರವಹಿಸಬೇಕು. ಅವಧಿ ಮೀರುವ ಮೊದಲೇ ಓಲೆ ಬರೆದು, ಮೊದಲು ಸೂಚಿಸಿದ ದಿನವನ್ನು ನೆನಪಿಸಬೇಕು. ಪದೇಪದೇ ಪತ್ರ ಬರೆದು ಹಸ್ತಪ್ರತಿಯನ್ನು ಮರಳಿ ಪಡೆಯಬೇಕು.

ತನ್ನ ಸಂಸ್ಥೆಯ ವಿದ್ವಾಂಸರು ಬೇರೆ ಸಂಸ್ಥೆಯ ಹಸ್ತಪ್ರತಿಯನ್ನು ಅಪೇಕ್ಷಿಸಿದ ಪಕ್ಷದಲ್ಲಿ ಬರೆದು ತರಿಸಿಕೊಡುವ ವ್ಯವಸ್ಥೆ ಮಾಡಬೇಕು. ಈ ಸಂದರ್ಭದಲ್ಲಿ ಸಿಬ್ಬಂದಿಗೆ ಯಾವ ಹಸ್ತಪ್ರತಿ ಯಾವ ಸಂಸ್ಥೆಯಲ್ಲಿದೆ? ಯಾವ ಸೂಚಿ ಈ ಸಂದರ್ಭದಲ್ಲಿ ನೆರವಾಗುತ್ತದೆ? ಎಂಬ ತಿಳುವಳಿಕೆ ಅಗತ್ಯ. ಉದಾ: ವಿದೇಶದಲ್ಲಿರುವ ಕನ್ನಡ ಹಸ್ತಪ್ರತಿಗಳನ್ನು ಹುಡುಕಿಕೊಡುವಲ್ಲಿ ಪಿಂಟರ್‌ನಿರಯ ಅವರ "A Catalogue of South Indian manuscripts", ಜೆ. ಬಿ. ಪಿಯರ್‌ಸನ್ ಅವರ "Oriental manuscripts in Europe and North America" ಮೊದಲಾದ ಸೂಚಿಗಳು ನೆರವಾಗುತ್ತವೆ ಎಂಬಂಥ ವಿಷಯಗಳು ಇವನಿಗೆ ಗೊತ್ತಿರಬೇಕು, ಮತ್ತು ಇವುಗಳ ಸಹಾಯದಿಂದ ಅಷ್ಟು ದೂರದ ಹಸ್ತಪ್ರತಿಗಳ ಝೆರಾಕ್ಸ್, ಫೋಟೋಸ್ಟ್ಯಾಟ್, ಮೈಕ್ರೋ ಫಿಲ್ಮ್ ಪ್ರತಿಗಳನ್ನು ತರಿಸಿಕೊಡುವ ಪ್ರಯತ್ನ ಮಾಡಬೇಕು,

ಹೀಗೆ ಹಸ್ತಪ್ರತಿಗಳನ್ನು ಪೂರೈಸುವುದಲ್ಲದೆ ಅಭ್ಯಾಸಿಗೆ ಬೇಕಾಗುವ ಮುದ್ರಿತ ಗ್ರಂಥ ಮತ್ತು ಅಗತ್ಯವಿಷಯಗಳನ್ನು ಪೂರೈಸುವ ಸಾಮರ್ಥ್ಯವಿದ್ದರೆ ಇನ್ನೂ ಅನುಕೂಲ. ಉದಾ: ಒಬ್ಬ ಸಂಶೋಧಕನಿಗೆ ತಿಗಳಾರಿಲಿಪಿ, ಮೋಡಿಲಿಪಿಯ ಬಗ್ಗೆ ವಿವರ ಬೇಕಿದ್ದರೆ ತನ್ನ ಭಾಂಡಾರದಲ್ಲಿರುವ ಅಂಥ ಲಿಪಿಯಲ್ಲಿ ಬರೆದ ಹಸ್ತಪ್ರತಿಯನ್ನು ಹುಡುಕಿಕೊಡುವ, ಪತ್ರಿಕೆ-ಪುಸ್ತಕಗಳಲ್ಲಿ ಈ ಬಗ್ಗೆ ಬಂದಿರುವ ಲೇಖನ ಮಾಹಿತಿ ಪೂರೈಸುವ ಕೆಲಸ ಮಾಡಬೇಕು.

ಸೂಚಿಕಾರ್ಡು, ಸೂಚಿಗ್ರಂಥಗಳನ್ನು ಸಿದ್ಧಪಡಿಸುವ ತಾಂತ್ರಿಕ ವಿಭಾಗದಂತೆ ನಿರಂತರ ವಿದ್ವತ್ ಕಾರ್ಯದಲ್ಲಿ ತೊಡಗುತ್ತಿರುವುದೆಂದರೆ ಸಂಪಾದನ ವಿಭಾಗ. ಅದು ಗ್ರಂಥಾಲಯವಿಜ್ಞಾನದ ಶೈಕ್ಷಣಿಕ ಶಾಖೆಯಾದರೆ, ಇದು ಗ್ರಂಥವಿಷಯಜ್ಞಾನದ ಶೈಕ್ಷಣಿಕ ಶಾಖೆಯಾಗಿದೆ. ಈವೆರಡೂ ಸಬಲವಾದಷ್ಟೂ ಹಸ್ತಪ್ರತಿಭಾಂಡಾರ ಸಿದ್ಧಿ-ಪ್ರಸಿದ್ಧಿ ಪಡೆಯುತ್ತದೆ. ಇವುಗಳಲ್ಲಿ ಸಂಪಾದನ ವಿಭಾಗವೆಂಬುದು ಗ್ರಂಥಸಂಪಾದನಾ ಶಾಸ್ತ್ರದ ಆನ್ವಯಿಕ ಚಟುವಟಿಕೆಯಲ್ಲಿ ತೊಡಗಿರುವ ವಿದ್ವಾಂಸರ ನೆಲೆಯಾಗಿರುತ್ತದೆ. ಇವರು ತಮ್ಮ ಸಂಸ್ಥೆಯಲ್ಲಿರುವ ಉತ್ತಮೋತ್ತಮ ಗ್ರಂಥಗಳ ಹಸ್ತಪ್ರತಿಗಳನ್ನು ಆಯ್ದುಕೊಂಡು ಪರಿಷ್ಕರಣಕಾರ್ಯ ಮುನ್ನಡೆಸಬೇಕಾಗುತ್ತದೆ. ಕೆಲವು ಭಾಂಡಾರಗಳು ಕೇವಲ ಹಸ್ತಪ್ರತಿ ಸಂಗ್ರಹಕಾರ್ಯಕ್ಕೆ ಸೀಮಿತವಾಗಿರುತ್ತವೆ. ಇವು ಸಂಗ್ರಹಿಸಿದ ಪ್ರತಿಗಳನ್ನು ಬಳಸಿಕೊಂಡು ಅನ್ಯಸಂಸ್ಥೆಗಳು, ಅನ್ಯವ್ಯಕ್ತಿಗಳು ಸಂಪಾದನಕಾರ್ಯ ನಿರ್ವಹಿಸಿ ಖ್ಯಾತಿಪಡೆಯುತ್ತಿವೆ. ಉದಾ : ಪಂಪಭಾರತದ ಹಸ್ತಪ್ರತಿ ಮೈಸೂರು ಅರಮನೆ ಭಾಂಡಾರ, ಪುಣೆಯ ಭಾಂಡಾರಕರ ಓರಿಯಂಟಲ್ ರೀಸರ್ಚ ಇನ್‌ಸ್ಟಿಟ್ಯೂಟ್, ಆರಾಪಟ್ಟಣದ ಜೈನಸಿದ್ಧಾಂತ ಭವನಗಳಲ್ಲಿದ್ದವು. ಇವುಗಳನ್ನು ಎರವಲು ಪಡೆದು ಕನ್ನಡ ಸಾಹಿತ್ಯಪರಿಷತ್ತು ಪಂಪಭಾರತದ ಪರಿಷ್ಕರಣ ಕಾರ್ಯವನ್ನು ಪೂರೈಸಿತು. ಇದಕ್ಕೆ ವಿರುದ್ಧವೆನ್ನುವಂತೆ ಮದ್ರಾಸ ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ಸ ಲೈಬ್ರರಿ ತನ್ನಲ್ಲಿರುವ ಹಸ್ತಪ್ರತಿಗಳನ್ನು ಬಳಸಿಕೊಂಡು ಲೋಕೋಪಕಾರ ಮೊದಲಾದ ಕೃತಿಗಳನ್ನು ಪ್ರಕಟಿಸಿತು. ಇದರ ಅರ್ಥ ಅನ್ಯರಿಗೆ ಹಸ್ತಪ್ರತಿ ಎರವಲು ಕೊಡಬಾರದೆಂದಲ್ಲ, ತಾನೇ ವಿದ್ವಾಂಸರನ್ನು ನಿಯಮಿಸಿಕೊಂಡು. ಹಸ್ತಪ್ರತಿಗಳ ಸಂಗ್ರಹ-ಸಂರಕ್ಷಣೆಯೊಂದಿಗೆ ಸಂಸ್ಕರಣಕಾರ್ಯವನ್ನೂ ಜೊತೆಜೊತೆಗೆ ಮಾಡಬೇಕು. ಇದರಿಂದ ಹಸ್ತಪ್ರತಿಭಾಂಡಾರ ಕೇವಲ ಸಂಗ್ರಹಾಲಯವಾಗಿ ಉಳಿಯದೆ, ಜೀವಂತ ವಿದ್ಯಾಕೇಂದ್ರವಾಗಿ ಬೆಳೆಯುತ್ತದೆ. ಇಲ್ಲಿ ವ್ಯಕ್ತಿ, ಜಂಟಿ, ಸಂಸ್ಥೆ - ಹೀಗೆ ಮೂರು ಬಗೆಯ ಸಂಪಾದನ ಕೆಲಸ ನಡೆಸಬಹುದು. ಮದ್ರಾಸದ ಪ್ರಾಚ್ಯ ಹಸ್ತಪ್ರತಿಭಾಂಡಾರ, ಮೈಸೂರಿನ ಪ್ರಾಚ್ಯಸಂಶೋಧನ ಸಂಸ್ಥೆ ಮತ್ತು ಕನ್ನಡ ಅಧ್ಯಯನಸಂಸ್ಥೆ, ಧಾರವಾಡದ ಕನ್ನಡ ಅಧ್ಯಯನಪೀಠ ಮತ್ತು ಕನ್ನಡ ಸಂಶೋಧನ ಸಂಸ್ಥೆಗಳು ಈ ಕೆಲಸವನ್ನು ಮಾಡುತ್ತಲಿರುವುದು ಸಾರ್ಥಕ ಪ್ರಯತ್ನವೆಂದೇ ಹೇಳಬೇಕು. ಮಿಕ್ಕ

ಭಾಂಡಾರಗಳು ಸೂಕ್ತಸಂಪಾದಕರನ್ನು ನಿಯಮಿಸಿಕೊಂಡು, ತಮ್ಮ ಹಸ್ತಪ್ರತಿ ಸಂಪತ್ತಿನ ಪ್ರಯೋಜನ ವರ್ಧಿಸುವುದರ ಕಡೆಗೆ ಗಮನಕೊಡಬೇಕಾಗಿದೆ.

ಮೇಲೆ ವಿವರಿಸಿದ ತಾಂತ್ರಿಕ, ಪರಿಚಲನ ಮತ್ತು ಸಂಪಾದನ- ಈ ಮೂರು ಶಾಖೆಗಳು ಸಾಮಾಜಿಕ ಪ್ರಯೋಜನದೃಷ್ಟಿಯಿಂದ ಮುಖ್ಯವಾದುವು. ಇವೂ ಒಳಗೊಂಡಂತೆ ಮಿಕ್ಕವುಗಳ ಕಡೆಗೆ ವಿಶೇಷ ಗಮನ ಕೊಟ್ಟರೆ ಹಸ್ತಪ್ರತಿ ಭಾಂಡಾರದ ಪ್ರಯೋಜನ ಖಂಡಿತ ವರ್ಧಿಸುತ್ತದೆ.

## ಮುಂದೇನು?

ಇಂದು ಜ್ಞಾನದ ನವೀಕರಣ ಮತ್ತು ಮುದ್ರಿತ ಪುಸ್ತಕಗಳ ಸೌಲಭ್ಯದಿಂದಾಗಿ ಹಸ್ತಪ್ರತಿಗಳಲ್ಲಿಯ ಜ್ಞಾನದ ಬಗ್ಗೆ, ಹಸ್ತಪ್ರತಿಕಟ್ಟುಗಳ ಅಭ್ಯಾಸದ ಬಗ್ಗೆ ಜನರಲ್ಲಿ ದಿನೇದಿನೇ ನಿರಾಸಕ್ತಿ ಬೆಳೆಯುತ್ತಲಿದೆ. ಈ ಬಗೆಯ ತೀವ್ರನಿರಾಸಕ್ತಿ ಕಾರಣವಾಗಿ ಬೇಡಾದ ವಸ್ತುಗಳಂತೆ ಅವು ಸಾಮಾನ್ಯರ ವಶದಲ್ಲಿ ಹಾಳಾಗುತ್ತ ನಡೆದಿವೆ.

ವಿದ್ವಾಂಸರ ವಲಯಕ್ಕೆ ಬಂದರೆ, ಹಸ್ತಪ್ರತಿಗಳನ್ನು ಓದುವವರ ಸಂಖ್ಯೆ ಕ್ಷೀಣಿಸುತ್ತ ನಡೆದಿದೆ, ಮುದ್ರಿತ ಪುಸ್ತಕಗಳನ್ನು ಓದಿಯೇ ಬೆಳೆದ ಇವರಿಗೆ ಹಸ್ತಪ್ರತಿ ವಾಚನದ ತರಬೇತಿ ಯಾವ ಹಂತದಲ್ಲಿಯೂ ಸಾಧ್ಯವಾಗಲಿಲ್ಲ. ಪ್ರೌಢಾವಸ್ಥೆಯಲ್ಲಿ ಆ ಕ್ಷೇತ್ರಕ್ಕೆ ಇವರು ಆಕರ್ಷಿತರಾಗುವುದು ಕಡಿಮೆ. ಹೀಗಾಗಿ ಶ್ರಮವಹಿಸಿ, ನಕಲುಪ್ರತಿ ಸಿದ್ಧಮಾಡಲು ಲಿಪಿಕಾರರು ಮುಂದೆ ಬರುತ್ತಿಲ್ಲ. ಭಿನ್ನಪಾಠಗಳನ್ನು ಸಂಗ್ರಹಿಸಿ, ಶುದ್ಧಪಾಠ ನಿರ್ಣಯಿಸಲು ಬಹುಜನ ವಿದ್ವಾಂಸರೂ ಸಿದ್ಧರಿಲ್ಲ.

'ಗ್ರಂಥಾಲಯ ವಿಜ್ಞಾನ' ಇಲಾಖೆಯು ಮುದ್ರಿತ ಗ್ರಂಥಗಳ ಕಡೆಗೆ ಹೆಚ್ಚು ಒತ್ತುಕೊಟ್ಟ ಕಾರಣ, ಗಮನ ಕೊಡಬೇಕಾದ ಇವರಿಂದಲೂ ಅವು ಕಡೆಗಣಿಸಲ್ಪಟ್ಟಿವೆ. ಬಹಳೆಂದರೆ ಇವುಗಳನ್ನು ಕಾಯಲು ಒಬ್ಬ ಜವಾನ ಇಲ್ಲವೆ ಒಬ್ಬ ಕಾರಕೂನ, ಬಹಳೆಂದರೆ ಅಪ್ರಯೋಜಕ ಜ್ಞಾನದ ಒಬ್ಬ ಪಂಡಿತ ಸಾಕೆಂಬ ವಾತಾವರಣ ನಿರ್ಮಾಣವಾಗಿದೆ. ಹೀಗಾಗಿ 'ಸಂಪ್ರದಾಯಸ್ಥ ಪಂಡಿತರ ಜಗತ್ತು' ಎಂಬ ಟೀಕೆಗೆ ಒಳಗಾಗಿ, ಈ ಶೈಕ್ಷಣಿಕ ಚಟುವಟಿಕೆ ಒಂದು ದ್ವೀಪದಂತೆ ಉಳಿದುಬಿಟ್ಟಿದೆ.

ಹೀಗೆ ಜನತೆ, ವಿದ್ವಜ್ಜನತೆ, ಗ್ರಂಥಾಲಯವಿಜ್ಞಾನಿ – ಈ ಮೂವರಿಂದಲೂ ಈ ಪರಂಪರಾಗತ ಸಂಪತ್ತು ಅಲಕ್ಷ್ಯಕ್ಕೆ ಗುರಿಯಾಗಿದೆ. ಈಗ ಈ ಮೂವರೂ ಏಕಕಾಲಕ್ಕೆ ಎಚ್ಚರಾಗಿ, ಈ ಹಿಂದೆ 'ಗ್ರಂಥಾಲಯ ಚಳುವಳಿ' ಅಸ್ತಿತ್ವಕ್ಕೆ ಬಂದು, ಗ್ರಂಥಾಲಯದ ಸ್ಥಿತಿಯನ್ನು ಎತ್ತರಿಸಿದಂತೆ, ಅದಕ್ಕೆ ಜಾಗತಿಕ ಪ್ರತಿಷ್ಠೆಯನ್ನು ತಂದುಕೊಟ್ಟಂತೆ ಈ ಕ್ಷೇತ್ರದ ಬಗ್ಗೆಯೂ ಒಂದು ಚಳುವಳಿ ನಡೆಯಬೇಕಾಗಿದೆ. ಇದರ ಅಂಗವಾಗಿ, ಹಸ್ತಪ್ರತಿ ಸಂಗ್ರಹಣ, ಸಂರಕ್ಷಣ. ಹಸ್ತಪ್ರತಿಶಾಸ್ತ್ರದ ಅಳವಡಿಕೆ, ಗ್ರಂಥಸಂಪಾದನಕಾರ್ಯ, ಯಂತ್ರೋಪಕರಣಗಳ ಬಳಕೆ, ಹಸ್ತಪ್ರತಿಭಾಂಡಾರದ

ನವೀಕರಣ, ಹಸ್ತಪ್ರತಿ ಅಧ್ಯಯನದ ತರಬೇತಿ ವರ್ಗ, ರಾಜ್ಯಹಸ್ತಪ್ರತಿ ಇಲಾಖೆಯ ಸ್ಥಾಪನೆ– ಈ ಕೆಲಸಗಳು ನಡೆಯುವುದು ಅವಶ್ಯವಿದೆ.

## ಸಂಗ್ರಹಣ

ಬೇರೆ ಬೇರೆ ಪ್ರದೇಶಗಳಲ್ಲಿ ಉಪೇಕ್ಷಿತ ಇಲ್ಲವೆ ಸಂರಕ್ಷಿತ ರೂಪದಲ್ಲಿ ಉಳಿದುಕೊಂಡಿರುವ ಹಸ್ತಪ್ರತಿಗಳನ್ನು ಊರಿಂದೂರಿಗೆ ಸಂಚರಿಸಿ ಒಂದೂ ಬಿಡದಂತೆ ಸಂಗ್ರಹಿಸುವುದು ಇಂದಿನ ಬಹುಮುಖ್ಯ ಅಗತ್ಯವಾಗಿದೆ. ಈ ಮೊದಲು ಜರುಗುತ್ತಲಿದ್ದ ಸಂಗ್ರಹಕಾರ್ಯ ತನ್ನ ಉತ್ಸಾಹ ಕಳೆದುಕೊಳ್ಳುತ್ತ ನಡೆದುದು ವಿಷಾದದ ಸಂಗತಿಯೇ ಸರಿ. ಕೇವಲ ಕರ್ನಾಟಕಕ್ಕೆ ಸೀಮಿತವಾಗಿ ಅಲ್ಲ, ಹೊರನಾಡಿನಲ್ಲಿಯೂ ಉಳಿದುಕೊಂಡಿರುವ ಹಸ್ತಪ್ರತಿಗಳ ಸಂಗ್ರಹದ ಕಡೆಗೂ ನಾವು ಕೈಚಾಚಬೇಕಾಗಿದೆ. ಇದಕ್ಕಾಗಿ ಒಂದು ವ್ಯಾಪಕವಾದ ಯೋಜನೆಯನ್ನು ಸಿದ್ಧಪಡಿಸಬೇಕು. ವಾಹನ, ಸಿಬ್ಬಂದಿ ಸೌಲಭ್ಯದಿಂದ ಮಾತ್ರ ಈ ಕ್ಷೇತ್ರಕಾರ್ಯ ಸಾಧ್ಯ. ವಾಹನದಲ್ಲಿ ಫೋಟೋ, ಮೈಕ್ರೋಫಿಲ್ಮ್ ಇತ್ಯಾದಿ ಸೌಲಭ್ಯ ಇರುವುದು ಅವಶ್ಯ. ಸರಕಾರವು ಈ ಕೆಲಸಕ್ಕೆ ಪೂರಕವೆನ್ನುವಂತೆ 'ಹಸ್ತಪ್ರತಿಗಳು ಸರಕಾರದ ಆಸ್ತಿ' ಎಂಬ ಆದೇಶವನ್ನು ಹೊರಡಿಸಬೇಕು.

ವ್ಯಕ್ತಿಗಳ ವಶದಲ್ಲಿ, ಸಾಮಾಜಿಕ – ಧಾರ್ಮಿಕ ಕೇಂದ್ರಗಳಲ್ಲಿ ಬಹುಕಾಲದ ಹಿಂದೆಯೇ ಸಂಗ್ರಹಿಸಲ್ಪಟ್ಟು, ಸಂರಕ್ಷಣರೂಪದಲ್ಲಿರುವ ಹಸ್ತಪ್ರತಿಗಳನ್ನೂ ಸಂಗ್ರಹಿಸಬೇಕು. ಅವರು ಕೊಡಲು ನಿರಾಕರಿಸಿ, ಇಟ್ಟುಕೊಳ್ಳುವುದಿದ್ದರೆ, ಅವುಗಳ ರಕ್ಷಣೆ – ಸೂಚೀಕರಣ – ಸಂಪಾದನ ಕಾರ್ಯ ಮೊದಲಾದ ನಿಯಮಗಳಿಗೆ ಒಪ್ಪಿ ಸರಕಾರಕ್ಕೆ ಮುಚ್ಚಳಿಕೆ ಬರೆದುಕೊಡಬೇಕು. ಹೀಗೆ ಮುಚ್ಚಳಿಕೆ ಬರೆಯಿಸಿಕೊಂಡ ಬಳಿಕವೂ ಈ ಹಸ್ತಪ್ರತಿಗಳ ಫೋಟೋ ಇಲ್ಲವೆ ಮೈಕ್ರೋಫಿಲ್ಮ್ ಪ್ರತಿ ಮಾಡಿಸಿಕೊಳ್ಳಬೇಕು.

ಇದಲ್ಲದೆ ಹೊರನಾಡಿನ ಸರಕಾರಿ ಸಂಸ್ಥೆಗಳಾದ ಮದ್ರಾಸಿನ 'ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ–ಅಡ್ಯಾರ ಪುಸ್ತಕಾಲಯ, ತಂಜಾವೂರಿನ ಮಹಾರಾಜಾ ಸರ್ಫೋಜಿ ಸರಸ್ವತಿಭಾಂಡಾರ, ಹೈದರಾಬಾದಿನ ಸರಕಾರೀ ಪ್ರಾಚ್ಯ ಹಸ್ತಪ್ರತಿ ಭಾಂಡಾರ ಹಾಗೂ ಸಂಶೋಧನ ಕೇಂದ್ರ ಮತ್ತು ಉಸ್ಮಾನಿಯಾ ವಿಶ್ವವಿದ್ಯಾಲಯದ ಕನ್ನಡ ವಿಭಾಗ, ಪುಣೆಯ ಭಾಂಡಾರಕರ ರೀಸರ್ಚ್ ಇನ್‌ಸ್ಟಿಟ್ಯೂಟ್, ಕೊಲ್ಹಾಪೂರ ರಾಜಾರಾಮ ಕಾಲೇಜುಗಳಲ್ಲಿಯ, ಸಾರ್ವಜನಿಕ ಸಂಸ್ಥೆಗಳಾದ ಆರಾ ಪಟ್ಟಣದ ದೇವಕುಮಾರ ಓರಿಯಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟ್, ಮಹಾರಾಷ್ಟ್ರದ ಬಾಹುಬಲಿ ಬ್ರಹ್ಮಚರ್ಯಾಶ್ರಮ, ಕಾರಂಜಾ, ಮುಂಬೈಯ ಪನ್ನಾಲಾಲ ದಿಗಂಬರ ಜೈನ ಸರಸ್ವತಿಭಾಂಡಾರ ಈ ಮೊದಲಾದ ಕೇಂದ್ರಗಳಲ್ಲಿ ರಕ್ಷಿಸಲ್ಪಟ್ಟಿರುವ ಕನ್ನಡ

ಪ್ರತಿಗಳನ್ನು ಪಡೆಯಬೇಕು. ಇಲ್ಲವೆ ಫೋಟೋ ತೆಗೆದುಕೊಳ್ಳಬೇಕು. ವಿದೇಶಕ್ಕೆ ಸಂಬಂಧಪಟ್ಟಂತೆ ಲಂಡನ್ನಿನ ಇಂಡಿಯಾ ಆಫೀಸ್ ಲೈಬ್ರರಿ, ಬ್ರಿಟಿಷ್ ರೆಫರೆನ್ಸ್ ಡಿವಿಜನ್, ಬೈಬಲ್ ಸೊಸೈಟಿ, ವೆಲ್‌ಕಮ್ ಇನ್‌ಸ್ಟಿಟ್ಯೂಟ್ ಆಫ್ ಹಿಸ್ಟರಿ ಆಫ್ ಮೆಡಿಸಿನ್, ರಾಯಲ್ ಏಸಿಯಾಟಿಕ್ ಸೊಸೈಟಿ, ಸ್ಕೂಲ್ ಆಫ್ ಓರಿಯಂಟಲ್ ಆ್ಯಂಡ್ ಆಫ್ರಿಕನ್ ಸ್ಟಡೀಜ್, ಆಕ್ಸ್‌ಫರ್ಡ್ ವಿಶ್ವವಿದ್ಯಾಲಯ, ಕೆಂಬ್ರಿಜ್ ವಿಶ್ವ ವಿದ್ಯಾಲಯ, ಅಬರ್ಡಿನ್ ವಿಶ್ವವಿದ್ಯಾಲಯ, ಮೆಂಚೆಸ್ಟರದ ದಿ ಜಾನ್ ರೆಲ್ಯಾಂಡ್ಸ್ ಲೈಬ್ರರಿ, ಬಹುಶಃ ಜರ್ಮನಿಯ ಬಾಸೆಲ್ ಮಿಶನ್‌ದಲ್ಲಿ ಇರುವ ಕನ್ನಡ ಹಸ್ತಪ್ರತಿ ಗಳನ್ನು ಮರಳಿ ಪಡೆಯಬೇಕು. ಸಾಧ್ಯವಾಗದಿದ್ದರೆ ಇವುಗಳ ಫೋಟೋ ತೆಗೆದು ಕೊಳ್ಳಬೇಕು. ಇದರಿಂದ ಬೇರೆ ಬೇರೆಡೆಯಲ್ಲಿ ಉಳಿದಿರುವ ಹಸ್ತಪ್ರತಿಗಳ ನಕಲು ಪ್ರತಿಗಳನ್ನು ನಮ್ಮಲ್ಲಿ ಉಳಿಸಿಕೊಂಡು, ಅವುಗಳಿಗೆ ರಕ್ಷಣೆ ಒದಗಿಸಿದಂತಾಗುತ್ತದೆ. ಹಸ್ತಪ್ರತಿಗಳಿಗೆ ಸಂಬಂಧಿಸಿದಂತೆ ನಡೆಯಬೇಕಾದ ಪ್ರಥಮ ಕಾರ್ಯವಿದು.

## ಸಂರಕ್ಷಣೆ

ಹಸ್ತಪ್ರತಿಗಳನ್ನು ಸಂಗ್ರಹಿಸಿದ ಬಳಿಕ ಮಾಡಬೇಕಾದ ಕಾರ್ಯವೆಂದರೆ ಸಂರಕ್ಷಣೆ. ಬಹಳೆಂದರೆ ಕಪಾಟುಗಳಲ್ಲಿ ಡಾಂಬರ ಗೋಲಿ ಸುರಿದರೆ ಸಂರಕ್ಷಣೆಯ ಕಾರ್ಯ ಮುಗಿಯಲಿಲ್ಲ. ಈ ದೃಷ್ಟಿಯಿಂದ ಮೈಸೂರಿನ ಕನ್ನಡ ಅಧ್ಯಯನಸಂಸ್ಥೆ ಮತ್ತು ಓರಿಯಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟ್ ತುಂಬ ಎಚ್ಚರವಹಿಸುತ್ತಿವೆ. ಇವು ಒಂದು ಬಗೆಯ ದೇಶೀಯ ತೈಲ ಬಳಸುತ್ತಲಿದ್ದು, ಇದು ಎಷ್ಟರಮಟ್ಟಿಗೆ ಪರಿಣಾಮ ಕಾರಿ ಎಂಬುದರ ಬಗ್ಗೆ ಸಂದೇಹವಿದೆ. ಆದುದರಿಂದ ಇದನ್ನು ವಿಜ್ಞಾನಿಗಳಿಂದ ಪರೀಕ್ಷೆಗೆ ಗುರಿಪಡಿಸುವುದು ಲೇಸು. ಇಂಥದೇ ಬೇರೊಂದು ದೇಶಿಯ ತೈಲವನ್ನು ಮೇಲುಕೋಟೆಯ ಸಂಸ್ಕೃತ ಅಕಾಡೆಮಿ ಬಳಸುತ್ತಲಿದ್ದಿತು. ಇತ್ತೀಚೆ ಇದಕ್ಕಿಂತ ಉತ್ತಮವಾದ ಸಿಟ್ರೋನೆಲ್ ತೈಲ (Cetronell Oil) ವನ್ನು ಬಳಸುತ್ತಿದೆ, ಹೀಗಿದ್ದೂ ಎಲ್ಲರೂ ವಿಚಾರಮಾಡಿ ಒಂದು ಅಧಿಕೃತ ತೈಲ ಬಳಸುವುದು ಅವಶ್ಯವಿದೆ. ಇದಲ್ಲದೆ, ಧೂಳು-ಬೂಷ್ಟ, ಕ್ರಿಮಿಗಳ ನಿರ್ಮೂಲನ, ಹವಾನಿಯಂತ್ರಣ ಇತ್ಯಾದಿ ಗಳೆಲ್ಲ ವೈಜ್ಞಾನಿಕವಾಗಿ ಜರುಗಬೇಕಾಗಿದೆ. ಒಬ್ಬೊಬ್ಬರು ತಮತಮಗೆ ತಿಳಿದ ಸರಿಯೋ ತಪ್ಪೋ ವಿಧಾನಗಳನ್ನು ಕೈಬಿಟ್ಟು, ಎಲ್ಲರೂ ಒಂದೇ ಬಗೆಯ ವೈಜ್ಞಾನಿಕ ವಿಧಾನವನ್ನು ಅನುಸರಿಸುವುದು ಅವಶ್ಯವಿದೆ.

ಇದೇ ಸಂದರ್ಭದಲ್ಲಿ ಹೇಳಬೇಕಾದ ಇನ್ನೊಂದು ಅಂಶವೆಂದರೆ, ರಕ್ಷಣೆಯ ದೃಷ್ಟಿಯಿಂದ ಏಕಪ್ರತಿರೂಪದಲ್ಲಿರುವ ಎಲ್ಲ ಹಸ್ತಪ್ರತಿಗಳನ್ನು ಮೈಕ್ರೋಫಿಲ್ಮ್, ಫೋಟೋಸ್ಟ್ಯಾಟ್ ಇಲ್ಲವೆ ಝೆರಾಕ್ಸ್ ಮಾಡಿಸಬೇಕು. ಇಲ್ಲದಿದ್ದರೆ ಇದ್ದೊಂದು ಪ್ರತಿಯೂ ನಾಶವಾಗಿ ಒಂದು ಕೃತಿಯನ್ನು ಶಾಶ್ವತ ಕಳೆದುಕೊಂಡಂತಾಗುತ್ತದೆ.

ಮೊದಲನೆಯ ನಾಗವರ್ಮನ ಕಾದಂಬರಿ, ಎರಡನೆಯ ನಾಗವರ್ಮನ ವರ್ಧಮಾನ ಪುರಾಣ, ಚೌಂಡರಸನ ನಳಚರಿತ್ರೆ, ಮಧುರನ ಧರ್ಮನಾಥಪುರಾಣ, ಮಹಾಲಿಂಗ ಸ್ವಾಮಿಯ ಬಾಲರಾಮನ ಸಾಂಗತ್ಯ, ಲಿಂಗಣಾರಾಧ್ಯನ ವೃತ್ತಿಯನ್ನೊಳಗೊಂಡ ಶಬ್ದಮಣಿದರ್ಪಣಗಳಂಥ ಪ್ರಸಿದ್ಧಕೃತಿಗಳನ್ನು ಬಿಟ್ಟರೆ, ಅನೇಕ ಅಪ್ರಸಿದ್ಧ ಕೃತಿಗಳೂ ಏಕಪ್ರತಿ ರೂಪದಲ್ಲಿ ಸಿಗುತ್ತವೆ. ಇವುಗಳನ್ನು ಕಂಡುಹಿಡಿದು, ದ್ವಿಪ್ರತಿ ಯಲ್ಲಿ ರಕ್ಷಿಸಬೇಕು.

## ಹಸ್ತಪ್ರತಿಶಾಸ್ತ್ರದ ಅಳವಡಿಕೆ

ಇಂದು ಗ್ರಂಥಾಲಯವಿಜ್ಞಾನ ಬೆಳೆದು, ಹೊಸ ಹೊಸ ವಿಧಾನಗಳನ್ನು ಅಲ್ಲಿ ಅಳವಡಿಸಲಾಗುತ್ತಿದೆ. ಅದರಂತೆ ಹಸ್ತಪ್ರತಿಭಾಂಡಾರದಲ್ಲಿಯೂ ಸೂಚೀಕರಣ ಕ್ರಿಯೆ, ವರ್ಗೀಕರಣಕ್ರಿಯೆಗಳಿಗಾಗಿ ಕಾರ್ಡುಗಳನ್ನು ಬಳಸುವುದು, ಇವುಗಳನ್ನು ಲೇಖಕಸೂಚಿ, ಶೀರ್ಷಿಕೆಸೂಚಿ, ವಿಷಯಸೂಚಿಯೆಂದು ಕ್ಯಾಬಿನೆಟ್‌ದಲ್ಲಿ ಹೊಂದಿಸು ವುದು, ಈ ಮೂಲಕ ಅಭ್ಯಾಸಿಗಳಿಗೆ ತಕ್ಷಣ ಗ್ರಂಥ ಸಿಗುವ ಅನುಕೂಲತೆಯನ್ನುಂಟು ಮಾಡುವುದು, ಇಲ್ಲಿ ಮೊದಲು ನಡೆಯಬೇಕಾಗಿದೆ. ಒಂದು ಕೃತಿ ಬೇಕಾದರೆ ದೊಡ್ಡ ಕಡತವನ್ನು ತಿರುವಿ ಹಾಕುವ ವಿಧಾನ ತಕ್ಷಣ ನಿಲ್ಲಬೇಕು.

ಹಸ್ತಪ್ರತಿಭಾಂಡಾರಗಳು ಆಗೊಮ್ಮೆ ಈಗೊಮ್ಮೆ ಸೂಚಿಗ್ರಂಥಗಳನ್ನು ಪ್ರಕಟಿಸುತ್ತಿವೆ. ೪೦ ವರ್ಷಗಳಷ್ಟು ಪೂರ್ವದಲ್ಲಿ ಪ್ರಕಟವಾದ ಮದ್ರಾಸ್ ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ಸ ಲೈಬ್ರರಿಯ ೭ ಕೆಟಲಾಗಗಳನ್ನು ನೋಡಿದರೆ, ಈಗ ಇಂಥ ಕೆಲಸ ತನ್ನ ವೇಗವನ್ನು ಕಳೆದುಕೊಳ್ಳುತ್ತಲಿದೆಯೆಂದೇ ಹೇಳಬೇಕು. ಇತ್ತೀಚೆ ವೀರಶೈವಮಠಗಳು ಈ ಬಗ್ಗೆ ಗಮನಕೊಟ್ಟಿರುವುದು ಸಂತೋಷದ ಸಂಗತಿ ಯಾದರೂ ಇತರ ಸಾರ್ವಜನಿಕ ಸಂಸ್ಥೆಗಳೂ, ಸರಕಾರಿ ಸಂಸ್ಥೆಗಳೂ ಹೊಸ ಉತ್ಸಾಹ ದಿಂದ ಈ ಕೆಲಸ ಮಾಡಬೇಕಾಗಿದೆ. ಕಾಲಬದ್ಧಯೋಜನೆ ಹಾಕಿಕೊಂಡು ಇವು ತಮ್ಮ ವಶದಲ್ಲಿರುವ ಎಲ್ಲ ಹಸ್ತಪ್ರತಿಗಳ "ವಿವರಣಾತ್ಮಕ ಸೂಚಿ"ಯನ್ನು, ಸಾಧ್ಯ ವಾಗದಿದ್ದರೆ ಯಾದಿ ರೂಪದ 'ಸೂಚಿ'ಯನ್ನು ಪ್ರಕಟಿಸಬೇಕು. ಈ ಸೂಚಿಗಳ ಸಹಾಯದಿಂದ 'ಸಮಗ್ರಸೂಚಿ' (Catalogus Catalogorum)ಯನ್ನು ರೂಪಿಸುವ ಬೃಹತ್ ಯೋಜನೆಯನ್ನು ನಾವು ಕೈಗೆತ್ತಿಕೊಳ್ಳಬೇಕಾಗಿದೆ.

ಈಗ ಒಂದೊಂದು ಸಂಸ್ಥೆಯ ಸೂಚಿಸ್ವರೂಪ ಒಂದೊಂದು ಬಗೆಯಾಗಿದೆ. ಎಲ್ಲ ಸಂಸ್ಥೆಗಳು ಸಾಮೂಹಿಕವಾಗಿ ಸಮಾಲೋಚಿಸಿ, ಅದಕ್ಕೆ ಸರ್ವಮಾನ್ಯ ಸ್ವರೂಪ ವನ್ನು ನಿರ್ದಿಷ್ಟಪಡಿಸಬೇಕು. ಆಗ ಮಾತ್ರ ಇದು ಒಂದು ವಿಜ್ಞಾನವಾಗಿ, ಕ್ರಮ ಬದ್ಧ ರೀತಿಯಲ್ಲಿ ಬೆಳೆಯುತ್ತದೆ.

## ಗ್ರಂಥಸಂಪಾದನ–ಪ್ರಶಸ್ತಿಸಂಗ್ರಹ

ಇಂದು ಆಧುನಿಕ ಸಾಹಿತ್ಯದ ಆಕರ್ಷಣೆ ಕಾರಣವಾಗಿ ಪ್ರಾಚೀನಸಾಹಿತ್ಯದ ಅಧ್ಯಯನ, ಅದಕ್ಕಿಂತ ಪ್ರಾಚೀನ ಕೃತಿಗಳ ಪರಿಷ್ಕರಣ ತೀರ ಅಲಕ್ಷ್ಯಕ್ಕೆ ಗುರಿಯಾಗಿದೆ. ಸಾಹಿತ್ಯದೃಷ್ಟಿಯಿಂದ ಮುಖ್ಯವಾಗಿರುವ ಹರಿಶ್ಚಂದ್ರಕಾವ್ಯ, ಜೈಮಿನಿ ಭಾರತಗಳಂಥ ಕೃತಿಗಳು ಅನೇಕ ಆವೃತ್ತಿಗಳಾಗಿ ಪ್ರಕಟಗೊಂಡಿವೆ. ಅವುಗಳ ಸಂಗ್ರಹಗಳೂ ಬೆಳಕು ಕಂಡಿವೆ. ಸಾಹಿತ್ಯೇತರ ಕೃತಿಗಳಿಗೆ ಈ ಪುಣ್ಯ ಇನ್ನೂ ಪ್ರಾಪ್ತವಾಗಿಲ್ಲ. ವೈದ್ಯಶಾಸ್ತ್ರ, ಕೃಷಿಶಾಸ್ತ್ರ, ಜ್ಯೋತಿಷ್ಯಶಾಸ್ತ್ರಗಳಂತ ಶಾಸ್ತ್ರ ಕೃತಿಗಳೂ ಟೀಕೆ-ವ್ಯಾಖ್ಯಾನ ಗ್ರಂಥಗಳೂ ಹಸ್ತಪ್ರತಿಯಲ್ಲಿ ಕೊಳೆಯುತ್ತ ಬಿದ್ದಿವೆ. ಇವೆಲ್ಲ ಬೆಳಕು ಕಾಣುವುದಕ್ಕಾಗಿ ಪ್ರಾಚೀನಕೃತಿಗಳನ್ನು ಒಂದೂ ಬಿಡದಂತೆ ಅಚ್ಚಿಸುವ ಬೃಹತ್ ಯೋಜನೆಯನ್ನು ಕರ್ನಾಟಕ ಸರಕಾರ ರೂಪಿಸಬೇಕಾಗಿದೆ. ಸಣ್ಣ ಸಣ್ಣ ಕೃತಿಗಳನ್ನು ಬಿಡಿ ಬಿಡಿಯಾಗಿ ಅಚ್ಚಿಸದೆ, ಸೂಕ್ತರೀತಿಯಲ್ಲಿ ವರ್ಗೀಕರಿಸಿ, ಸಂಯುಕ್ತ ಸಂಪುಟಗಳಾಗಿ ಮುದ್ರಿಸುವ ಕೆಲಸ ಕೈಕೊಂಡರೆ ಕೆಲವೇ ಸಂಪುಟಗಳಲ್ಲಿ ಎಲ್ಲ ಕೃತಿಗಳು ಬೆಳಕಿಗೆ ಬರುತ್ತವೆ. ಉದಾ : ಭಾಮಿನೀಷಟ್ಪದಿ ಸಂಪುಟ, ಸಾಂಗತ್ಯಕೃತಿ ಸಂಪುಟ, ವೀರಶೈವ ಲಘುಸಾಹಿತ್ಯ ಸಂಪುಟ, ಜೈನ ಲಘುಸಾಹಿತ್ಯ ಸಂಪುಟ, ವೈದಿಕ ಲಘು ಸಾಹಿತ್ಯ ಸಂಪುಟ – ಹೀಗೆ ಈ ಕೆಲಸವನ್ನು ಪೂರೈಸಬಹುದಾಗಿದೆ. ಕರ್ನಾಟಕದ ಎಲ್ಲ ಸ್ನಾತಕೋತ್ತರ ವಿಭಾಗಗಳು ಈ ಕೆಲಸವನ್ನು ಹಂಚಿಕೊಂಡು ಕಾಲಬದ್ಧ ಯೋಜನೆಯನ್ನು ರೂಪಿಸಿಕೊಳ್ಳಬೇಕು. ಸಾರ್ವಜನಿಕ ವಿದ್ವಾಂಸರನ್ನೂ ಈ ಕಾರ್ಯದಲ್ಲಿ ತೊಡಗಿಸಿಕೊಂಡು ನಾಶವಾಗುವ ಮುನ್ನ ಇವುಗಳನ್ನು ಒಮ್ಮೆ ಮುದ್ರಿಸಿ ತೆಗೆಯುಬೇಕು. ಸಾವಿರಪ್ರತಿಗೆ ಬದಲು ೫೦೦ ಪ್ರತಿಗಳನ್ನಾದರೂ ಮುದ್ರಿಸಬೇಕು.

ಗ್ರಂಥಸಂಪಾದನೆಯ ಜೊತೆ ಮಾಡಬೇಕಾದ ಇನ್ನೊಂದು ಕಾರ್ಯವೆಂದರೆ 'ಪ್ರಶಸ್ತಿಗಳ ಸಂಗ್ರಹ' ಮತ್ತು ಪ್ರಕಟನೆ. ಹಸ್ತಪ್ರತಿಗಳ ಆದಿ ಮತ್ತು ಅಂತ್ಯ ಭಾಗಗಳಲ್ಲಿ ಲಿಪಿಕಾರ ಅನೇಕ ಉಪಯುಕ್ತ ಅಂಶಗಳನ್ನು ದಾಖಲಿಸಿರುತ್ತಾನೆ. ಆಯಾ ಕೃತಿಪರಿಚಯ ತಿಳಿದುಕೊಳ್ಳಲು, ಸಾಹಿತ್ಯಕ – ಧಾರ್ಮಿಕ – ರಾಜಕೀಯ – ಸಾಮಾಜಿಕ ಚರಿತ್ರೆಗಳನ್ನು ಬರೆಯಲು ಇವು ಬೆಲೆಯುಳ್ಳ ಆಕರ ಸಾಮಗ್ರಿಯಾಗಿ ಪರಿಣಮಿಸುತ್ತವೆ. ಉದಾ:

"ಯೀ ಯೇಕೋತ್ತರ ಶತಸ್ಥಲವನೂ ಭಂಡಾರಿ ಜಕ್ಕಂಣಗಳು ಸೇರುವೆಯು ಮಾಡಿದ ದಿನ ಪ್ರಮಾಣವೆಂತೆಂದೊಡೆ ಶಕವರ್ಷ ೧೩೩೪ ವರ್ಷದ ಪ್ರಜೋತ್ಪತ್ತಿ ಸಂವತ್ಸರದ ಕಾರ್ತಿಕ ಬ ೫ ಗುರುವಾರದಲ್ಲೂ ಭಂಡಾರಿ ಜಕ್ಕಂಣಗಳು ಸೇರಿಸಿದ ಯೇಕೋತ್ತರ ಶತಸ್ಥಲ ಸಮಾಪ್ತ...."* ಎಂಬ ಅಂತ್ಯಪ್ರಶಸ್ತಿಯ ಪ್ರಕಾರ

* ಬೆಂಹಸೂ-೪೧.

ಭಂಡಾರಿ ಜಕ್ಕಣ್ಣನು ತನ್ನ ಏಕೋತ್ತರ ಶತಸ್ಥಲಕೃತಿಯನ್ನು ಕ್ರಿ. ಶ. ೧೪೧೨ರಲ್ಲಿ ಪೂರ್ತಿಗೊಳಿಸಿದನೆಂದು ತಿಳಿದುಬರುತ್ತದೆ. ಕವಿಚರಿತೆಕಾರರು ಸು. ೧೪೩೦ ಎಂದು ಕಾಲಸೂಚಿಸಿದ್ದು, ಇಲ್ಲಿ ಅದು ಇನ್ನೂ ನಿರ್ದಿಷ್ಟವಾಗಿ ಗೊತ್ತಾಗುತ್ತದೆ. ಹೀಗೆ ಹಸ್ತಪ್ರತಿಗಳ ಆದಿ- ಅಂತ್ಯಗಳಲ್ಲಿರುವ ಪ್ರಶಸ್ತಿಗಳನ್ನು ಒಂದೆಡೆ ಸಂಗ್ರಹಿಸಿ, ಪ್ರಕಟಿಸುವುದು ಅನೇಕ ದೃಷ್ಟಿಗಳಿಂದ ಉಪಯುಕ್ತವೆನಿಸುತ್ತದೆ.

ಈ ಅಂಶಗಳನ್ನು ಮನಗಂಡು ಜೈನ ಪ್ರಾಕೃತ, ಸಂಸ್ಕೃತ ಹಸ್ತಪ್ರತಿಗಳ ಪ್ರಶಸ್ತಿಗಳನ್ನು ಸಂಗ್ರಹಿಸಿ "ಜೈನ ಪ್ರಶಸ್ತಿಸಂಗ್ರಹ" ಹೆಸರಿನಲ್ಲಿ ಪ್ರಕಟಿಸಿದ್ದಾರೆ. ಈ ಮಾದರಿಯಲ್ಲಿ ಕನ್ನಡದ ಸಮಗ್ರಹಸ್ತಪ್ರತಿಗಳಿಂದ ಪ್ರಶಸ್ತಿಗಳನ್ನು ಆಯ್ದುಕೊಂಡು 'ಪ್ರಶಸ್ತಿಸಂಗ್ರಹ' ಸಂಪುಟಗಳನ್ನು ಪ್ರಕಟಿಸುವುದು ಅವಶ್ಯವಿದೆ.

## ಹಸ್ತಪ್ರತಿ ಭಾಂಡಾರದ ನವೀಕರಣ

ಇಂದು ಜ್ಞಾನದ ರಕ್ಷಣೆ, ಪ್ರಸಾರಗಳಿಗೆ ಯಂತ್ರೋಪಕರಣಗಳ ಸಹಾಯ ಅನಿವಾರ್ಯವಾಗಿದೆ. ಜಗತ್ತಿನ ಬೇರೆ ಬೇರೆ ಹಸ್ತಪ್ರತಿ ಭಾಂಡಾರಗಳು ಈ ಉಪಕರಣಗಳನ್ನು ಬಳಸಿ, ಹಸ್ತಪ್ರತಿಕ್ಷೇತ್ರವನ್ನು ನವೀಕರಣಗೊಳಿಸುತ್ತಿವೆ. ಈ ಸ್ಪರ್ಧೆಯಲ್ಲಿ ಕನ್ನಡಿಗರು ಹಿಂದೆ ಬೀಳಬಾರದು. ಕಾರಣ ಪ್ರತಿಯೊಂದು ಹಸ್ತಪ್ರತಿ ಭಾಂಡಾರಕ್ಕೆ ಝೆರಾಕ್ಸ್, ಫೋಟೋಸ್ಟ್ಯಾಟ್, ಮೈಕ್ರೋಫಿಲ್ಮ್ ಇತ್ಯಾದಿ ಉಪಕರಣಗಳನ್ನು ಕಡ್ಡಾಯವಾಗಿ ಅಳವಡಿಸಬೇಕು. ಗ್ರಂಥಾಲಯದ ಸ್ವಪ್ರಯೋಜನಕ್ಕಾಗಿ ಮತ್ತು ವಿದ್ವಾಂಸರ ಪರಪ್ರಯೋಜನಕ್ಕಾಗಿ ಇವುಗಳನ್ನು ಸ್ಥಾಪಿಸಬೇಕು.

ಮುದ್ರಿತ ಗ್ರಂಥಗಳ ಭಾಂಡಾರ ತನ್ನ ದುಸ್ಥಿತಿಯನ್ನು ನೀಗಿಕೊಂಡು ಇಂದು ಜಾಗತಿಕ ಪ್ರತಿಷ್ಠೆಯನ್ನು ಪಡೆದಿದೆ. ಇದೇ ರೀತಿ ಹಸ್ತಪ್ರತಿಭಾಂಡಾರಗಳಿಗೂ ಅಲ್ಲಿ ದುಡಿಯುವ ಸಿಬ್ಬಂದಿಗೂ ಪ್ರತಿಷ್ಠೆ ಪ್ರಾಪ್ತವಾಗಬೇಕಾಗಿದೆ. ಇದು ಸಾಧ್ಯವಾಗಬೇಕಾದರೆ ಅದರ ಒಟ್ಟು ವ್ಯವಸ್ಥೆಯ ನವೀಕರಣ (Modernization) ಅಗತ್ಯ. ಅಂದರೆ ಹಸ್ತಪ್ರತಿ ಭಾಂಡಾರದ ಪೀಠೋಪಕರಣ ವ್ಯವಸ್ಥೆ, ಆಧುನಿಕ ಯಂತ್ರೋಪಕರಣಗಳ ಅಳವಡಿಕೆ, ವೈಜ್ಞಾನಿಕ ವಿಧಾನ ಮೊದಲಾದುವು ಇಲ್ಲಿ ನೆಲೆಗೊಳ್ಳಬೇಕು.

ಮುದ್ರಿತ ಗ್ರಂಥಭಾಂಡಾರದಲ್ಲಿ ಪುಸ್ತಕಗಳ ಸಂಖ್ಯಾಪ್ರಮಾಣಕ್ಕನುಸಾರವಾಗಿ ಸಿಬ್ಬಂದಿಯನ್ನು ನೇಮಿಸುವ ರೂಢಿಯಿದೆ. ಅಂಥದೇ ರೂಢಿ ಇಲ್ಲಿಯೂ ಪ್ರಾರಂಭವಾಗಬೇಕು; ಸಿಬ್ಬಂದಿಯ ವೇತನಶ್ರೇಣಿಯೂ ಸುಧಾರಣೆ ಹೊಂದಬೇಕು.

ಯಾವುದೇ ಜ್ಞಾನಸಂಪತ್ತು ಜನಾಭಿಮುಖಿಯಾದಾಗ ಮಾತ್ರ ಅದಕ್ಕೆ ಗೌರವ-ಪ್ರತಿಷ್ಠೆ-ನವೀಕರಣ ಪ್ರಾಪ್ತವಾಗುತ್ತದೆ. ಈ ದೃಷ್ಟಿಯಿಂದ ಹಸ್ತಪ್ರತಿಗಳ ಬಗ್ಗೆ ಆಗಾಗ ಸಾರ್ವಜನಿಕ ವಿಚಾರಸಂಕಿರಣ, ಉಪನ್ಯಾಸ ಏರ್ಪಡಿಸಬೇಕು. ಇದರಿಂದ ಬಹುಸಂಖ್ಯೆ ಸಹೃದಯರನ್ನು ಒಳಗೊಂಡು, ಅದು ಜನರ ನಡುವೆ ಜೀವಂತ ಜ್ಞಾನಶಾಖೆಯಾಗಿ ಬೆಳೆಯುತ್ತದೆ.

## ಹಸ್ತಪ್ರತಿ ಅಧ್ಯಯನ ತರಬೇತಿ

ಪ್ರಾಚೀನಕಾಲದಲ್ಲಿ ಬುದ್ಧಿಜೀವಿಗಳಿಗೆ ಹಸ್ತಪ್ರತಿಗಳೇ ಪ್ರಧಾನ ವಾಚನ ಮಾಧ್ಯಮವಾಗಿದ್ದವು. ಬಾಲ್ಯದಿಂದಲೂ ಅವುಗಳ ವಾಚನದಲ್ಲಿ ತೊಡಗಿಕೊಂಡ ವ್ಯಕ್ತಿಗೆ ಅಲ್ಲಿಯ ಅಕ್ಷರ, ಭಾಷೆ, ವಿನ್ಯಾಸಗಳೆಲ್ಲ ಪರಿಚಿತವಾಗಿದ್ದವು. ಇಂದು ಬಾಲ್ಯದಿಂದಲೂ ಯಂತ್ರಪ್ರತಿಗಳನ್ನು ಓದುವ ವ್ಯಕ್ತಿಗೆ ಹಸ್ತಪ್ರತಿಯ ಲಿಪಿ, ಭಾಷೆ, ವಿನ್ಯಾಸಗಳೆಲ್ಲ ಪರಕೀಯವೆನಿಸುವುದು ಸಹಜ. ಇವನ್ನು ತಿಳಿದುಕೊಳ್ಳಬೇಕೆಂದರೆ ಅವನು ಪ್ರಯತ್ನ ಪೂರ್ವಕವಾಗಿ ಈ ಹೊತ್ತಗೆಗಳ ಅಧ್ಯಯನವನ್ನು ರೂಢಿಸಿಕೊಳ್ಳಬೇಕಾಗುತ್ತದೆ. ಹೀಗೆ ರೂಢಿಸಿಕೊಳ್ಳುವ ಅವಶ್ಯಕತೆಯೇ ಇಲ್ಲವೆನ್ನುವಷ್ಟು ಅನ್ಯ ಅವಕಾಶಗಳು ತೆರೆದುಕೊಂಡಿರುವಾಗ, ಅವನು ಇವುಗಳ ಕಡೆಗೆ ಹೊರಳಿ ನೋಡದಿರುವುದು ಸಹಜವೇ ಆಗಿದೆ. ಇಂಥ ಸಂದರ್ಭದಲ್ಲಿ ಪ್ರೌಢ ವಿದ್ಯಾರ್ಥಿದೆಸೆಯಿಂದಲೇ ಹಸ್ತಪ್ರತಿ ಅಧ್ಯಯನದ ತರಬೇತಿ ನೀಡುವ ವ್ಯವಸ್ಥೆ ನಮ್ಮ ಶಿಕ್ಷಣಕ್ರಮದಲ್ಲಿ ಅಳವಡಿಸುವುದು ಸೂಕ್ತವಾಗಿದೆ. ಈಗ ಸ್ನಾತಕೋತ್ತರವರ್ಗದಲ್ಲಿ ಗ್ರಂಥಸಂಪಾದನಶಾಸ್ತ್ರದ ಭಾಗವಾಗಿ ಹಸ್ತಪ್ರತಿಶಾಸ್ತ್ರವನ್ನು ಬೋಧಿಸಲಾಗುತ್ತಿದ್ದರೂ, ಕೇವಲ ತಾತ್ವಿಕ ಬೋಧನೆಗೆ ಅಲ್ಲಿ ಅವಕಾಶವಿದೆ. ಇನ್ನುಮೇಲೆ ವಾಚನ-ಸಂಪಾದನ ತರಬೇತಿರೂಪದ ಅಧ್ಯಯನಕ್ಕೂ ಅವಕಾಶ ಕಲ್ಪಿಸಬೇಕಾಗಿದೆ. ಇದಲ್ಲದೆ ಹಸ್ತಪ್ರತಿ, ಶಾಸನ, ದಾಖಲುಗಳ ತಾತ್ವಿಕ-ಆನ್ವಯಿಕ ಅಧ್ಯಯನಕ್ಕಾಗಿ 'ಪ್ರಾಚ್ಯಲೇಖ ಅಧ್ಯಯನ ಡಿಪ್ಲೋಮಾ' ಹೆಸರಿನ ಕೋರ್ಸ್ ಪ್ರಾರಂಭಿಸಿದರೆ ಪ್ರಾಚೀನಕಾಲದ ಯಾವುದೇ ರೂಪದ ಬರವಣಿಗೆಯನ್ನು ಓದುವವರ ಒಂದು ತಂಡವನ್ನೇ ಪ್ರತಿವರ್ಷ ಸಿದ್ಧಪಡಿಸಿದಂತಾಗುತ್ತದೆ. ಹೀಗೆ ಮಾಡದಿದ್ದರೆ ಕರ್ನಾಟಕದ ೪೦,೦೦೦ ಹಸ್ತಪ್ರತಿ ಕಟ್ಟು ೨೫,೦೦೦ ಶಾಸನ, ಅಸಂಖ್ಯಾತ ದಾಖಲುಗಳು ವಾಚನವಿದೂರವಾಗುವ ಬಹುದೊಡ್ಡ ಭಯ ನಮ್ಮ ಮುಂದೆ ಸೃಷ್ಟಿಯಾಗಬಹುದಾಗಿದೆ. ಇದನ್ನು ತಪ್ಪಿಸುವುದಕ್ಕಾಗಿ ಈ ಬಗೆಯ ಬೋಧನ ವ್ಯವಸ್ಥೆಯನ್ನು ತೀವ್ರ ಅಸ್ತಿತ್ವಕ್ಕೆ ತರಬೇಕಾಗಿದೆ.

## ರಾಜ್ಯ ಹಸ್ತಪ್ರತಿ ಇಲಾಖೆಯ ಸ್ಥಾಪನೆ

'ಓರಿಯಂಟಲ್ ಸ್ಟಡೀಸ್' ಹೆಸರಿನಲ್ಲಿ ಇನ್ನೂರು ವರ್ಷಗಳ ಹಿಂದೆಯೇ ನಮ್ಮಲ್ಲಿ ಪ್ರಾಚ್ಯ ಅಧ್ಯಯನ ಚಟುವಟಿಕೆ ತೆರೆದುಕೊಂಡಿತು. ಈ ಅಧ್ಯಯನದ ಪರಿಧಿಯಲ್ಲಿ 'ಪುರಾತತ್ವ ಇಲಾಖೆ' (Department of Archeology) ಹೆಸರಿನ ಇಲಾಖೆ ಶಾಸನ – ಹಸ್ತಪ್ರತಿಗಳ ಶೋಧ ಮತ್ತು ಅವಶೇಷಗಳ ಉತ್ಖನನಗಳಿಗಾಗಿ ಮೈಸೂರಿನಲ್ಲಿ ಹುಟ್ಟಿಕೊಂಡಿತು (೧೮೮೪). ಮುಂದೆ ಕೆಲವೇ ದಿನಗಳಲ್ಲಿ ಇದರಿಂದ ಪ್ರತ್ಯೇಕಗೊಂಡು, 'ಸರಕಾರಿ ಪ್ರಾಚ್ಯ ಸಂಶೋಧನಾಲಯ' (Government Oriental Research Institute) ಹೆಸರಿನ ಸಂಶೋಧನಸಂಸ್ಥೆ ಅಸ್ತಿತ್ವಕ್ಕೆ

ಬಂದಿತು (೧೯೯೧). ಇವುಗಳಲ್ಲಿ 'ಪುರಾತತ್ವ ಇಲಾಖೆ' ರಾಜ್ಯದ ತುಂಬ ತನ್ನ ಶಾ
ಗಳನ್ನು ಪ್ರಾರಂಭಿಸಿ ನೇರವಾಗಿ ಸರಕಾರದ ಆಡಳಿತಕ್ಕೆ ಒಳಪಟ್ಟು ಬೆಳೆದರೆ, 'ಪ್ರಾಚ
ಸಂಶೋಧನ ಸಂಸ್ಥೆ' ಸರಕಾರದಿಂದ ಅನುದಾನ ಪಡೆಯುವ ಒಂದು ಸಂಸ್ಥೆಯಾ
ಉಳಿಯಿತು. ೧೯೧೭ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಭಾಗವಾಗಿಬಿಟ್ಟಿತು
೧೯೬೬ರಲ್ಲಿ ತನ್ನಲ್ಲಿರುವ ಕನ್ನಡ ಹಸ್ತಪ್ರತಿಗಳನ್ನು ಕನ್ನಡ ಅಧ್ಯಯನ ಸಂಸ್ಥೆ
ನೀಡಿ ಅರ್ಧಶಕ್ತಿಯ ಸಂಸ್ಥೆಯಾಯಿತು. ಇದೇ ರೀತಿ ಉತ್ತರ ಕರ್ನಾಟಕದ
೧೯೩೯ರಲ್ಲಿ ಹುಟ್ಟಿದ ಮುಂಬೈ-ಕರ್ನಾಟಕ ಸರಕಾರದ 'ಕನ್ನಡ ಸಂಶೋಧ
ಸಂಸ್ಥೆ'ಯು ಮುಂದೆ ೧೯೫೦ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಭಾಗವಾಗಿ
೧೯೭೨ರಲ್ಲಿ ತನ್ನ ಎಲ್ಲ ಹಸ್ತಪ್ರತಿಗಳನ್ನು ಕನ್ನಡ ಅಧ್ಯಯನ ಪೀಠಕ್ಕೆ ವರ್ಗಾಯಿಸಿತು

ಹೀಗಾಗಿ ಹಸ್ತಪ್ರತಿಗಳ ಸಂಗ್ರಹ, ಸಂರಕ್ಷಣೆ, ಸಂಪಾದನ ಕೆಲಸಗಳು ರಾಜ್ಯ
ಸರಕಾರದ ನೇರ ಹೊಣೆಯಾಗದೆ ಮೈಸೂರಿನ ಸರಕಾರಿ ಪ್ರಾಚ್ಯ ಸಂಶೋಧ
ನಾಲಯದ, ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯ ಮತ್ತು ರಾಜ್ಯದ
ಸ್ನಾತಕೋತ್ತರ ಕನ್ನಡ ವಿಭಾಗಗಳ ಹೊಣೆಯಾಗಿಬಿಟ್ಟಿತು. ಈಗಲಾದರೂ 'ರಾಜ್ಯ
ಪುರಾತತ್ವ ಇಲಾಖೆ'ಯಂತೆ 'ರಾಜ್ಯ ಹಸ್ತಪ್ರತಿ ಇಲಾಖೆ'ಯೊಂದು ಅಸ್ತಿತ್ವಕ್ಕೆ
ಬಂದು, ಕನಿಷ್ಠ ಪಕ್ಷ ರಾಜ್ಯದ ಆಡಳಿತ ವಿಭಾಗಕ್ಕೆ (Administrative Division)
ಒಂದರಂತೆ ಶಾಖೆಗಳನ್ನು ತೆರೆಯಬೇಕಾಗಿದೆ; ಈ ವಿಭಾಗಗಳು ತಮ್ಮ ಪ್ರದೇಶದಲ್ಲಿ
ಮತ್ತು ತಮಗೆ ಹೊಂದಿಕೊಂಡಿರುವ ಹೊರನಾಡುಗಳಲ್ಲಿ ಹಸ್ತಪ್ರತಿ ಸಂಗ್ರಹಕಾರ್ಯ
ವನ್ನು ನಡೆಸಿ, ಅವುಗಳ ರಕ್ಷಣೆ, ಸಂಸ್ಕರಣ, ಪ್ರಕಟಣೆ ಇತ್ಯಾದಿ ಕೆಲಸಗಳನ್ನು
ಮುಂದುವರಿಸುವುದು ಅವಶ್ಯವಿದೆ.

'ಪುರಾತತ್ವ ಇಲಾಖೆ'ಯ ಮಾದರಿಯಲ್ಲಿ 'ರಾಜ್ಯ ಪತ್ರಾಗಾರ ಇಲಾಖೆ'
ಯನ್ನು ಸ್ಥಾಪಿಸಿದ ಕರ್ನಾಟಕ ಸರಕಾರ, 'ರಾಜ್ಯ ಹಸ್ತಪ್ರತಿ ಇಲಾಖೆ'ಯನ್ನೂ
ಸ್ಥಾಪಿಸಿದರೆ ಪ್ರಾಚ್ಯ ಲೇಖನಕ್ಷೇತ್ರದ ವರ್ತುಲ ಪೂರ್ಣವಾಗುತ್ತದೆ. ಈ ಪೂರ್ಣತೆ
ಗಾಗಿ ಅಂಥ ಹೊಸ ಇಲಾಖೆಯೊಂದು ಅಸ್ತಿತ್ವಕ್ಕೆ ಬರುವ ದಿಸೆಯಲ್ಲಿ ಎಲ್ಲ ಕನ್ನಡಿಗರು
ಪ್ರಯತ್ನಿಸಬೇಕಾಗಿದೆ.



ಡಾ॥ ಎಂ. ಎಂ. ಕಲಬುರ್ಗಿಯವರು ನಾಡಿನ ಶ್ರೇಷ್ಠ ಸಂಶೋಧಕರು. ಅವರದು ಬಹುಮುಖಿಯಾದ ಹವ್ಯಾಸ. ವ್ಯಾಕರಣ, ಛಂದಸ್ಸು, ಶಾಸನ, ಗ್ರಂಥಸಂಪಾದನೆ, ಜನಪದ, ಚರಿತ್ರೆ, ಸಂಸ್ಕೃತಿ, ನಾಮವಿಜ್ಞಾನ–ಹೀಗೆ ವೈವಿಧ್ಯಮಯವಾದುದು. 'ಮಾರ್ಗ' ಸಂಪುಟ ೧ ಮತ್ತು ೨ ಅವರ ಸಂಶೋಧನಾಸಕ್ತಿಯ ವಿವಿಧ ಮಗ್ಗಲುಗಳ ಪರಿಚಯವನ್ನು ಸೊಗಸಾಗಿ ಮಾಡಿ ಕೊಡುತ್ತವೆ. ಅಂತರ್‌ಶಿಸ್ತೀಯ ಅಧ್ಯಯನದಿಂದಾಗಿ ಯಾವುದೇ ವಿಷಯದ ಎದ್ದು ಕಾಣುವ ಬಾಗಿಲುಗಳನ್ನಲ್ಲದೆ, ಉಪೇಕ್ಷಿತ ಬಾಗಿಲುಗಳನ್ನೂ ತೆರೆಯುವ ರೀತಿಗಳು ಅವರಿಗೆ ತಿಳಿದಿವೆ. 'ಕನ್ನಡ ಗ್ರಂಥಸಂಪಾದನಾಶಾಸ್ತ್ರ', 'ಕನ್ನಡ ಸಂಶೋಧನ ಶಾಸ್ತ್ರ'ಗಳಂತೆ 'ಕನ್ನಡ ಹಸ್ತಪ್ರತಿ ಶಾಸ್ತ್ರ'ವೂ ಈ ಮಾಲಿಕೆಯಲ್ಲಿ ಬಂದ ಶ್ರೇಷ್ಠಕೃತಿ.

ಹಸ್ತಪ್ರತಿಗಳು ನಾಡಿನ ಸಾಹಿತ್ಯ ಸಂಸ್ಕೃತಿಗಳ ಅಧ್ಯಯನಕ್ಕೆ ಅಮೂಲ್ಯ ಆಕರಗಳು. ಇವುಗಳ ಅಧ್ಯಯನ ಒಂದು ಶಾಸ್ತ್ರವಾಗಿ ಇಂದು ಪರಿಗಣಿತ ವಾಗಿದೆ. ಕನ್ನಡಿಗರೇ ಸೃಷ್ಟಿಸಿರುವ 'Manuscriptology' ಎಂಬ ಇಂಗ್ಲಿಷ್ ಪದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ 'ಹಸ್ತಪ್ರತಿ ಶಾಸ್ತ್ರ' ಬಳಕೆಗೊಂಡಿದೆ. ಹಸ್ತಪ್ರತಿಗಳನ್ನು ಕುರಿತು ಎಚ್. ದೇವೀರಪ್ಪ, ಬಿ. ಎಸ್. ಸಣ್ಣಯ್ಯ, ಡಾ॥ ಬಿ. ಕೆ. ಹಿರೇಮಠ ಮೊದಲಾದವರು ಗ್ರಂಥ ರಚಿಸಿರುವರು. ಆದರೆ ಡಾ॥ ಎಂ. ಎಂ. ಕಲಬುರ್ಗಿಯವರ 'ಕನ್ನಡ ಹಸ್ತಪ್ರತಿಶಾಸ್ತ್ರ' ಈ ವಿಷಯ ವನ್ನು ಶಾಸ್ತ್ರ ಚೌಕಟ್ಟಿಗೆ ಅಳವಡಿಸಿದ ಪ್ರಥಮ ಕೃತಿಯಾಗಿದೆ.